ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಎಸ್.ಆರ್.ಬೊಮ್ಮಾಯಿ

ಚಂದ್ರಶೇಖರ ಬೆಳಗೆರೆ

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**S.R. BOMMAI**
Eminent Parliamentarian Series
Written by **Chandrashekhara Belagere**
**Writer, Jagrutti Shikshana Samsthe**
**Gollahalli, Hiriyur, Chitradurga Dist.**
**Published** by
Karnataka Legislature Library Committee
Vidhana Soudha, Bangalore - 560 001
Page: xi+253 Price: 20-00 Rs.

First Edition: 2010 Copies: 2000
**Printed & Designed by**
Government Press, Bangalore.

**ಎಸ್.ಆರ್. ಬೊಮ್ಮಾಯಿ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
**ಲೇಖಕರು: ಚಂದ್ರಶೇಖರ ಬೆಳಗೆರೆ**
ಲೇಖಕರು, ಜಾಗೃತಿ ಶಿಕ್ಷಣ ಸಂಸ್ಥೆ,
ಗೊಲ್ಲಹಳ್ಳಿ, ಹಿರಿಯೂರು, ಚಿತ್ರದುರ್ಗ (ಜಿ)
**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು – 560 001
ಪುಟ: xi+253 ಬೆಲೆ: 20/– ರೂ.

ಮೊದಲ ಮುದ್ರಣ: 2010 ಪ್ರತಿಗಳು: 2,000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

WD 1347 - 1 ×

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2009 – 2010

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಕೆ.ಜಿ. ಬೋಪಯ್ಯ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಶ್ರೀ ಜಿ. ಸೋಮಶೇಖರ ರೆಡ್ಡಿ**

ವಿಧಾನಸಭಾ ಸದಸ್ಯರು

**ಶ್ರೀ ಸುರೇಶ್‌ಗೌಡ**

ವಿಧಾನಸಭಾ ಸದಸ್ಯರು

**ಶ್ರೀ ಸಾ.ರಾ. ಮಹೇಶ್**

ವಿಧಾನಸಭಾ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ॥ ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

**ಪ್ರೊ॥ ಪಿ.ವಿ. ಕೃಷ್ಣಭಟ್ಟ**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

ಹೆಚ್.ಎಂ. ಭಾರತೇಶ್ ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ |
| ಎಂ. ಮಂಜುನಾಥ | ಜಂಟಿ ಕಾರ್ಯದರ್ಶಿ |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಅನಸೂಯ ಎನ್.ದೇವಗಿರಿ | ಮುಖ್ಯ ಗ್ರಂಥಪಾಲಕಿ (ಪ್ರ) |
| ಎಂ. ಮೋಹನ್ | ಶಾಖಾಧಿಕಾರಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

### ಸಂಪಾದಕರು

ಡಾ. ಮಲ್ಲಿಕಾರ್ಜುನ ಎಂ.ಸಿ

# ಮುನ್ನುಡಿ

**12ನೇ ಏಪ್ರಿಲ್ 2010**

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ,

ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಚಂದ್ರಶೇಖರ ಬೆಳಗೆರೆ ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಎಸ್.ಆರ್. ಬೊಮ್ಮಾಯಿ ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಕೆ.ಜಿ. ಬೋಪಯ್ಯ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಕುಂದಗೋಳ ತಾಲೂಕಿನ ಕಮಡೊಳ್ಳಿಯಿಂದ ನವದೆಹಲಿಯವರಿಗೆ ಸಾಗಿಬಂದ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಸೋಮಪ್ಪ ರಾಯಪ್ಪ ಬೊಮ್ಮಾಯಿ ಅವರ ರಾಜಕೀಯ ಬದುಕು ಹರಿಯುವ ನದಿಯಂತೆ ಗೋಚರಿಸುತ್ತದೆ. ನದಿ ತನ್ನ ಹರಿವಿನುದ್ದಕ್ಕೂ ನೂರಾರು ನೀರಿನ ಒರೆತೆಗಳನ್ನು ಮತ್ತು ಹೊಸ ನಾಗರಿಕತೆಯನ್ನು ಹುಟ್ಟಿಹಾಕುತ್ತಾ ಬಂದಂತೆ ಬೊಮ್ಮಾಯಿ ಅವರು ತಮ್ಮ ಬದುಕಿನುದ್ದಕ್ಕೂ ನೂರಾರು ನಾಯಕರನ್ನು, ಹೊಸ ರಾಜಕೀಯ ಆಲೋಚನೆಗಳನ್ನು ಸೃಷ್ಟಿಸಿದ್ದಾರೆ.

ರಾಜಪ್ರಭುತ್ವ, ಸ್ವಾತಂತ್ರ್ಯಹೋರಾಟ, ಏಕೀಕರಣ, ಗೋವಾ ವಿಮೋಚನೆ, ಭೂ ಸುಧಾರಣೆ, ದಲಿತ–ರೈತ ಮತ್ತು ಭಾಷಾ ಚಳವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಬೊಮ್ಮಾಯಿ ಅವರು ಕರ್ನಾಟಕದ ಜನಪರ ಹೋರಾಟಗಾರರಾಗಿ ಬಿಂಬಿತವಾಗುತ್ತಾರೆ. ಮುಂದೆ ಅಧಿಕಾರಾವಧಿಯಲ್ಲಿ ಜನಪರ ಚಿಂತನೆಗಳನ್ನು ಅನುಷ್ಠಾನಕ್ಕೆ ತರುವಾಗ ದಕ್ಷ ಆಡಳಿತಗಾರರಂತೆ ಗೋಚರಿಸುತ್ತಾರೆ. ಅಭಿವೃದ್ಧಿಯ ಹರಿಕಾರರಾಗಿ ಪರಿಚಯವಾಗುತ್ತಾರೆ. ಇದಾದ ನಂತರ, ಭಾರತದ ರಾಜಕೀಯ ಚಲನೆಯಲ್ಲಿ ಸಂಚಲನವಾಗಿ ಕೆಲಸ ಮಾಡುತ್ತಾರೆ. ಹೀಗಾಗಿ ಬೊಮ್ಮಾಯಿ ರಾಷ್ಟ್ರದ ರಾಜಕೀಯ ಇತಿಹಾಸದಲ್ಲಿ ಚಿರನೂತನ ಆಗಿದ್ದಾರೆ.

ಬೊಮ್ಮಾಯಿ ಅವರ ಬಳಿ ಕುಳಿತು ಅವರ ಬದುಕಿನ ಪ್ರಮುಖ ಘಟ್ಟಗಳನ್ನು ದಾಖಲಿಸುತ್ತಾ ಹೋದಾಗ ನನ್ನ ಮನಸ್ಸು ಕರ್ನಾಟಕದ ಎಲ್ಲ ಕಾಲಘಟ್ಟಗಳಲ್ಲಿ ಹಾದು ಬಂದಷ್ಟು ಅನುಭವ ಪಡೆಯಿತು. ದೊಡ್ಡ ವ್ಯಕ್ತಿಗಳ ಜೀವನ ಕುರಿತು ಬರೆಯುವ ಕೆಲಸದಿಂದ ನನ್ನ ಅನುಭವ ಕೂಡ ಒಂದಿಷ್ಟು ಗಟ್ಟಿಗೊಂಡಿತಷ್ಟೇ ಅಲ್ಲದೆ ಜ್ಞಾನದ ಪರಿಧಿಯನ್ನು ವಿಸ್ತರಿಸಿತು. ಈ ಪುಸ್ತಕ ಬರಹ ನನಗೆ ಸಮಾಜವನ್ನು ಅವಲೋಕಿಸುವ ಒಂದು ಹೊಸ ಒಳನೋಟವನ್ನು ಕಲಿಸಿತು.

ಈ ಅಪೂರ್ವ ಅವಕಾಶ ಕಲ್ಪಿಸಿದ್ದಕ್ಕಾಗಿ ಹಿರಿಯರಾದ ಮಾನ್ಯ ಸಚಿವರಾದ ಶ್ರೀ ಬಸವರಾಜ ಬೊಮ್ಮಾಯಿ, ಶ್ರೀಮಲ್ಲಿಕಾರ್ಜುನ ಬೊಮ್ಮಾಯಿ ಹಾಗೂ ಬೊಮ್ಮಾಯಿ ಕುಟುಂಬದ ಎಲ್ಲ ಸದಸ್ಯರಿಗೆ ನಾನು ಆಭಾರಿ.

ಈ ಪುಸ್ತಕ ಹೊರಬರಲು ಸಹಕರಿಸಿದ ವಿಧಾನಮಂಡಲದ ಎಲ್ಲಾ ಸಿಬ್ಬಂದಿಗೆ ಹಾಗೂ ಸಹಕರಿಸಿ ಪ್ರೋತ್ಸಾಹಿಸಿದ ಸ್ನೇಹಿತರಿಗೆ ವಂದನೆಗಳು.

**–ಚಂದ್ರಶೇಖರ ಬೆಳಗೆರೆ**

**ದಿನಾಂಕ: 25ನೇ ಮಾರ್ಚ್ 2010**

# ಪರಿವಿಡಿ

ಮುನ್ನುಡಿ V & VI
ಲೇಖಕರ ಮಾತು VII

## ಭಾಗ – ೧

1. ವ್ಯಕ್ತಿ–ವ್ಯಕ್ತಿತ್ವ – 3
2. ಬಾಲ್ಯ–ಶಿಕ್ಷಣ–ಕುಟುಂಬ – 5
3. ರಾಜಕೀಯ ರಂಗ ಪ್ರವೇಶ – 7
4. ರಾಜಕೀಯ ಧ್ರುವೀಕರಣದ ನೇತಾರ – 13
5. ಅಭೂತ ಪೂರ್ವ ಜಯ – 15
6. ಸಮರ್ಥ ಸಚಿವ – 17
7. ಮುಖ್ಯಮಂತ್ರಿಯ ಗದ್ದುಗೆಗೆ – 19
8. ಮುಖ್ಯಮಂತ್ರಿಯ ದಿಟ್ಟ ನಿಲುವುಗಳು – 21
9. ರಾಷ್ಟ್ರಪತಿ ಆಡಳಿತ–ಐತಿಹಾಸಿಕ ತೀರ್ಪು – 23
10. ಕೇಂದ್ರ ಮಾನವ ಸಂಪನ್ಮೂಲ ಸಚಿವ – 25
11. ಏಕೀಕರಣ ಪ್ರಶಸ್ತಿ – 29
12. ಕೊನೆಯ ನೆಮ್ಮದಿ ದಿನಗಳು – 30

## ಭಾಗ – ೨

### ಸದನದ ಭಾಷಣಗಳು

1. ಸದನದ ಗಮನ ಸೆಳೆದ ಬರಗಾಲದ ಗಂಭೀರತೆ – 35
2. ನಾಡಿನ ಹಿತರಕಣೆ ರಾಜಕೀಯ ಲಾಭಕ್ಕಿಂತ ಮುಖ್ಯ – 40

3. ಕಾನೂನು ಸುವ್ಯವಸ್ಥೆ ಎಂಬ ಸೂಕ್ಷ್ಮತೆ – 47
4. ರೈತರ ಬಗ್ಗೆ ಬೇರುಮಟ್ಟದ ಆಲೋಚನೆ – 55
5. ಬಜೆಟ್ ಮೇಲಿನ ಚರ್ಚೆ – 74
6. ಕೈಗಾರಿಕಾ ಉದ್ಯಮಗಳ ಮೇಲಿನ ಚರ್ಚೆ – 81
7. ರಾಜ್ಯ ಯೋಜನೆಗಳ ಮೇಲಿನ ಚರ್ಚೆ – 89
8. ಕಾರ್ಪೋರೇಷನ್ ಆರ್ಥಿಕ ವ್ಯವಸ್ಥೆ ಕುರಿತು ಚರ್ಚೆ – 92
9. ಸಾರಿಗೆ ವ್ಯವಸ್ಥೆಯನ್ನು ರಾಷ್ಟ್ರೀಕರಣ ಮಾಡಿ – 102
10. ಭೂಸುಧಾರಣೆ ಮೇಲಿನ ಚರ್ಚೆ – 106
11. ನೀರಾವರಿ ಯೋಜನೆ ಮೇಲಿನ ಚರ್ಚೆ – 114
12. 1979ನೇ ಸಾಲಿನ ಬಜೆಟ್ ಮೇಲಿನ ಚರ್ಚೆ – 124
13. ನಿರುದ್ಯೋಗ ಸಮಸ್ಯೆ ಕುರಿತು – 139
14 ಬಡವರಿಗೆ ನಿವೇಶನ ಹಂಚಿಕೆ – 143
15. ಪ್ರಾಥಮಿಕ ಶಿಕ್ಷಣ ಸುಧಾರಣೆ – 147
16 ಕೊಳಚೆ ಪ್ರದೇಶದ ಸಮಸ್ಯೆ – 152
17 ನರಗುಂದ ನವಲುಗುಂದ ಗೋಲಿಬಾರ್ – 156
18 ಕಂದಾಯ ಮತ್ತು ಕೃಷಿ ಇಲಾಖೆ – 166
19. ರಾಜ್ಯವನ್ನು ಕಾಡಿದ ಬರ ಪರಿಸ್ಥಿತಿ – 173
20. ನೀರಾವರಿ ಇಲಾಖೆ – 176
21. ಕಂದಾಯ ಇಲಾಖೆ – 189
22. ನೀರಿನ ಸಮಸ್ಯೆ ಕುರಿತು ಮುಖ್ಯಮಂತ್ರಿಗಳ ಕಳಕಳಿ – 197

## ಭಾಗ – ೩

## ಸದನದಲ್ಲಿ ಸಂತಾಪ

1. ಶ್ರೀ ಬಿ.ಎಸ್. ಯಡಿಯೂರಪ್ಪನವರು,
ಉಪ ಮುಖ್ಯಮಂತ್ರಿಗಳು – 203
2. ಶ್ರೀ ಎನ್. ಧರಂಸಿಂಗ್ – 204
3. ಶ್ರೀ ಸಿದ್ದರಾಮಯ್ಯ – 205
4. ಶ್ರೀ ಎಂ.ಪಿ.ಪ್ರಕಾಶ್ – 207
5. ಶ್ರೀ ಪಿ.ಜಿ.ಆರ್.ಸಿಂಧ್ಯಾ – 210
6. ಶ್ರೀ ಬಿ.ಆರ್.ಪಾಟೀಲ್ – 214

## ಭಾಗ – ೪

## ಪತ್ರಿಕಾ ಲೇಖನಗಳು

1. ಹಳೆಯ ಗೆಳೆಯ ಬೊಮ್ಮಾಯಿ –
ಜಿ.ಎಸ್. ಆಮೂರ – 219
2. ಶ್ರೇಷ್ಠ ರಾಜಕಾರಣಿ – ಕೆ.ವಿ. ವಾಸು – 223

## ಭಾಗ – ೫

ಶ್ರೀ ಎಸ್.ಆರ್. ಬೊಮ್ಮಾಯಿಯವರ ಚಿತ್ರಮಾಲಿಕೆ – 227

# ಲೇಖಕರ ಪರಿಚಯ

# ಚಂದ್ರಶೇಖರ ಬೆಳಗೆರೆ

ಪತ್ರಿಕೋದ್ಯಮದಲ್ಲಿ ಎಂ.ಎ. ಮಾಡಿರುವ ಚಂದ್ರಶೇಖರ ಬೆಳಗೆರೆ ಸುದ್ದಿ ಸಂಗಾತಿ, ಲಂಕೇಶ್ ಪತ್ರಿಕೆ, ಸಂಯುಕ್ತ ಕರ್ನಾಟಕ, ಕನ್ನಡ ಪ್ರಭ ದಿನಪತ್ರಿಕೆಗಳಲ್ಲಿ ವರದಿಗಾರರಾಗಿ ಉಪ ಸಂಪಾದಕರಾಗಿ ಕೆಲಸ ಮಾಡಿದ್ದಾರೆ. ರಾಜ್ಯದ ಪ್ರಮುಖ ಪತ್ರಿಕೆಗಳಲ್ಲಿ ನೂರಾರು ಲೇಖನಗಳನ್ನು ಬರೆದಿದ್ದಾರೆ.

ಉದಯ ಟಿವಿಯಲ್ಲಿ ಮುಖ್ಯ ಉಪ ಸಂಪಾದಕರಾಗಿ ಕೆಲಸ ಮಾಡಿದ್ದಾರೆ.

'ರಾಯಿಸ್ಟ್ ಬೊಮ್ಮಾಯಿ' ಕೃತಿಯ ಲೇಖಕರಾಗಿರುವ ಇವರು ಪ್ರಗತಿಪರ ಓದುಗ, ಬರಹಗಾರ ಹಾಗೂ ಕಥೆಗಾರರೂ ಹೌದು.

ದೂರದರ್ಶನದಲ್ಲಿ ಸುತ್ತೋಣ ನಮ್ಮ ನಾಡು ಪ್ರವಾಸಿ ಧಾರಾವಾಹಿಯ ನೂರಾರು ಕಂತುಗಳಿಗೆ ನಿರೂಪಣಾ ಸಾಹಿತ್ಯ ಬರೆದಿದ್ದಾರೆ. ಮೈಸೂರಿನಲ್ಲಿ ಭಾರತೀಯ ಭಾಷಾ ಸಂಸ್ಥಾನದ ವತಿಯಿಂದ 'ಕನ್ನಡ ಪತ್ರಿಕೋದ್ಯಮ' ಮತ್ತು ಚನ್ನಪಟ್ಟಣ ಗೊಂಬೆ ಕುರಿತ ಕಿರು ಚಿತ್ರಗಳನ್ನು ನಿರ್ಮಿಸಿದ್ದಾರೆ.

ನೂರಾರು ಸಾಕ್ಷ್ಯ ಚಿತ್ರಗಳಿಗೆ ಸಾಹಿತ್ಯ ಬರೆದಿದ್ದಾರೆ. ನೀರಾವರಿ ತಜ್ಞ ಬಾಳೆಕುಂದ್ರಿ ಅವರ ಸಾಕ್ಷ್ಯ ಚಿತ್ರ ನಿರ್ಮಿಸಿದ್ದಾರೆ.

*****

# ಬೆನ್ನುಡಿ

ವಿರೋಧ ಪಕ್ಷದ ನಾಯಕರಾಗಿದ್ದ ಶ್ರೀ ಎಸ್.ಆರ್. ಬೊಮ್ಮಾಯಿ-ಯವರು ಮಲಪ್ರಭಾ ಅಚ್ಚುಕಟ್ಟು ಪ್ರದೇಶದ ಎಲ್ಲ ತಾಲ್ಲೂಕುಗಳಿಗೆ ಭೇಟಿ ನೀಡಿ ನೀರಿನ ವಿತರಣೆಯ, ಕಾಮಗಾರಿಯ ಸಮಸ್ಯೆಯ ಬಗ್ಗೆ ಸರ್ಕಾರಕ್ಕೆ ಸಮಗ್ರ ವರದಿ ಸಲ್ಲಿಸಿ ರೈತರ ಮೇಲಿನ ಕಂದಾಯ ರದ್ದು ಮಾಡಿಸಿದರು. ರೈತರ ಆಸ್ತಿ ಮುಟ್ಟುಗೋಲು ಹಾಕಿಕೊಳ್ಳುವುದನ್ನು ತಡೆದರು. ರೈತರ ನೀರಿನ ಸಮಸ್ಯೆಯನ್ನು ಕಾಯಂ ಆಗಿ ಪರಿಹರಿಸಲು ಮಹಾದಾಯಿ ನದಿಯನ್ನು ಮಲಪ್ರಭಾ ನದಿಗೆ ಜೋಡಿಸುವ ಸಲಹೆ ನೀಡಿದರು. ಅಲ್ಲದೇ ತಾವು ಮುಖ್ಯಮಂತ್ರಿಯಾದಾಗ ಅಂದಿನ ಗೋವಾ ಮುಖ್ಯಮಂತ್ರಿಯಾಗಿದ್ದ ಶ್ರೀ ರಾಣೆಯವರನ್ನು ಯೋಜನೆಗೆ ಒಪ್ಪಿಸುವಲ್ಲಿ ಯಶಸ್ವಿಯೂ ಆಗಿದ್ದರು ಎಂಬುದು ಗಮನಾರ್ಹ.

ಭೂಮಿ – ಈ ದೇಶದ ಮೂಲ
ಬಂಡವಾಳ, ಇದನ್ನು ಸರಿಯಾಗಿ ಜನರಿಗೆ
ಹಂಚಿ ಅವರಿಗೆ ಯೋಗ್ಯ ಸಲಕರಣೆಗಳನ್ನು
ಕೊಟ್ಟು ದೇಶದಲ್ಲಿ ಯಥೇಚ್ಛವಾಗಿರುವ ಮಾನವ
ಶಕ್ತಿಯನ್ನು ಉಪಯೋಗಮಾಡಿಕೊಳ್ಳದೆ
ಹೋದರೆ ಈ ರಾಷ್ಟ್ರಕ್ಕೆ ಉಳಿವಿಲ್ಲ.

– **ಎಸ್.ಆರ್. ಬೊಮ್ಮಾಯಿ**

# ಶ್ರೀ ಎಸ್.ಆರ್. ಬೊಮ್ಮಾಯಿ

## ವ್ಯಕ್ತಿ–ವ್ಯಕ್ತಿತ್ವ

ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿ 1988ರ ಆಗಸ್ಟ್ 13ರ ರಂದು ಅಧಿಕಾರದ ಗದ್ದುಗೆ ಏರಿದ ಶ್ರೀ ಸೋಮಪ್ಪ ರಾಯಪ್ಪ ಬೊಮ್ಮಾಯಿಯವರು ನಾಡು ಕಂಡ ಧೀಮಂತ ನಾಯಕ. ಮಹಾ ಮಾನವತಾವಾದಿ ಎಂ.ಎನ್.ರಾಯ್‌ರವರ ಸಿದ್ಧಾಂತಗಳೆಡೆಗೆ ವಿದ್ಯಾರ್ಥಿ ದೆಸೆಯಿಂದಲೇ ಆಕರ್ಷಿತರಾಗಿ, ಅದನ್ನು ತಮ್ಮಲ್ಲಿ ಅಳವಡಿಸಿಕೊಂಡು, ಜೀವನದುದ್ದಕ್ಕೂ ತಮ್ಮ ನಂಬಿಕೆ ಸಿದ್ಧಾಂತಕ್ಕೆ ಬದ್ಧರಾಗಿ ಬಾಳಿದ ಶ್ರೀ ಬೊಮ್ಮಾಯಿಯವರು ತಮ್ಮ ಸುದೀರ್ಘ ರಾಜಕೀಯ ಜೀವನದುದ್ದಕ್ಕೂ ಎಂದೂ ರಾಜಿಯಾಗದೇ ಬದ್ಧತೆಯ ಹಿರಿಮೆಯನ್ನು ಮೆರೆದವರು.

1962ರಲ್ಲಿ ಕುಂದಗೋಳ ವಿಧಾನಸಭಾ ಕ್ಷೇತ್ರದಿಂದ ಸ್ವತಂತ್ರವಾಗಿ ಸ್ಪರ್ಧಿಸುವ ಮೂಲಕ ರಾಜ್ಯ ರಾಜಕಾರಣಕ್ಕೆ ಸಕ್ರಿಯವಾಗಿ ಪ್ರವೇಶಿಸಿದ ಬೊಮ್ಮಾಯಿ ನಾಲ್ಕು ದಶಕಗಳ ಕಾಲ ನಿರಂತರವಾಗಿ ರಾಜಕೀಯದ ಏಳುಬೀಳುಗಳನ್ನು ಕಂಡು ಅನುಭವಿಸಿದ ಪರಿಪಕ್ವ ಚೇತನ.

ಬೊಮ್ಮಾಯಿಯವರು 1988ರಲ್ಲಿ ಮುಖ್ಯಮಂತ್ರಿಯಾಗುವವರೆಗಿನ ರಾಜಕೀಯ ಪಯಣವೇ ಕರ್ನಾಟಕದ ರಾಜಕಾರಣದ ನಾಲ್ಕು ದಶಕಗಳ ಇತಿಹಾಸದ ರೋಚಕ ಅಧ್ಯಾಯಗಳೆಂದರೆ ತಪ್ಪಾಗಲಾರದು. ರಾಜ್ಯದ ಸ್ವಾತಂತ್ರ್ಯೋತ್ತರ ರಾಜಕಾರಣದ ಪ್ರತಿ ಬೆಳವಣಿಗೆಗಳ ಸಾಕ್ಷಿ ಪ್ರಜ್ಞೆಯಾದ ಬೊಮ್ಮಾಯಿಯವರು ಸೈದ್ಧಾಂತಿಕ ರಾಜಕಾರಣ, ಅಭಿವೃದ್ಧಿ ರಾಜಕಾರಣ ಹಾಗೂ ಮಾನವತಾ ರಾಜಕಾರಣಕ್ಕೆ ಮುನ್ನುಡಿ ಬರೆದವರು.

ವಿದ್ಯಾರ್ಥಿ ದೆಸೆಯಲ್ಲೇ ದೇಶದ ರಾಷ್ಟ್ರೀಯ ನಾಯಕರ ಕರೆಗೆ ಓಗೊಟ್ಟು ಸ್ವಾತಂತ್ರ್ಯ ಚಳವಳಿಗೆ ದುಮುಕಿದರು. ಆಡಳಿತಶಾಹಿ ಪೋಲೀಸ್ ವ್ಯವಸ್ಥೆಗೆ ಅಂಜದೆ ಅಳುಕದೆ ಚಲೇಜಾವ್ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ಬೊಮ್ಮಾಯಿಯವರು ತಮ್ಮ ಅಪ್ರತಿಮ ದೇಶಭಕ್ತಿಯನ್ನು ಮೆರೆದರು. ಅಲ್ಲದೇ ಈ ಸಮಯದಲ್ಲಿ ವಿದ್ಯಾರ್ಥಿಗಳನ್ನು ಸಂಘಟಿಸುತ್ತಾ ಪೋಲೀಸರಿಗೂ ಚಳ್ಳೇಹಣ್ಣು ತಿನ್ನಿಸಿ ತಮ್ಮ ಬುದ್ಧಿಮತ್ತೆಯನ್ನು ಸಂಘಟನೆಯಲ್ಲಿ ತೋರಿಸಿದರು. ಧಾರವಾಡದ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಲೇ ವಿದ್ಯಾರ್ಥಿ ಸಂಘಟನೆಯ ಪರವಾಗಿ ನೇತಾಜಿ

ಸುಭಾಷ್‌ಚಂದ್ರ ಬೋಸ್‌ರನ್ನು ಧಾರವಾಡಕ್ಕೆ ಆಹ್ವಾನಿಸಿ ಸಭೆಯನ್ನು ಆಯೋಜಿಸಿದ ಶ್ರೇಯಸ್ಸು ಬೊಮ್ಮಾಯಿಯವರದ್ದು. ಬೆಳಗಾವಿಯ ರಾಜಾ ಲಕಮನಗೌಡ ಕಾಲೇಜಿನ ಕಾನೂನು ವಿದ್ಯಾರ್ಥಿಯಾಗಿದ್ದಾಗ ಪೋರ್ಚುಗೀಸರ ವಿರುದ್ಧ ಗೋವಾ ವಿಮೋಚನಾ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಕೆಲವು ಕಾಲ ಭೂಗತರಾಗಿದ್ದರು.

ಹೀಗೆ ವಿದ್ಯಾರ್ಥಿದೆಸೆಯಿಂದಲೇ ಹೋರಾಟದ ಬದುಕನ್ನು ಅಪ್ಪಿಕೊಂಡ ಬೊಮ್ಮಾಯಿಯವರು ರಾಜ್ಯ ರಾಜಕಾರಣವನ್ನು ಪ್ರವೇಶಿಸಿದ್ದು ಅಚ್ಚರಿಯೇನಲ್ಲ. ವಕೀಲಿ ವೃತ್ತಿ ಮಾಡುತ್ತಲೇ ಕರ್ನಾಟಕ ಏಕೀಕರಣ ಚಳವಳಿಯಲ್ಲಿ ತೊಡಗಿಸಿಕೊಂಡ ಬೊಮ್ಮಾಯಿಯವರು ಅವಿಭಜಿತ ಧಾರವಾಡ ಜಿಲ್ಲೆಯ ಏಕೀಕರಣ ಚಳವಳಿಯ ನಾಯಕರಲ್ಲೊಬ್ಬರಾದರು. 1953 ರಲ್ಲಿ ಕರ್ನಾಟಕದ ಏಕೀಕರಣಕ್ಕಾಗಿ ಪೊಟ್ಟಿ ಶ್ರೀರಾಮುಲು ಆಮರಣಾಂತ ಉಪವಾಸ ಕುಳಿತಾಗ ಬೆಂಬಲವಾಗಿ ನಿಂತವರು ಬೊಮ್ಮಾಯಿ. ನಂತರ 1956ರವರೆಗೆ ಹೋರಾಟವನ್ನು ಸಂಘಟಿಸಿದವರು ಬೊಮ್ಮಾಯಿಯವರು. ಅಷ್ಟೇ ಅಲ್ಲದೇ ಭೂ ಸುಧಾರಣಾ ಕಾಯ್ದೆ ಜಾರಿಗೆ ಬರುವ ಮುಂಚೆಯೇ ಬಡ ಗೇಣೀದಾರರ ಪರವಾಗಿ ನ್ಯಾಯಾಲಯದ ಮೆಟ್ಟಿಲು ಏರಿ ಬಡರೈತರಿಗೆ ನ್ಯಾಯ ದೊರಕಿಸಿಕೊಟ್ಟು ಮಾನವೀಯತೆಯನ್ನು ಮೆರೆದವರು ಬೊಮ್ಮಾಯಿ.

ಮಹಾಮಾನವತಾವಾದಿ ಎಂ.ಎನ್. ರಾಯ್, ತಾರ್ಕುಂಡೆ, ಅಳವಂಡಿ ಶಿವಮೂರ್ತಿಸ್ವಾಮಿ, ಶಾಂತವೇರಿ ಗೋಪಾಲಗೌಡ, ಪ್ರೊ. ರಂಗನಾಥ್, ಗೌರೀಶ ಕಾಯ್ಕಿಣಿ, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ ಮುಂತಾದ ನಾಡಿನ ಚಿಂತಕರೊಂದಿಗೆ ಸ್ನೇಹ ಸಂಪರ್ಕ ಬೆಳೆಸಿದ ಬೊಮ್ಮಾಯಿಯವರು ಅವರೊಡನೆಯ ಚಿಂತನೆ–ವಾಗ್ವಾದಗಳೊಂದಿಗೆ ತಮ್ಮ ವ್ಯಕ್ತಿತ್ವಕ್ಕೆ ಪ್ರಬುದ್ಧತೆ ತಂದುಕೊಂಡವರು.

ಇದರಿಂದಾಗಿಯೇ ದೇಶದಾದ್ಯಂತ ಅಪಾರ ಸ್ನೇಹಿತರನ್ನು ಸಂಪಾದಿಸಿದರು. ಎಂದೂ ಗುಣಕ್ಕೆ ಮತ್ಸರ ಪಡದ ಬೊಮ್ಮಾಯಿಯವರು ಪ್ರತಿಭಾವಂತರನ್ನು ಗುರುತಿಸಿ ಅವರವರ ಕ್ಷೇತ್ರದಲ್ಲಿ ಬೆಳೆಯಲು ಅಗತ್ಯ ನೆರವು, ಪ್ರೋತ್ಸಾಹವನ್ನು ನೀಡಿದರು. ರಾಜಕಾರಣದಲ್ಲಂತೂ ಅವರು ಗುರುತಿಸಿ ಪ್ರೋತ್ಸಾಹಿಸಿ ಸ್ಥಾನ ನೀಡಿದವರೇ ಪ್ರಸ್ತುತ ರಾಜಕಾರಣದಲ್ಲಿ ನಾಯಕರಾಗಿ ಹೊರಹೊಮ್ಮಿರುವುದಕ್ಕೆ ಸಾಕ್ಷಿ. 1962 ರಿಂದ 1988ರಲ್ಲಿ ಮುಖ್ಯಮಂತ್ರಿಯಾದವರೆಗೆ ಹಾಗೂ ಕೇಂದ್ರದಲ್ಲಿ ಮಾನವ ಸಂಪನ್ಮೂಲ ಸಚಿವರಾಗಿ ಕಾರ್ಯ ನಿರ್ವಹಿಸಿದ ಅವಧಿಯವರೆಗೆ ಬೊಮ್ಮಾಯಿಯವರ ಸಹಾಯ ಹಸ್ತ. ಯಾರಿಗೂ ಏನನ್ನೂ ಇಲ್ಲ ಎನ್ನಲಿಲ್ಲ. ಅಭಿವೃದ್ಧಿ ವಿಚಾರದಲ್ಲಿ ಇವರಿಗಿದ್ದ ವೈಚಾರಿಕ ದೃಷ್ಟಿಕೋನ ಅನುಷ್ಠಾನ ರೀತಿ ಆಡಳಿತ ವಲಯದಲ್ಲಿ ಮಾದರಿಯಾಗಿದೆ.

## ಬಾಲ್ಯ-ಶಿಕ್ಷಣ-ಕುಟುಂಬ

ಶ್ರೀ ಬೊಮ್ಮಾಯಿಯವರು 1924ರ ಜೂನ್ 6 ರಂದು ಅಂದಿನ ಧಾರವಾಡ ಜಿಲ್ಲೆಯ ಸವಣೂರು ತಾಲ್ಲೂಕಿನ ಕಾರಡಗಿ ಗ್ರಾಮದಲ್ಲಿ ರಾಯನಗೌಡ-ಶಿವಮ್ಮ ದಂಪತಿಗಳ ಎರಡನೆಯ ಮಗನಾಗಿ ಜನಿಸಿದರು. ರಾಯನಗೌಡ-ಶಿವಮ್ಮ ದಂಪತಿಗಳದ್ದು ಮೂಲತಃ ಕೃಷಿ ಕುಟುಂಬ. ಗದಗಿನ ಶಿವಾನಂದ ಮಠದ ನಿಷ್ಠಾವಂತ ಅನುಯಾಯಿಗಳು. ಹೀಗಾಗಿ ಬೊಮ್ಮಾಯಿಯವರಿಗೆ ಕುಟುಂಬದ ಸಂಸ್ಕಾರ ಸಹಜವಾಗಿಯೇ ದೊರಕಿತು. ಗ್ರಾಮೀಣ ಪ್ರದೇಶದ ತುಂಬು ಕುಟುಂಬದಲ್ಲಿ ಬೊಮ್ಮಾಯಿಯವರು ಹಿರಿಯ ಸಹೋದರ ಶಿವಪ್ಪ, ಕಿರಿಯ ಸೋದರಿಯರಾದ ನಿಂಗಮ್ಮ, ಮಲ್ಲಮ್ಮ, ರಾಧಮ್ಮ ಹಾಗೂ ಶಿವಮ್ಮನವರೊಂದಿಗೆ ಸಂತಸದ ಬಾಲ್ಯ ಕಳೆದರು.

ಬೆಳೆಯುವ ಸಿರಿ ಮೊಳಕೆಯಲ್ಲಿ ಎಂಬುದು ನಮ್ಮ ನಾಡಿನ ಜನಪ್ರಿಯ ಗಾದೆಮಾತು. ಬೊಮ್ಮಾಯಿಯವರ ವ್ಯಕ್ತಿತ್ವ ಬಾಲ್ಯದಲ್ಲೇ ಬೆಳಕಿಗೆ ಬಂದ ಘಟನೆಯನ್ನು ಹಿರಿಯರು, ಗ್ರಾಮಸ್ಥರು ಈಗಲೂ ನೆನಪುಮಾಡಿಕೊಳ್ಳುತ್ತಾರೆ-"ಕಮಡೊಳ್ಳಿಯ ಬರಗಾಲ ಪೀಡಿತ ರೈತರು ತಮ್ಮ ಕಂದಾಯ ಕಡಿಮೆ ಮಾಡಬೇಕೆಂಬ ಮನವಿಯನ್ನು ಜಮಖಂಡಿಯ ರಾಜರಿಗೆ ಸಲ್ಲಿಸಬೇಕಿತ್ತು. ಮನವಿಯನ್ನು ರಾಜನೆದುರು ಓದಲು ಊರಿನ ಹಿರಿಯರಾರೂ ಮುಂದೆ ಬರಲಿಲ್ಲ. ಆಗ ಬಾಲಕ ಬೊಮ್ಮಾಯಿ ಮನವಿಯನ್ನು ಇಸಿದುಕೊಂಡು ರಾಜರ ಮುಂದೆ ಧೈರ್ಯವಾಗಿ ಓದಿದ. ಮನವಿಗೆ ರಾಜ ಒಪ್ಪಿದ. ಊರಿನವರೆಲ್ಲರೂ ಬಾಲಕನ ಧೈರ್ಯವನ್ನು ಮೆಚ್ಚಿದರು. ಬರಗಾಲ ಪೀಡಿತ ಜನರ ಗೋಳಿಗೊಂದು ದನಿ ಬೇಕಾಗಿತ್ತು. ಗಿಡಕ್ಕೆ ಹೂ ಬಿಟ್ಟಷ್ಟೇ ಸಹಜವಾಗಿ ಜನರ ಗೋಳಿಗೆ ದನಿಯಾಗಬಲ್ಲ ಒಬ್ಬ ನೇತಾರನ ಜನನವಾಗಿ ಬಿಟ್ಟಿತ್ತು. ಜೊತೆಗೆ ಅವರಿಗೇ ಗೊತ್ತಿಲ್ಲದಂತೆ ಬೊಮ್ಮಾಯಿಯವರ ರಾಜಕೀಯ ಚರಿತ್ರೆಯೂ ಶುರುವಾಗಿಬಿಟ್ಟಿತ್ತು". (ಚಂದ್ರಶೇಖರ ಕಂಬಾರ)

ತಮ್ಮ ಪ್ರಾಥಮಿಕ ಶಿಕ್ಷಣವನ್ನು ಕುಂದಗೋಳ ತಾಲ್ಲೂಕಿನ ಕಮಡೊಳ್ಳಿಯಲ್ಲಿ ಪೂರೈಸಿದ ಬೊಮ್ಮಾಯಿಯವರು ಎಸ್.ಎಸ್.ಎಲ್.ಸಿ.ಯನ್ನು ಪೂರೈಸಲು ಹುಬ್ಬಳ್ಳಿಗೆ ಬಂದರು. ಹುಬ್ಬಳ್ಳಿಯಲ್ಲಿದ್ದ ಸೋದರ ಮಾವ ಮಲ್ಲಪ್ಪ ಹುರಳಿಕೊಪ್ಪಿಯವರ ಮನೆಯಲ್ಲಿ ಉಳಿದು ವ್ಯಾಸಂಗ ಮಾಡಿದ ಬೊಮ್ಮಾಯಿಯವರು ಮುಂದೆ ಸೋದರ ಮಾವನ ಮಗಳಾದ ಗಂಗಮ್ಮನವರನ್ನೇ ವಿವಾಹವಾದರು.

ಬೊಮ್ಮಾಯಿಯವರು ವೈದ್ಯರಾಗಬೇಕೆಂಬುದು ಅವರ ತಂದೆಯವರ ಆಸೆ. ಆದರೆ ನಂತರ ಬೆಳಗಾವಿಯ ರಾಜಾ ಲಕಮನಗೌಡ ಕಾಲೇಜಿನಲ್ಲಿ ಕಾನೂನು ಪದವಿ ಗಳಿಸಿದರು. ಇದರಿಂದ ವೈದ್ಯಕೀಯ ಕ್ಷೇತ್ರಕ್ಕಾದ ನಷ್ಟ ಸಾರ್ವಜನಿಕ ಕ್ಷೇತ್ರಕ್ಕಾದ ಲಾಭವೆಂದು ನಾವು ಭಾವಿಸಬಹುದು.

ಎಸ್.ಆರ್.ಬೊಮ್ಮಾಯಿಯವರು ಮಡದಿ ಗಂಗಮ್ಮ ಹಾಗೂ ನಾಲ್ಕು ಜನ ಮಕ್ಕಳ ತುಂಬು ಕುಟುಂಬ-ಸಂತೃಪ್ತ ಕುಟುಂಬ. ಮಗಳು ಗಿರಿಜ ಹಾಗೂ ಉಮಾ ವಿವಾಹವಾಗಿ ಸಂತೃಪ್ತ ಜೀವನ ನೆಡೆಸುತ್ತಿದ್ದಾರೆ. ಗಂಡು ಮಕ್ಕಳಲ್ಲಿ ಬಸವರಾಜ ಬೊಮ್ಮಾಯಿ ತಂದೆಯ ಹಾದಿಯಲ್ಲಿ ರಾಜಕಾರಣಕ್ಕೆ ಪ್ರವೇಶಿಸಿ ಎರಡು ಬಾರಿ ವಿಧಾನ ಪರಿಷತ್ ಸದಸ್ಯರಾಗಿ ಹಾಗೂ 2008ರ ವಿಧಾನಸಭಾ ಚುನಾವಣೆಯಲ್ಲಿ ಸೋದರಮಾವ ಮಲ್ಲಪ್ಪ ಹುರುಳಿಕೊಪ್ಪಿ ಅವರು (1952 ರಲ್ಲಿ) ಪ್ರತಿನಿಧಿಸಿದ್ದ ಶಿಗ್ಗಾಂವ ಕ್ಷೇತ್ರದಿಂದ ಶಾಸಕರಾಗಿ ಆರಿಸಿಬಂದು ಶ್ರೀ ಬಿ.ಎಸ್.ಯಡಿಯೂರಪ್ಪನವರ ಸಂಪುಟದಲ್ಲಿ ಜಲಸಂಪನ್ಮೂಲ ಸಚಿವರಾಗಿದ್ದಾರೆ. ಕಿರಿಯ ಮಗ ಮಲ್ಲಿಕಾರ್ಜುನ ಒಬ್ಬ ಯಶಸ್ವಿ ಕೈಗಾರಿಕೋದ್ಯಮಿ.

## ರಾಜಕೀಯ ರಂಗ ಪ್ರವೇಶ

ಕರ್ನಾಟಕದಲ್ಲಿ ಜನಪರ ಆಲೋಚನೆಗೆ ಅದಾಗಲೇ ತಮ್ಮನ್ನು ತೊಡಗಿಸಿಕೊಂಡಿದ್ದ ಎಸ್.ಆರ್.ಬೊಮ್ಮಾಯಿ ದೇಶದಲ್ಲಿ ಜನಪರ ರಾಜಕಾರಣದ ಬಗ್ಗೆ ಆಲೋಚನೆ ನಡೆಸುತ್ತಿದ್ದ ಎಂ.ಎನ್.ರಾಯ್ ಅವರ ರ್ಯಾಡಿಕಲ್ ಹ್ಯೂಮನಿಸ್ಟ್ ಪಕ್ಷದ ಸದಸ್ಯತ್ವ ಪಡೆಯುವ ಮೂಲಕ ಸಕ್ರಿಯ ರಾಜಕಾರಣಕ್ಕೆ ಪ್ರವೇಶಿಸಿದರು. ಬೊಮ್ಮಾಯಿಯವರು ಎಂ.ಎನ್.ರಾಯ್‌ರವರ ಸಂಪರ್ಕಕ್ಕೆ ಬಂದ ಪ್ರಸಂಗ ಕುತೂಹಲಕಾರಿಯಾಗಿದೆ. ಚಲೇಜಾವ್ ಚಳವಳಿಯಲ್ಲಿ ತಮ್ಮ ಗೆಳೆಯರೊಂದಿಗೆ ಸಕ್ರಿಯವಾಗಿ ಪಾಲ್ಗೊಂಡಿದ್ದ ಬೊಮ್ಮಾಯಿಯವರ ಮೇಲೆ ಪೊಲೀಸರ ಕಣ್ಣು ಬಿದ್ದು ಎಚ್ಚರಿಕೆಯನ್ನು ಕೊಟ್ಟಿದ್ದರು. ಇದನ್ನು ನಿರ್ಲಕ್ಷಿಸಿದ ಬೊಮ್ಮಾಯಿಯವರು ಭೂಗತ ಚಟುವಟಿಕೆಯಲ್ಲಿ ತೊಡಗಿದರು. ಪೊಲೀಸರು ಬೊಮ್ಮಾಯಿಯವರನ್ನು ಬಂಧಿಸಲು ಬೆನ್ನು ಹತ್ತಿದಾಗ ಅವರ ಸಮಾನ ಮನಸ್ಕ ಗೆಳೆಯರೊಂದಿಗೆ ಹುಬ್ಬಳ್ಳಿ ಬಿಟ್ಟು ರಹಸ್ಯವಾಗಿ ರೈಲು ಹತ್ತಿದವರು ದೂರದ ಕೋಲ್ಕತ್ತ ತಲುಪಿದರು. ಕೋಲ್ಕತ್ತದಲ್ಲಿ ಸಭೆಯೊಂದರಲ್ಲಿ ರಾಯ್‌ರವರ ಭಾಷಣವನ್ನು ಆಕಸ್ಮಿಕವಾಗಿ ಕೇಳಿ ಅವರ ವಿಚಾರಧಾರೆಯಿಂದ ಆಕರ್ಷಿತರಾದ ಬೊಮ್ಮಾಯಿಯವರು ನಂತರ ರಾಯ್‌ರವರನ್ನು ಭೇಟಿಯಾದರು. ಈ ಭೇಟಿ ರಾಯ್‌ರವರು ಬದುಕಿರುವವರೆಗೆ ನಿರಂತರ ಸ್ನೇಹ ಸಂಪರ್ಕಕ್ಕೆ ಭದ್ರ ಬುನಾದಿಯಾಯಿತು. ಬೊಮ್ಮಾಯಿಯವರು ರಾಯ್‌ರವರೊಂದಿಗೆ ಜನಪರ ವಿಚಾರಗಳ ಕುರಿತಾಗಿ ಚರ್ಚಿಸುತ್ತಿದ್ದರು. ಇಬ್ಬರಲ್ಲೂ ಸಮಾನ ವೈಜ್ಞಾನಿಕ ದೃಷ್ಟಿಕೋನ, ಬದ್ಧತೆ ಇತ್ತು. ಇಲ್ಲಿ ಬೊಮ್ಮಾಯಿ ಅವರಿಗೆ ಒದಗಿ ಬಂದ ಎಂ.ಎನ್. ರಾಯ್ ಅವರ ಒಡನಾಟ ಅವರ ದೃಷ್ಟಿಕೋನವನ್ನು ವಿಸ್ತರಿಸಿತ್ತು. ಕಮಡೊಳ್ಳಿಯ ರೈತನ ಮಗನ ಅನುಭವಕ್ಕೆ ಜಾಗತಿಕ ದೃಷ್ಟಿಕೋನ ನೀಡಿತ್ತು. ಅಧಿಕಾರ ವಿಕೇಂದ್ರೀಕರಣಕ್ಕೆ ಬುನಾದಿಯಾಗಿರುವ ರಾಯ್‌ರವರ 'ಪೀಪಲ್ ಪ್ಲಾನ್'ಗೆ ಬೊಮ್ಮಾಯಿಯವರು ಮನಸೋತಿದ್ದರು. ಹೀಗಾಗಿಯೇ ಮುಂದೆ ಕರ್ನಾಟಕದ ಆಡಳಿತ ಚುಕ್ಕಾಣಿ ಹಿಡಿದಾಗ ಅಧಿಕಾರ ವಿಕೇಂದ್ರೀಕರಣಕ್ಕೆ ಹೊಸ ರೂಪ ನೀಡಿದರು.

ಸ್ನೇಹಿತರು, ಹಿತೈಷಿಗಳು, ವಕೀಲರು, ರೈತಾಪಿ ಬಂಧುಗಳ ಒತ್ತಾಸೆಯ ಮೇರೆಗೆ 1962 ರಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ ಚುನಾವಣೆ ಎದುರಿಸಿ ಸೋಲುಂಡರು. ಕರ್ನಾಟಕದ ವಿಧಾನಸಭೆಗೆ ಪ್ರವೇಶಿಸುವ ಪ್ರಯತ್ನ ವಿಫಲವಾದರೂ ಬೊಮ್ಮಾಯಿಯವರು ಎದೆಗುಂದಲಿಲ್ಲ. ಎಂದಿನಂತೆ ಚುನಾವಣಾ ಫಲಿತಾಂಶ ಬಂದ ಮರು ದಿನದಿಂದಲೇ ವಕೀಲಿ ವೃತ್ತಿಗೆ ಹಾಜರಾದರು. ಮತ್ತೆ ಅದೇ ಜನರ

ಸೇವೆ. ಅನ್ಯಾಯ ಕಂಡಲ್ಲಿ ನ್ಯಾಯಕ್ಕಾಗಿನ ಹೋರಾಟ ಬಿರುಸಾಗಿಯೇ ಸಾಗಿದವು. ಇಷ್ಟೆಲ್ಲ ಚಟುವಟಿಕೆಗಳ ನಡುವೆಯೂ ಬೊಮ್ಮಾಯಿಯವರು ತಮ್ಮ ಪುಸ್ತಕ ಪ್ರೀತಿಯನ್ನು ಮರೆಯಲಿಲ್ಲ. ಓದು ಅವರ ವ್ಯಕ್ತಿತ್ವಕ್ಕೆ, ದೃಷ್ಟಿಕೋನಕ್ಕೆ, ನಂಬಿಕೆಗೆ ಪೂರಕ ಶಕ್ತಿ ನೀಡುತ್ತಿತ್ತು.

1967ರ ವಿಧಾನಸಭಾ ಚುನಾವಣೆಯಲ್ಲಿ ಮತ್ತೆ ಕುಂದಗೋಳ ಕ್ಷೇತ್ರದಿಂದ ಸ್ಪರ್ಧಿಸಿ ವಿಜಯಿಯಾದರು. ಮತಕ್ಷೇತ್ರದ ಮೂಲೆ ಮೂಲೆಗೆ ಸಂಚರಿಸಿದ ಬೊಮ್ಮಾಯಿಯವರು ಕ್ಷೇತ್ರದ ಸಮಸ್ಯೆಗಳನ್ನು ಅರಿತು ಅದನ್ನು ಶಕ್ತಿ ಮೀರಿ ಪರಿಹರಿಸಲು ಪ್ರಯತ್ನಿಸಿದರು. ಈ ಪ್ರಯತ್ನಗಳೇ ನಾಲ್ಕು ದಶಕಗಳ ಕಾಲ ರಾಜಕೀಯ ನೇತಾರನಾಗಿ ಸಾರ್ವಜನಿಕ ಜೀವನದಲ್ಲಿರಲು ತಳಹದಿಯಾಯಿತು. ಅಲ್ಲದೇ ಅಂದು ಶಾಸಕರಾಗಿ ಆರಿಸಿ ಬಂದಿದ್ದ ಕೆ.ಎಚ್.ಪಾಟೀಲ್. ಎಸ್.ಎಂ. ಕೃಷ್ಣ, ಕೆ.ಹೆಚ್.ರಂಗನಾಥ್, ಬಂಗಾರಪ್ಪ, ಕಾಗೋಡು ತಿಮ್ಮಪ್ಪ, ವಿಶ್ವನಾಥರೆಡ್ಡಿ ಮುದ್ನಾಳ್ ಹೀಗೆ ಬಹುತೇಕರೊಂದಿಗೆ ಬೆರೆತ ಬೊಮ್ಮಾಯಿಯವರು ಸದನದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಮೊದಲ ಅವಕಾಶದಲ್ಲೇ ತಮ್ಮ ಇರುವಿಕೆಯನ್ನು ಸಾಬೀತು ಪಡಿಸಿದರು. ಅಲ್ಲದೇ ಸ್ವತಂತ್ರ ಅಭ್ಯರ್ಥಿಗಳಾಗಿ ಆರಿಸಿ ಬಂದ ಶಾಸಕರೊಡಗೂಡಿ ಪ್ರಬಲ ಪ್ರತಿಪಕ್ಷವಾಗಿ ಸದನದಲ್ಲಿ ಕಾರ್ಯನಿರ್ವಹಿಸಿದರು.

ಈ ಹೊತ್ತಿಗಾಗಲೇ ರಾಜಕೀಯ ಪಡಸಾಲೆಯಲ್ಲಿ ಸಾಕಷ್ಟು ಪಳಗಿದ ಬೊಮ್ಮಾಯಿಯವರಿಗೆ ವೀರೇಂದ್ರಪಾಟೀಲರ ಸ್ನೇಹ ನಿಕಟ ಸಂಪರ್ಕವನ್ನು ತಂದುಕೊಟ್ಟಿತ್ತು. ಹೀಗೆ ವೀರೇಂದ್ರ ಪಾಟೀಲರ ಒತ್ತಾಸೆಯಿಂದಾಗಿ ಎಸ್.ಆರ್.ಬೊಮ್ಮಾಯಿಯವರು 1969 ರಲ್ಲಿ ಅಂದಿನ ಸಂಸ್ಥಾ ಕಾಂಗ್ರೆಸ್ ಸೇರಿದರು.

1972 ರಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ ಬೊಮ್ಮಾಯಿಯವರು ಸಂಸ್ಥಾ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಆದರೆ ಜಯಲಕ್ಷ್ಮಿ ಅವರಿಗೆ ಒಲಿಯಲಿಲ್ಲ. ಚುನಾವಣಾ ಫಲಿತಾಂಶದಿಂದ ನಿರಾಶರಾಗದೆ ಎಂದಿನಂತೆ ತಮ್ಮ ವಕೀಲಿ ವೃತ್ತಿಯಲ್ಲಿ ಸಕ್ರಿಯರಾದರು. ಬೊಮ್ಮಾಯಿಯವರ ಸೋಲಿನಿಂದ ಉತ್ತರ ಕರ್ನಾಟಕಕ್ಕೆ ಒಬ್ಬ ಜನನಾಯಕನ ನಷ್ಟವಾಯಿತು ಎಂದು ಭಾವಿಸಿದ ಜನ ಬೊಮ್ಮಾಯಿಯವರನ್ನು ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ವಿಧಾನ ಪರಿಷತ್‌ಗೆ ಸ್ಪರ್ಧಿಸುವಂತೆ ಕೇಳಿಕೊಂಡರು. ಅಂದು ಅವಿಭಜಿತ ಧಾರವಾಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತರಾದ ಜನಪ್ರತಿನಿಧಿಗಳು ಬಹುತೇಕ ಕಾಂಗ್ರೆಸ್ ಪಕ್ಷದವರೇ ಆಗಿದ್ದರು. ಪರಿಸ್ಥಿತಿ ವಿರುದ್ಧವಾಗಿದ್ದರೂ ಹಿತೈಷಿಗಳ ಒತ್ತಡಕ್ಕೆ ಕಟ್ಟುಬಿದ್ದು

ಬೊಮ್ಮಾಯಿಯವರು ಸ್ಪರ್ಧಿಸಲು ಒಪ್ಪಿದರು. ಜನಪ್ರತಿನಿಧಿಗಳು ಪಕ್ಷಭೇದ ಮರೆತು ಬೊಮ್ಮಾಯಿಯವರನ್ನು ವಿಧಾನ ಪರಿಷತ್‌ಗೆ ಗೆಲ್ಲಿಸಿ ಕಳಿಸಿದರು.

1972ರಲ್ಲಿ ವಿಧಾನ ಪರಿಷತ್‌ಗೆ ಪ್ರವೇಶಿಸಿದ್ದೇ ತಡ ಮತ್ತೆ ಬೊಮ್ಮಾಯಿಯವರು ಜನರ ಸಮಸ್ಯೆಗಳ ಬಗ್ಗೆ ಸರ್ಕಾರದ ಗಮನ ಸೆಳೆಯಲು ಸಕ್ರಿಯರಾದರು. ಅಂದು ವಿಧಾನ ಪರಿಷತ್‌ನಲ್ಲಿ ಪ್ರತಿಪಕ್ಷದ ಉಪನಾಯಕರಾಗಿ ಸದನದಲ್ಲಿ ಆಡಳಿತ ಪಕ್ಷವನ್ನು ಕಟು ವಿಮರ್ಶೆಗೆ ಒಳಪಡಿಸಿದರು. ನಂತರ ದೇಶದಲ್ಲಿ ಹೇರಲ್ಪಟ್ಟ ತುರ್ತುಪರಿಸ್ಥಿತಿಯ ಪರಿಣಾಮವಾಗಿ ರಾಮಕೃಷ್ಣ ಹೆಗಡೆಯವರ ಬಂಧನವಾದಾಗ ಬೊಮ್ಮಾಯಿಯವರು ಪ್ರತಿಪಕ್ಷದ ನಾಯಕರಾಗಿ ಸಮರ್ಥವಾಗಿ ಸದನವನ್ನು ಮುನ್ನೆಡೆಸಿದರು. ತಮ್ಮ ಪ್ರಖರ ಮಾತು, ಸೂಕ್ಷ್ಮ ಒಳನೋಟ, ಜನಹಿತವುಳ್ಳ ದೃಷ್ಟಿಕೋನಗಳಿಂದ ವಸ್ತು ವಿಷಯವನ್ನು ಮಂಡಿಸಿ ಆಡಳಿತಗಾರರಿಗೆ ಜನಹಿತವೇ ಮೊದಲ ಆದ್ಯತೆಯಾಗಿರಬೇಕು ಎಂಬುದನ್ನು ಮನದಟ್ಟು ಮಾಡಿಸಿದರು.

ತುರ್ತು ಪರಿಸ್ಥಿತಿಯ ದುರಾಡಳಿತವನ್ನು ಕಟುವಾಗಿ ಖಂಡಿಸಿದರು, ಸದನ ಒಳಗಷ್ಟೇ ಅಲ್ಲ, ಸದನದ ಹೊರಗೂ ಜನ ಸಂಘಟನೆ ಮಾಡುತ್ತಾ ಲೋಕನಾಯಕ ಜಯಪ್ರಕಾಶ ನಾರಾಯಣರೊಂದಿಗೆ ಉತ್ತರ ಕರ್ನಾಟಕದಾದ್ಯಂತ ಸಂಚರಿಸಿದರು. ಜೆ.ಪಿ. ಆಂದೋಲನದ ಫಲವಾಗಿ ಇಂದಿರಾಗಾಂಧಿಯವರ ವಿರುದ್ಧವಾಗಿ, ತುರ್ತುಪರಿಸ್ಥಿತಿಯ ವಿರುದ್ಧವಾಗಿ ಮನಸುಳ್ಳವರೆಲ್ಲರೂ ಸೇರಿ ಸ್ಥಾಪಿಸಿದ 'ಜನತಾ ಪಕ್ಷದ' ರಾಜ್ಯ ಘಟಕದ ಉಪಾಧ್ಯಕ್ಷರಾಗಿ ಆಯ್ಕೆಗೊಂಡರು.

ಕರ್ನಾಟಕದಲ್ಲಿ ಬೊಮ್ಮಾಯಿಯವರು ಪಕ್ಷವನ್ನು ಹಗಲಿರುಳೆನ್ನದೆ ಸಂಘಟಿಸಿದರು. ಇವರ ಶ್ರಮದ ಫಲವಾಗಿ 1978ರ ವಿಧಾನಸಭಾ ಚುನಾವಣೆಯಲ್ಲಿ ಜನತಾಪಕ್ಷದಿಂದ 59 ಜನ ಶಾಸಕರು ಆಯ್ಕೆಗೊಂಡರು. ಹೀಗೆ ಸಮರ್ಥ ಪ್ರತಿ ಪಕ್ಷವಾಗಿ ವಿಧಾನ ಸಭೆಯಲ್ಲಿ ಜನತಾಪಕ್ಷ ಹೊರಹೊಮ್ಮಲು ಬೊಮ್ಮಾಯಿಯವರ ಕೊಡುಗೆ ಅಪಾರ. 1978ರ ಚುನಾವಣೆಯಲ್ಲಿ ಹುಬ್ಬಳ್ಳಿ ಗ್ರಾಮಾಂತರ ಕ್ಷೇತ್ರದಿಂದ ಆರಿಸಿಬಂದ ಬೊಮ್ಮಾಯಿಯವರು ಪ್ರತಿಪಕ್ಷದ ನಾಯಕರಾಗಿ ಆಯ್ಕೆಗೊಂಡರು.

ಪ್ರತಿ ಪಕ್ಷದ ನಾಯಕರಾದ ಬೊಮ್ಮಾಯಿಯವರು ರಾಜ್ಯದ ಜ್ವಲಂತ ಸಮಸ್ಯೆಗಳನ್ನು ತಮ್ಮ ಅಧ್ಯಯನ ಪೂರ್ಣ ಮಾಹಿತಿಯೊಂದಿಗೆ ಸಮರ್ಥವಾಗಿ ಮಂಡಿಸಿ ಆಡಳಿತ ಪಕ್ಷದ ಕಣ್ಣು ತೆರೆಸುವ ಪ್ರಯತ್ನ ಮಾಡಿದರು. ರಾಜ್ಯದ ಬಜೆಟ್ ಅನ್ನು ಕಟು ವಿಮರ್ಶೆಗೆ ಒಳಪಡಿಸಿದರು. ಸದನದಲ್ಲಿ ಅವರು ಮಾಡಿದ

ಭಾಷಣಗಳನ್ನು ಕಂಡ ರಾಜ್ಯದ ಜನತೆ ಬೊಮ್ಮಾಯಿಯವರಲ್ಲಿ ಒಬ್ಬ ಸಮರ್ಥ ನಾಯಕ, ಮುತ್ಸದ್ದಿಯನ್ನು ಕಂಡರು.

ಅದು ದೇವರಾಜ ಅರಸ್ ಮುಖ್ಯಮಂತ್ರಿಯಾದಾಗಿನ ಅವಧಿ. ಇಡೀ ದೇಶದಲ್ಲೇ ಕಾಂಗ್ರೆಸ್ ಧೂಳೀಪಟವಾಗಿ ಕರ್ನಾಟಕದಲ್ಲಿ ಮಾತ್ರ ಆಡಳಿತದ ಚುಕ್ಕಾಣಿ ಹಿಡಿದಿದ್ದರಿಂದ ಸಹಜವಾಗಿ ಅರಸ್‌ರವರು ಕಾಂಗ್ರೆಸ್‌ನ ಧ್ರುವತಾರೆ. ಅಲ್ಲದೇ ರಾಜಕಾರಣ ಹಾಗೂ ಆಡಳಿತ ಎರಡರ ಮೇಲೂ ಹಿಡಿತ ಸಾಧಿಸಿದ್ಧ ನಾಯಕ. ಹೀಗಾಗಿ ಅವರಿಗೆ ಸಮಸಮವಾಗಿ ರಾಜ್ಯದ ಜನತೆಯ ಗಮನ ಸೆಳೆಯುವುದು ಎಂದರೆ ಸುಲಭದ ಮಾತಾಗಿರಲಿಲ್ಲ. ಆದರೆ ಬೊಮ್ಮಾಯಿಯವರು ಅಸಾಧ್ಯವಾದುದ್ದನ್ನ ಸಾಧಿಸಿದರು. ಸದನದಲ್ಲಿ ಅನೇಕ ಸಂದರ್ಭಗಳಲ್ಲಿ ಸರ್ಕಾರವನ್ನೇ ಪೇಚಿಗೆ ಸಿಲುಕಿಸಿದರು.

ಅಂದು ಕೇಂದ್ರದಲ್ಲಿದ್ದುದು ಜನತಾಪಕ್ಷದ ಶ್ರೀ ಮೊರಾರ್ಜಿ ದೇಸಾಯಿಯವರ ಸರ್ಕಾರ. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿನ ಅತಿರೇಕಗಳಿಂದಾಗಿ ಮಾಜೀ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾಗಾಂಧಿಯವರ ಬಂಧನವಾಯಿತು. ಆ ಸಂದರ್ಭದಲ್ಲಿ ಇಂದಿರಾಗಾಂಧಿಯವರ ಬಗ್ಗೆ ಭಾವನಾತ್ಮಕವಾಗಿದ್ದ ಜನರಿಂದ ಗಲಭೆಗಳಾದವು. ಅದು ಬೊಮ್ಮಾಯಿಯವರಿಗೆ ಅಗ್ನಿ ಪರೀಕ್ಷೆಯ ಕಾಲ. ತಮ್ಮದೇ ಪಕ್ಷದ ಕೇಂದ್ರ ಸರ್ಕಾರ ಇಂದಿರಾಗಾಂಧಿಯವರನ್ನ ಬಂಧಿಸಿದ್ದನ್ನು ಸಮರ್ಥಿಸಿಕೊಳ್ಳಬೇಕು, ಇನ್ನೊಂದೆಡೆ ದೇಶದಾದ್ಯಂತ ನಡೆದ ಗಲಭೆಗಳಿಗೆ ಪರೋಕ್ಷ ಕಾರಣರಾದವರ ಮೇಲೆ ಕ್ರಮ ಕೈಗೊಳ್ಳುವಂತೆ ಒತ್ತಡ ತರಬೇಕು. ಇಂತಹ ಸಂದಿಗ್ಧ ಪರಿಸ್ಥಿಯನ್ನು ಬೊಮ್ಮಾಯಿಯವರು ಸಮರ್ಥವಾಗಿ ನಿಭಾಯಿಸಿ ಭೇಷ್ ಎನಿಸಿಕೊಂಡರು.

ಬೊಮ್ಮಾಯಿಯವರು ಪ್ರತಿ ಪಕ್ಷದ ನಾಯಕರಾಗಿದ್ದ ಸಮಯದ ಮುಖ್ಯ ಘಟನೆ ಗ್ರೋವರ್ ಆಯೋಗದ ವರದಿ ಬಹಿರಂಗಗೊಂಡದ್ದು. ದೇವರಾಜ ಅರಸರ ಮೇಲಿನ ಭ್ರಷ್ಟಾಚಾರದ ಆರೋಪದ ಹಿನ್ನೆಲೆಯಲ್ಲಿ ರಚಿಸಲಾಗಿದ್ದ ಗ್ರೋವರ್ ಆಯೋಗದ ವರದಿ ಬಹಿರಂಗಗೊಂಡ ಸಂದರ್ಭವನ್ನು ಸಮರ್ಥವಾಗಿ ಉಪಯೋಗಿಸಿಕೊಂಡು ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸಿದ್ದನ್ನು ಯಾರೂ ಮರೆಯಲಾರರು.

ಬಜೆಟ್ ಮೇಲಿನ ಭಾಷಣ, ರಾಜ್ಯಪಾಲರ ವಂದನಾ ನಿರ್ಣಯದ ಮೇಲಿನ ಭಾಷಣ, ಭಾಷಾ ಸಮಸ್ಯೆ, ಗಡಿ ವಿವಾದ, ಮೀಸಲಾತಿ ನೀತಿ, ಕೃಷಿ–ಕೈಗಾರಿಕಾ

ನೀತಿ, ರೈತರ ಬೆಳೆಗಳಿಗೆ ಬೆಂಬಲ ಬೆಲೆ, ಕೊಳಗೇರಿ ನಿವಾಸಿಗಳ ಸಮಸ್ಯೆ, ಹುಬ್ಬಳ್ಳಿ–ಧಾರವಾಡ ನಗರದ ಆಸ್ತಿ ತೆರಿಗೆ, ರಾಜ್ಯದ ನೀರಾವರಿ ಯೋಜನೆಗಳು ಒಂದೇ ಎರಡೇ ಬೊಮ್ಮಾಯಿಯವರ ಸದನದ ಹೋರಾಟ ದಾಖಲಾರ್ಹ.

ದೇವರಾಜ ಅರಸರ ಅಧಿಕಾರ ಮೊಟಕುಗೊಂಡು ಶ್ರೀ ಆರ್.ಗುಂಡೂರಾವ್ ಮುಖ್ಯಮಂತ್ರಿಗಳಾಗಿ ಅಧಿಕಾರಕ್ಕೆ ಬಂದ ಮೇಲಂತೂ ಪ್ರತಿಪಕ್ಷದ ನಾಯಕರಾದ ಬೊಮ್ಮಾಯಿಯವರ ಜವಾಬ್ದಾರಿ ಮತ್ತಷ್ಟು ಹೆಚ್ಚಿತು. ಗುಂಡೂರಾಯರ ಆಡಳಿತದ ಅವಧಿಯಲ್ಲಿ ಹಗರಣಗಳ ಸರಮಾಲೆಯೇ ನೆಡೆದುಹೋಯಿತು. ಮುಖ್ಯಮಂತ್ರಿಗಳ ಹೆಲಿಕಾಪ್ಟರ್ ಬಳಕೆ, ಭದ್ರಾವತಿಯ ವ್ಯಕ್ತಿಯೊಬ್ಬರ ಕೊಲೆ ಪ್ರಕರಣದಲ್ಲಿ ಸಂಪುಟದಲ್ಲಿ ಸಚಿವರಾಗಿದ್ದ ಸಿ.ಎಂ.ಇಬ್ರಾಹಿಂ ವಿರುದ್ಧದ ಕ್ರಿಮಿನಲ್ ಕೇಸು, ಸರ್ಕಾರದ ವಿರುದ್ಧ ನಿಲುವಳಿ ಸೂಚನೆ, ಬಿರುಸುಗೊಂಡ ರೈತ ಚಳವಳಿ, ಗಂಗಾವತಿ, ನರಗುಂದ, ನವಲಗುಂದಗಳಲ್ಲಿ ಚಳವಳಿ ನಿರತ ರೈತರ ಮೇಲೆ ಗೋಲಿಬಾರ್, ಪೊಲೀಸ್ ಅತಿರೇಕಗಳು, ವೀನಸ್ ಸರ್ಕಸ್ ದುರಂತ ಮುಂತಾದ ಸಂದರ್ಭಗಳಲ್ಲಿ ಸರ್ಕಾರವನ್ನು ಯಾವ ಮುಲಾಜೂ ಇಲ್ಲದೇ ತರಾಟೆಗೆ ತೆಗೆದುಕೊಂಡವರು ಎಸ್.ಆರ್.ಬೊಮ್ಮಾಯಿ.

ಪ್ರತಿಪಕ್ಷದ ನಾಯಕನ ಸ್ಥಾನಕ್ಕೆ ಸಂಖ್ಯಾಬಲದ ದೃಷ್ಟಿಯಿಂದ ಸಂಚಕಾರ ಬಂದಾಗ ದೇವರಾಜ ಅರಸರೇ ಕೆಲಕಾಲ ಸಹಕರಿಸಿದ್ದನ್ನ ಕಂಡರೆ ಅರಸರಿಗೂ ಇವರ ಮೇಲಿದ್ದ ವಿಶ್ವಾಸ ಎದ್ದು ಕಾಣುತ್ತದೆ. ಇಂತಹ ಅಜಾತಶತ್ರು ಬೊಮ್ಮಾಯಿಯುವರು. ಸದನದಲ್ಲಿ ತಾವೊಬ್ಬರೇ ಅಲ್ಲ, ತಮ್ಮ ಪಕ್ಷದ ಪ್ರತಿಭಾವಂತರೆಲ್ಲರಿಗೂ ಮಾತನಾಡಲು ಅವಕಾಶ ಮಾಡಿಕೊಡುತ್ತಿದ್ದುದಲ್ಲದೇ, ಅಗತ್ಯ ಸಂದರ್ಭಗಳಲ್ಲಿ ಸೂಕ್ತ ಮಾರ್ಗದರ್ಶನವನ್ನೂ ನೀಡಿ ಶಾಸಕರನ್ನು ಬೆಳೆಯುವಂತೆ ಪ್ರೋತ್ಸಾಹಿಸುವ ದೊಡ್ಡಗುಣ ಹೊಂದಿದ್ದರು.

ನರಗುಂದದಲ್ಲಿ ರೈತರ ಜಮೀನಿಗೆ ಸರಿಯಾಗಿ ನೀರನ್ನು ಕೊಡದೆ ಕಂದಾಯ ಹೇರಿದ್ದನ್ನು ಪ್ರತಿಭಟಿಸಿ, ರೈತ ಚಳವಳಿ ತಾರಕಕ್ಕೇರಿ, ಗೋಲಿಬಾರ್ ಆಗಿ ಎಂಟು ದಿನಗಳ ಕರ್ಫ್ಯೂ ಹೇರಿದ್ದಾಗ ರಾಜ್ಯದ ಯಾವುದೇ ರಾಜಕೀಯ ನಾಯಕರು ನರಗುಂದಕ್ಕೆ ಭೇಟಿ ನೀಡುವ ಧೈರ್ಯ ಮಾಡಲಿಲ್ಲ. ಆದರೆ ಬೊಮ್ಮಾಯಿಯವರು ರೈತರ ಬಳಿ ಹೋಗಿ ಅವರಿಗೆ ಧೈರ್ಯ ತುಂಬಿದರು. ಶಾಂತಿ ಕಾಪಾಡುವಂತೆ ರೈತರ ಮನವೊಲಿಸಿದರು. ನಂತರ ಸರ್ಕಾರವೇ ಬೊಮ್ಮಾಯಿಯವರ ಅಧ್ಯಕ್ಷತೆಯಲ್ಲಿ ಸಮಿತಿ ನೇಮಿಸಿತು. ಬೊಮ್ಮಾಯಿಯವರು ಮಲಪ್ರಭಾ ಅಚ್ಚುಕಟ್ಟು ಪ್ರದೇಶದ

ಎಲ್ಲ ತಾಲ್ಲೂಕುಗಳಿಗೆ ಭೇಟಿ ನೀಡಿ ನೀರಿನ ವಿತರಣೆಯ, ಕಾಮಗಾರಿಯ ಸಮಸ್ಯೆಯ ಬಗ್ಗೆ ಸರ್ಕಾರಕ್ಕೆ ಸಮಗ್ರ ವರದಿ ಸಲ್ಲಿಸಿ ರೈತರ ಮೇಲಿನ ಕಂದಾಯ ರದ್ದು ಮಾಡಿಸಿದರು. ರೈತರ ಆಸ್ತಿ ಮುಟ್ಟುಗೋಲು ಹಾಕಿಕೊಳ್ಳುವುದನ್ನು ತಡೆದರು. ರೈತರ ನೀರಿನ ಸಮಸ್ಯೆಯನ್ನು ಕಾಯಂ ಆಗಿ ಪರಿಹರಿಸಲು ಮಹಾದಾಯಿ ನದಿಯನ್ನು ಮಲಪ್ರಭಾ ನದಿಗೆ ಜೋಡಿಸುವ ಸಲಹೆ ನೀಡಿದರು. ಅಲ್ಲದೇ ತಾವು ಮುಖ್ಯಮಂತ್ರಿಯಾದಾಗ ಅಂದಿನ ಗೋವಾ ಮುಖ್ಯಮಂತ್ರಿಯಾಗಿದ್ದ ಶ್ರೀ ರಾಣೆಯವರನ್ನು ಯೋಜನೆಗೆ ಒಪ್ಪಿಸುವಲ್ಲಿ ಯಶಸ್ವಿಯೂ ಆಗಿದ್ದರು ಎಂಬುದು ಗಮನಾರ್ಹ. ವಿರೋಧ ಪಕ್ಷದ ನಾಯಕರಾಗಿ ಸದನದಲ್ಲಿ ಬೊಮ್ಮಾಯಿಯವರು ಮಾಡಿದ ವಿದ್ವತ್ಪೂರ್ಣ ಭಾಷಣಗಳು ಇಂದಿಗೂ ಅಧ್ಯಯನಕ್ಕೆ ಅರ್ಹವಾಗಿವೆ.

## ರಾಜಕೀಯ ಧ್ರುವೀಕರಣದ ನೇತಾರ

1983ರ ಹೊತ್ತಿಗೆ ರಾಜ್ಯದ ರಾಜಕಾರಣದಲ್ಲಿ ಧ್ರುವೀಕರಣ ಅರಂಭಗೊಂಡಿತು. ಗುಂಡೂರಾಯರ ಆಡಳಿತದ ಬಗ್ಗೆ ನಿರಾಶೆಗೊಂಡವರು ಹಾಗೂ ದೇವರಾಜ ಅರಸರ ಬಗ್ಗೆ ಅನುಕಂಪವಿದ್ದವರು, ಅರಸರ ರಾಜಕೀಯ ಸಾಮರ್ಥ್ಯವನ್ನು ಮನಗಂಡಿದ್ದವರು ಒಂದೆಡೆ ನಿಧಾನವಾಗಿ ಸೇರಿ ಅರಸರ ನಾಯಕತ್ವದಲ್ಲಿ ಕರ್ನಾಟಕ ಕ್ರಾಂತಿರಂಗವೆಂಬ ನೂತನ ಪಕ್ಷವನ್ನು ಅಸ್ತಿತ್ವಕ್ಕೆ ತಂದರು. ಅದರ ಸಂಘಟನೆಯಲ್ಲಿ ಮುಂಚೂಣಿಯಲ್ಲಿ ಬಂಗಾರಪ್ಪ, ಜೆ.ಹೆಚ್. ಪಟೇಲ್, ಜಾಲಪ್ಪ, ಅಬ್ದುಲ್ ನಜೀರ್ ಸಾಬ್ ಮುಂತಾದವರಿದ್ದರು.

ಅರಸರ ನಿಧನಾ ನಂತರ ಕ್ರಾಂತಿರಂಗದಲ್ಲೂ ಒಡಕುಂಟಾಯಿತು. ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವನ್ನು ಸೋಲಿಸಿ, ಕರ್ನಾಟಕದಲ್ಲಿ ಕಾಂಗ್ರೆಸೇತರ ಸರ್ಕಾರವನ್ನು ಪ್ರಥಮವಾಗಿ ಅಧಿಕಾರಕ್ಕೆ ತರುವ ಸುವರ್ಣಾವಕಾಶವನ್ನು ವ್ಯರ್ಥಗೊಳಿಸಿಕೊಳ್ಳಬಾರದೆಂಬುದನ್ನು ಮನಗಂಡ ಮುತ್ಸದ್ದಿ ಬೊಮ್ಮಾಯಿಯವರು ಕ್ರಾಂತಿರಂಗದ ಗೆಳೆಯರನ್ನು ಮನವೊಲಿಸಿ ಒಂದುಗೂಡಿಸಿದರು. ಪ್ರಸಕ್ತ ರಾಜಕೀಯ ಸನ್ನಿವೇಶ ಮತ್ತು ಅದರ ಒಳನೋಟವನ್ನು ತಮ್ಮ ಸಂಗಾತಿಗಳಿಗೆ ಮನದಟ್ಟುಮಾಡಿಕೊಟ್ಟರು. ಬೊಮ್ಮಾಯಿಯವರ ಪ್ರಯತ್ನ ಫಲ ನೀಡಿತು. ಕರ್ನಾಟಕದಲ್ಲಿ ನೂತನ ಜನತಾರಂಗದ ಉದಯವಾಯಿತು. ಕಾಂಗ್ರೆಸ್ ಅನ್ನು ವಿರೋಧಿಸುವ ಶಕ್ತಿಗಳೆಲ್ಲವೂ ಒಂದು ತೆಕ್ಕೆಗೆ ಬಂದವು. ಎಸ್.ಆರ್.ಬೊಮ್ಮಾಯಿಯವರು ನೂತನ ಪಕ್ಷದ ಸರ್ವಸಮ್ಮತ ಅಧ್ಯಕ್ಷರಾಗಿ ಆಯ್ಕೆಗೊಂಡರು.

ಆ ಸನ್ನಿವೇಶದಲ್ಲಿ ಬೊಮ್ಮಾಯಿಯವರಿಗೆ ತಮ್ಮ ಪಕ್ಷದ ಸಾಮರ್ಥ್ಯ ಹಾಗೂ ಮಿತಿ ಎರಡರ ಎಚ್ಚರವೂ ಇತ್ತು. ಬದಲಾವಣೆ ಬಯಸಿರುವ ಜನರ ಆಶಯ ಈಡೇರಬೇಕಾದರೆ ಜನಪರ ಹೋರಾಟಗಾರರನ್ನು ಜೊತೆಗೆ ಕರೆದೊಯ್ಯುಬೇಕಿತ್ತು. ರೈತರು, ದಲಿತರು, ಕನ್ನಡ ಹೋರಾಟಗಾರರು ಬೊಮ್ಮಾಯಿ ಅವರ ಕರೆಗೆ ಓಗೊಟ್ಟರು. ಕರ್ನಾಟಕ ರೈತ ಸಂಘ, ದಲಿತ ಸಂಘರ್ಷ ಸಮಿತಿ ಹಾಗೂ ಕನ್ನಡಪರ ಸಂಘಟನೆಗಳ ಬೆಂಬಲದಿಂದ ಜನತಾ ರಂಗದೊಳಕ್ಕೆ ಸೇರಿದವು. ಪಕ್ಷದ ಶಿಸ್ತಿನ ಅಧ್ಯಕ್ಷರಾಗಿ 1983ರ ವಿಧಾನಸಭಾ ಚುನಾವಣೆಗೆ ಸರ್ವ ರೀತಿಯಿಂದಲೂ ಪಕ್ಷವನ್ನು ಸನ್ನದ್ಧಗೊಳಿಸಿದರು.

ಪ್ರಬಲ ಕೋಮುಗಳಿಂದ ಕೂಡಿದ ಜನತಾಪಕ್ಷಕ್ಕೆ ದಲಿತರು, ಹಿಂದುಳಿದವರು, ಮುಸ್ಲಿಮರ ಸೇರ್ಪಡೆಯಿಂದಾಗಿ ಸಾಮಾಜಿಕ ಸಮಾನತೆಯನ್ನು ಸಾಧಿಸಬೇಕೆಂಬ ಬೊಮ್ಮಾಯಿಯವರ ಗುರಿ ಈಡೇರಿದಂತಾಯಿತು. ರಾಜ್ಯದ ಮೂಲೆ ಮೂಲೆಗಳಲ್ಲಿ ಸಂಚರಿಸಿದರು. ರಾಜ್ಯದ ಎಲ್ಲ ವಿಧಾನ ಸಭಾ ಕ್ಷೇತ್ರಗಳಲ್ಲೂ ಅರ್ಹ ಅಭ್ಯರ್ಥಿಗಳನ್ನು ಗುರುತಿಸಿ ಅವರನ್ನು ಚುನಾವಣೆಗೆ ಸಜ್ಜುಗೊಳಿಸಿದರು. ಬೊಮ್ಮಾಯಿಯವರ ಪ್ರಬಲ ಪಕ್ಷ ಸಂಘಟನೆ, ಸರ್ಕಾರದ ವೈಫಲ್ಯಗಳನ್ನು ಎತ್ತಿತೋರಿಸುವ ಧೀರ ನಿಲುವು, ವಿರೋಧ ಪಕ್ಷಗಳನ್ನು ಒಂದುಗೂಡಿಸುವ ಚಾತುರ್ಯದಿಂದ ಜನತಾರಂಗ ರಾಜ್ಯದೆಲ್ಲೆಡೆ ಸದೃಢವಾಯಿತು. ಬೊಮ್ಮಾಯಿ ರಾಜ್ಯ ನಡೆಸುವ ಮುಂದಾಳು ಎಂಬ ಮಾತು ಜನಮಾನಸವಾಯಿತು.

## ಅಭೂತಪೂರ್ವ ಜಯ

ರಾಜ್ಯದಲ್ಲಿ ಅಧಿಕಾರ ಹಿಡಿಯಬೇಕೆಂಬ ದಶಕಗಳ ಹೋರಾಟಕ್ಕೆ ಜಯ ಸಿಕ್ಕಿತ್ತು. ಬೊಮ್ಮಾಯಿ ಅವರ ರಾಜಕೀಯ ಶ್ರಮ ಸಾರ್ಥಕವಾಗಿತ್ತು. ಇವರ ಅಧ್ಯಕ್ಷತೆಯಲ್ಲಿ 1983 ರಲ್ಲಿ ಜನತಾರಂಗ ಅಭೂತಪೂರ್ವ ಜಯಗಳಿಸಿತು. ಜನತಾಪಕ್ಷದ ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿಯಾಗಿದ್ದ ಶ್ರೀಯುತ ರಾಮಕೃಷ್ಣ ಹೆಗಡೆಯವರು ರಾಜ್ಯದ ಮುಖ್ಯಮಂತ್ರಿಗಳಾದರು. ಹೆಗಡೆಯವರ ನಂತರ ಬೊಮ್ಮಾಯಿಯವರು ಸಚಿವರಾಗಿ ಪ್ರಮಾಣ ವಚನ ಸ್ವೀಕರಿಸಿ ಸಂಪುಟದಲ್ಲಿ ಹಿರಿಯರಾದರು. ಯಾವ ಖಾತೆಯನ್ನು ವಹಿಸಿಕೊಳ್ಳಬೇಕೆಂಬ ಆಯ್ಕೆಯ ಸ್ವಾತಂತ್ರ್ಯವನ್ನು ಬೊಮ್ಮಾಯಿಯವರಿಗೇ ನೀಡಲಾಗಿತ್ತು. ಬೊಮ್ಮಾಯಿಯವರು ಕೈಗಾರಿಕಾ ಸಚಿವರಾದರು.

ಸಣ್ಣ ಕೈಗಾರಿಕೆಗೆ ಮೊದಲ ಪ್ರಾಶಸ್ತ್ಯ ನೀಡಿ ರಾಜ್ಯದ ಪ್ರತಿ ಜಿಲ್ಲೆಯಲ್ಲಿಯೂ ಕೈಗಾರಿಕೆಯನ್ನು ಅಭಿವೃದ್ಧಿಪಡಿಸಲು ಸಂಕಲ್ಪ ಮಾಡಿದರು. ಅವರ ಕಾಳಜಿಯ ಪರಿಣಾಮವಾಗಿಯೇ ಬೆಂಗಳೂರಿನ ಪೀಣ್ಯ ಕೈಗಾರಿಕಾ ಪ್ರದೇಶದ 2ನೆಯ ಹಾಗೂ 3ನೇ ಹಂತವಲ್ಲದೇ, ಎಲೆಕ್ಟ್ರಾನಿಕ್ ಸಿಟಿ, ಜಿಗಣಿ ಕೈಗಾರಿಕಾ ಪ್ರದೇಶ ಸ್ಥಾಪನೆಗೊಂಡವು. ಬೀದರ್, ರಾಯಚೂರು, ಧಾರವಾಡಗಳಲ್ಲಿ ಕೈಗಾರಿಕಾ ಕೇಂದ್ರಗಳನ್ನು ಅಭಿವೃದ್ಧಿ ಪಡಿಸಿದರು. ಜಿಡ್ಡುಗಟ್ಟಿದ ಆಡಳಿತ ಮಂಡಳಿಗಳನ್ನು ಚುರುಕುಗೊಳಿಸುವ ಮುಖೇನ ಕೇವಲ ಎರಡು ವರ್ಷಗಳಲ್ಲಿ ಪ್ರಮುಖ ಸಾರ್ವಜನಿಕ ಉದ್ದಿಮೆಗಳಾದ ಎನ್.ಜಿ.ಇ.ಎಫ್., ಎಂ.ಸಿ.ಎಫ್., ಎಂ.ಪಿ.ಎಂ, ಕೆ.ಎಸ್.ಡಿ.ಎಲ್ ಲಾಭ ಮಾಡತೊಡಗಿದವು.

ಇಂದಿನ ಕರ್ನಾಟಕ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಅಭಿವೃದ್ಧಿಗೆ ಬುನಾದಿಯನ್ನು ಹಾಕಿದ ಗೌರವ ಬೊಮ್ಮಾಯಿಯವರಿಗೆ ಸಲ್ಲುತ್ತದೆ. 1983 ರಲ್ಲಿ ರಾಜ್ಯದ ಐ.ಟಿ. ಚಟುವಟಿಕೆಗೆ ಚಾಲನೆ ನೀಡಿ ಟೆಕ್ಸಾಸ್ ಇನ್ಸ್ಟ್ರುಮೆಂಟ್ ಎಂಬ ಕಂಪೆನಿಗೆ ಅನುಮತಿ ನೀಡಿದರು.

1984ರ ಲೋಕಸಭೆ ಚುನಾವಣೆಯ ಫಲಿತಾಂಶದ ಫಲವಾಗಿ ವಿಧಾನ ಸಭೆಯಲ್ಲಿ ಬಹುಮತವಿದ್ದರೂ ಕೂಡಾ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಎತ್ತಿಹಿಡಿಯಲು ರಾಜ್ಯದ ಆಡಳಿತಾರೂಢ ಜನತಾ ಸರ್ಕಾರವನ್ನ ವಿಸರ್ಜಿಸಿ ವಿಧಾನಸಭೆಗೆ ಹೊಸದಾಗಿ ಜನಾದೇಶ ಪಡೆಯಲು ನಿರ್ಧರಿಸಲಾಯಿತು.

ಇದೇ ಸಂದರ್ಭದಲ್ಲಿ ಹೆಚ್ಚುವರಿಯಾಗಿ ಹಣಕಾಸು ಖಾತೆಯ ಜವಾಬ್ದಾರಿಯನ್ನು ಹೊಂದಿದ್ದ ಬೊಮ್ಮಾಯಿಯವರು ಜನಪರವಾದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಎರಡು ರೂಪಾಯಿಗೆ ಒಂದು ಕೆ.ಜಿ.ಅಕ್ಕಿ, ಗೋಧಿ, ರಿಯಾಯ್ತಿ ದರದಲ್ಲಿ ಧೋತಿ ಮತ್ತು ಪಂಚೆ ನೀಡುವುದನ್ನು ರಾಜ್ಯದಲ್ಲಿ ಮೊದಲ ಬಾರಿಗೆ ಜಾರಿಗೆ ತಂದರು.

## ಸಮರ್ಥ ಸಚಿವ

1985ರ ಚುನಾವಣೆಯಲ್ಲಿ ಪೂರ್ಣ ಬಹುಮತದೊಂದಿಗೆ ಅಧಿಕಾರಕ್ಕೆ ಬಂದ ಸರ್ಕಾರದಲ್ಲಿ ಬೊಮ್ಮಾಯಿಯವರು ಕಂದಾಯ ಮಂತ್ರಿ, ಕಂದಾಯ ದಾಖಲೆಗಳು, ಭೂ ಕಂದಾಯ, ಭೂ ಮಾಪನ, ಆಸ್ತಿ ನೋಂದಣಿ, ಇವುಗಳನ್ನು ಸರಳೀಕರಣಗೊಳಿಸಿ ಸಾರ್ವಜನಿಕರಿಗೆ ಸುಲಭವಾಗಿ ಸಿಗುವಂತೆ ಮಾಡಿದ ಕೀರ್ತಿ ಬೊಮ್ಮಾಯಿಯವರಿಗೆ ಸಲ್ಲುತ್ತದೆ. ಕರ್ನಾಟಕದ ಭೂ ಸುಧಾರಣೆ ಎಪ್ಪತ್ತರ ದಶಕದಲ್ಲೇ ಅನುಷ್ಠಾನಗೊಂಡಿದ್ದರೂ ಭೂ ಹಂಚಿಕೆ ಕೇವಲ ಕಾಗದದ ಮೇಲೇ ಉಳಿದಿದ್ದುದನ್ನು ಮನಗಂಡ ಬೊಮ್ಮಾಯಿಯವರು ನ್ಯಾಯಾಲಯದ ಮೆಟ್ಟಿಲು ಏರಿದ್ದ ಪ್ರಕರಣಗಳ ಶೀಘ್ರ ವಿಲೇವಾರಿಗಾಗಿ ವಿಭಾಗ ಮಟ್ಟದಲ್ಲಿ ನ್ಯಾಯ ಮಂಡಳಿಗಳನ್ನು ಸ್ಥಾಪಿಸಿದರು. ರಾಜ್ಯದಲ್ಲಿ ನಾಡ ಕಚೇರಿಗಳನ್ನು ಸ್ಥಾಪಿಸಿದ್ದೇ ಅಲ್ಲದೆ ಹೊಸ ಜಿಲ್ಲೆಗಳ ರಚನಾ ಕಾರ್ಯವನ್ನೂ ಕೈಗೆತ್ತಿಕೊಂಡರು. ಇದಲ್ಲದೇ ರೈತರಿಗೆ ಬೆಳೆ ನಷ್ಟವಾದಾಗ ಪರಿಹಾರವನ್ನು ತುಂಬಿಕೊಡಲು ಬೆಳೆ ವಿಮೆ ನೀಡುವ ಯೋಜನೆಯನ್ನು ಕೂಡಾ ಬಿಜಾಪುರ ಜಿಲ್ಲೆಯಲ್ಲಿ ಪ್ರಾಯೋಗಿಕವಾಗಿ ಜಾರಿಗೆ ತಂದರು.

ಈ ಸಂದರ್ಭದಲ್ಲಿಯೇ ರಾಜ್ಯವು ಹಿಂದೆಂದೂ ಕಾಣದಂತಹ ತೀವ್ರ ಬರಕ್ಕೆ ತುತ್ತಾಯಿತು. ಕಂದಾಯ ಸಚಿವರಾಗಿ ಕೂಡಲೇ ರಾಜ್ಯದ ಎಲ್ಲ ಹಿರಿಯ ಅಧಿಕಾರಿಗಳ ಸಭೆ ಕರೆದು ಯುದ್ಧೋಪಾದಿಯಲ್ಲಿ ಬರಪರಿಹಾರ ಕಾರ್ಯಗಳನ್ನು ಕೈಗೆತ್ತಿಕೊಂಡರು. ಇದಕ್ಕಾಗಿ ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಸಮಿತಿಗಳನ್ನು ರಚಿಸಿ ಕಾರ್ಯಕ್ರಮಗಳ ಅನುಷ್ಠಾನದ ವೇಗವನ್ನು ಹೆಚ್ಚಿಸಿದರು. ಎಲ್ಲಾ ಹಿರಿಯ ಅಧಿಕಾರಿಗಳು ತಿಂಗಳಲ್ಲಿ ಹದಿನೈದು ದಿವಸ ಕಡ್ಡಾಯವಾಗಿ ಬರಪೀಡಿತ ಪ್ರದೇಶದಲ್ಲಿ ಪ್ರವಾಸಮಾಡಿ ಕಾರ್ಯಕ್ರಮಗಳ ಅನುಷ್ಠಾನ ಮೇಲ್ವಿಚಾರಣೆ ನಡೆಸುವಂತೆ ಮಾಡಿದರು. ಭಾನುವಾರಗಳಲ್ಲದೇ ಯಾವುದೇ ರಜಾ ದಿನಗಳನ್ನೂ ಲೆಕ್ಕಿಸದೇ ಅಧಿಕಾರಿಗಳ ಸಭೆ ನಡೆಸಿದರು. ಹೀಗೆ ಬರಪರಿಸ್ಥಿತಿಯನ್ನು ಯಶಸ್ವಿಯಾಗಿ ನಿಭಾಯಿಸಲು ಇಡೀ ಆಡಳಿತ ಯಂತ್ರವನ್ನೇ ತಮ್ಮ ಹಿಡಿತಕ್ಕೆ ತೆಗೆದುಕೊಂಡು ರಾಜ್ಯದ ಪ್ರತಿ ಫಲಾನುಭವಿಗೆ ಪರಿಹಾರ ದೊರಕುವಂತೆ ನಿಗಾವಹಿಸಿದರು.

ಕರ್ನಾಟಕವು ಬರಪರಿಸ್ಥಿತಿಯನ್ನು ಯಾವರೀತಿಯಿಂದ ನಿಭಾಯಿಸುತ್ತಿದೆ ಎಂಬುದನ್ನು ಅರಿಯಲು ಬೊಮ್ಮಾಯಿಯವರ ಆಹ್ವಾನದ ಮೇಲೆ ಪ್ರಧಾನಿ ರಾಜೀವ್‌ಗಾಂಧಿಯವರು ರಾಜ್ಯಕ್ಕೆ ಭೇಟಿ ನೀಡಿದರು. ಕುಡಿಯುವ ನೀರಿಗಾಗಿ ತೋಡಿರುವ ಕೊಳವೆ ಬಾವಿಗಳು, ಉದ್ಯೋಗ ಭರವಸೆ ಯೋಜನೆಯಲ್ಲಿ ಕೈಗೊಂಡ

ಕೆರೆ ಕಟ್ಟೆ ಕಾಮಗಾರಿಗಳು, ಒಣ ಭೂಮಿ ಅಭಿವೃದ್ಧಿ, ಇದಲ್ಲದೇ ಕುಡಿಯುವ ನೀರಿನ ಸಮಸ್ಯೆ ಇರುವ ಹಳ್ಳಿಗಳನ್ನು ಎ.ಬಿ.ಸಿ.ಡಿ. ಎಂದು ವಿಂಗಡಿಸಿ ಪ್ರಾಶಸ್ತ್ಯದ ಮೇಲೆ ಆ ಹಳ್ಳಿಗಳಲ್ಲಿ ಕಿರು ನೀರು ಸರಬರಾಜು ಯೋಜನೆಗಳನ್ನು ಕೈಗೆತ್ತಿಕೊಳ್ಳುವ ಕ್ರಮ, ಸಾವಿರಾರು ಕೊಳವೆ ಬಾವಿಗಳನ್ನು ತೋಡಿಸಿ ನೀರಿನ ಅಭಾವ ಉಂಟಾಗದಂತೆ ಕೈಗೊಂಡ ಕ್ರಮಗಳು ಇತ್ಯಾದಿಗಳನ್ನು ಪ್ರಶಂಸಿದ ಪ್ರಧಾನಿಯುವರು, ಬೊಮ್ಮಾಯಿಯವರು ಅಭಿವೃದ್ಧಿ ಕಾರ್ಯ ಕೈಗೊಳ್ಳುವಾಗ ಅನುಸರಿಸುವ ರಾಜಕೀಯ ನೈಪುಣ್ಯವನ್ನು ಕೊಂಡಾಡಿದ್ದರು.

## ಮುಖ್ಯಮಂತ್ರಿಯ ಗದ್ದುಗೆಗೆ

ಜನ ಸಂಘಟನೆ ಮೂಲಕ ಜನತಾರಂಗವನ್ನು ಅಧಿಕಾರಕ್ಕೆ ತರಲು ಪ್ರಮುಖ ಪಾತ್ರವಹಿಸಿದ್ದ ಬೊಮ್ಮಾಯಿ ಅವರು 1983 ರಿಂದ 1988 ರವರೆಗೆ ಜನತಾ ಸರ್ಕಾರದ ಆಡಳಿತ ನಿರ್ವಹಣೆಯಲ್ಲಿ ಪಕ್ಷದ ಆಂತರಿಕ ಒಗ್ಗಟ್ಟನ್ನು ಕಾಪಾಡುವುದರಲ್ಲಿ ವಹಿಸಿದ ಪಾತ್ರ ಅವರ ಘನತೆಯನ್ನು ಮತ್ತಷ್ಟು ಎತ್ತರಕ್ಕೆ ಒಯ್ದಿತ್ತು. ತೀವ್ರ ಬರಗಾಲವನ್ನು ಸಮರ್ಥವಾಗಿ ಎದುರಿಸಿ ದಕ್ಷ ಆಡಳಿತಗಾರನೆಂಬ ಖ್ಯಾತಿ ಹೊಂದಿದ್ದ ಬೊಮ್ಮಾಯಿಯವರು ಹೆಗಡೆಯವರ ಉತ್ತರಾಧಿಕಾರಿ ಎಂದು ಶಾಸಕರು ಮತ್ತು ಜನತೆ ಸಹಜವಾಗಿ ನಂಬಿದ್ದರು. ಈ ಬಗ್ಗೆ ಪತ್ರಕರ್ತರು ಹಲವು ಬಾರಿ ಪ್ರಶ್ನಿಸಿದಾಗ "ಖಾಲಿ ಇರದ ಹುದ್ದೆಗೆ ನಾನು ಅರ್ಜಿ ಹಾಕಿಕೊಳ್ಳುವುದಿಲ್ಲ" ಎಂದು ಉತ್ತರಿಸಿದ್ದರು. ಟೆಲಿಫೋನ್ ಕದ್ದಾಲಿಕೆ ಪ್ರಕರಣದಲ್ಲಿ ಹೆಗಡೆಯವರು ರಾಜೀನಾಮೆ ಕೊಡುವ ಪರಿಸ್ಥಿತಿ ಬಂದಾಗ ಪಕ್ಷದಲ್ಲಿ ಆತಂಕ ಮೂಡಿತು.

ಈ ಸಂದರ್ಭದಲ್ಲಿ ಮುಖ್ಯಮಂತ್ರಿ ಹುದ್ದೆಗೆ ಹಲವರು ಸಿದ್ಧಗೊಂಡರು. ಈ ಪೈಕಿ ಬೊಮ್ಮಾಯಿ, ದೇವೇಗೌಡ, ನಜೀರ್ ಸಾಬ್, ರಾಚಯ್ಯ, ಜೆ.ಹೆಚ್.ಪಟೇಲ್ ಪ್ರಮುಖರಾಗಿದ್ದರು.

ಎಲ್ಲರಿಗೂ ಆಡಳಿತದಲ್ಲಿ ಅನುಭವ ಮತ್ತು ದಕ್ಷತೆ ಇತ್ತು. ಆದರೆ, ಶಾಸಕರಿಗೆ ಕಾಡುತ್ತಿದ್ದ ಒಂದು ಚಿಂತೆಯೆಂದರೆ ಪಕ್ಷದ ಒಗ್ಗಟ್ಟನ್ನು ಕಾಪಾಡುವುದು.

ಈ ನಿಟ್ಟಿನಲ್ಲಿ ಎಲ್ಲರಿಗೂ ಬೇಕಾದ ವ್ಯಕ್ತಿಯೆಂದರೆ ಬೊಮ್ಮಾಯಿಯವರು ಮಾತ್ರ. ದೆಹಲಿಯಲ್ಲಿ ರಾಮಕೃಷ್ಣ ಹೆಗಡೆಯವರು ರಾಜೀನಾಮೆಯನ್ನು ನೀಡಿದ ಸಂದರ್ಭದಲ್ಲಿ ಬೊಮ್ಮಾಯಿಯವರನ್ನು ಮುಂದಿನ ಮುಖ್ಯಮಂತ್ರಿಯೆಂದು ಬಿಂಬಿಸಿದರು. ನಜೀರ್ ಸಾಬ್‌ರವರು ಕ್ಯಾನ್ಸರ್‌ನಿಂದ ಹಾಸಿಗೆ ಹಿಡಿದ ಕಾರಣ ತಮ್ಮ ಬೆಂಬಲವನ್ನು ಬೊಮ್ಮಾಯಿಯವರಿಗೆ ಸೂಚಿಸಿದರು. ಕ್ರಾಂತಿರಂಗದಿಂದ ಬಂದ ಜಾಲಪ್ಪನವರು ಪಕ್ಷದ ಎಲ್ಲ ಹಿಂದುಳಿದ ವರ್ಗದ ಶಾಸಕರಿಗೂ ಬೊಮ್ಮಾಯಿಯವರನ್ನು ಬೆಂಬಲಿಸುವಂತೆ ಹೇಳಿದರು. ಕಣದಲ್ಲಿದ್ದ ಆಪ್ತ ಸ್ನೇಹಿತರಾದ ಜೆ.ಹೆಚ್.ಪಟೇಲ್ ಕಣದಿಂದ ಹಿಂದೆ ಸರಿಯುವಂತೆ ಮನವೊಲಿಸಲು ಜಾಲಪ್ಪನವರು ಯಶಸ್ವಿಯಾದರು.

ಇಷ್ಟಾದರೂ ಕೇಂದ್ರೀಯ ವೀಕ್ಷಕರಾಗಿ ಆಗಮಿಸಿದ್ದ ಚಿಮನ್ ಬಾಯ್ ಪಟೇಲ್, ಜಿ.ಕೆ.ಮಲ್ಹೋತ್ರ, ರಾಷ್ಟ್ರೀಯ ಅಧ್ಯಕ್ಷರಾಗಿದ್ದ ಚಂದ್ರಶೇಖರ್, ಹೆಗಡೆ ಯಾರಿಗೂ ಪಕ್ಷದಲ್ಲಿ ಒಮ್ಮತದ ಅಭಿಪ್ರಾಯವನ್ನು ಮೂಡಿಸುವುದು ಸಾಧ್ಯವಾಗದೆ

ಶಾಸಕಾಂಗ ಪಕ್ಷದ ಸಭೆ ಕರೆದು ಚುನಾವಣೆ ಮಾಡುವುದು ಅನಿವಾರ್ಯವಾಯಿತು. ಕೊನೆಗಳಿಗೆಯ ಸಂಧಾನಗಳು ವಿಫಲವಾಗಿ ಅಂತಿಮವಾಗಿ ಬೊಮ್ಮಾಯಿ, ರಾಚಯ್ಯ ಮತ್ತು ದೇವೇಗೌಡರು ಕಣದಲ್ಲುಳಿದರು.

ಸಂಜೆ ಶಾಸಕಾಂಗ ಸಭೆಯಲ್ಲಿ ನಡೆದ ಚುನಾವಣೆಯ ಫಲಿತಾಂಶ ಹೊರಬಂದಾಗ ಬೊಮ್ಮಾಯಿಯವರಿಗೆ ಹೆಚ್ಚಿನ ಶಾಸಕರ ಬೆಂಬಲವಿದ್ದುದರಿಂದ ಶಾಸಕಾಂಗ ಪಕ್ಷದ ನಾಯಕರಾಗಿ ಆಯ್ಕೆಗೊಂಡಿದ್ದರು. ಆದರೂ ನಂತರ ಇದನ್ನು ಒಮ್ಮತದ ಆಯ್ಕೆ ಎಂದು ಘೋಷಿಸಲಾಯಿತು.

ಮರುದಿನ ರಾಜಭವನದಲ್ಲಿ ಕರ್ನಾಟಕದ 17ನೇ ಮುಖ್ಯಮಂತ್ರಿಯಾಗಿ ಕಮಡೊಳ್ಳಿಯ ಸೋಮಪ್ಪ ರಾಯಪ್ಪ ಬೊಮ್ಮಾಯಿಯವರು ಪ್ರಮಾಣ ವಚನ ಸ್ವೀಕರಿಸಿದರು.

## ಮುಖ್ಯಮಂತ್ರಿಯ ದಿಟ್ಟ ನಿಲುವುಗಳು

ನಾಲ್ಕು ವರ್ಷ ಸತತವಾದ ಬರ, ರಾಜ್ಯದ ಕೃಷಿ ವಲಯದ ಉತ್ಪಾದನೆ ಕುಸಿಯಲು ಕಾರಣವಾಗಿತ್ತು. ಕೇಂದ್ರ ಸರ್ಕಾರದ ಅಸಹಕಾರ ಮನೋಭಾವದಿಂದ ಕರ್ನಾಟಕಕ್ಕೆ ನ್ಯಾಯ ಸಮ್ಮತವಾಗಿ ಬರಬೇಕಾದ ಹಣಕಾಸಿನ ನೆರವು ಬಂದಿರಲಿಲ್ಲ. ಅಲ್ಲದೇ, ಆಂತರಿಕ ಭಿನ್ನಾಭಿಪ್ರಾಯದಿಂದ ಆಡಳಿತದ ಮೇಲೆ ದುಷ್ಪರಿಣಾಮ ಬೀರಿ ಆದಾಯದಲ್ಲಿ ಹೆಚ್ಚಳವಾಗಿರಲಿಲ್ಲ. ಇದರಿಂದ ಬೊಮ್ಮಾಯಿಯವರು ಮುಖ್ಯಮಂತ್ರಿಗಳಾದಾಗ ಹಣಕಾಸಿನ ಬಿಕ್ಕಟ್ಟು ಬಳುವಳಿಯಾಗಿ ಬಂದಿತ್ತು. ಬೊಮ್ಮಾಯಿಯವರು ಮೊದಲ ಈ ವ್ಯವಸ್ಥೆಯನ್ನು ಸರಿಪಡಿಸುವ ಉದ್ದೇಶದಿಂದ ಎಲ್ಲ ಹಿರಿಯ ಅಧಿಕಾರಿಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡರು. ಅತ್ಯಧಿಕ ಆದಾಯ ಕೊಡುವ ವಾಣಿಜ್ಯ ತೆರಿಗೆ ಇಲಾಖೆಗೆ ಯಾವುದೇ ರೀತಿ ಹಸ್ತಕ್ಷೇಪ ಮಾಡುವುದಿಲ್ಲ ಎಂದು ಭರವಸೆಯನ್ನಿತ್ತರು. ಇವರಿಗೆ ಪ್ರತಿ ತಿಂಗಳು ಶೇ. 25 ರಷ್ಟು ಆದಾಯವನ್ನು ಹೆಚ್ಚಿಸುವ ಗುರಿಯನ್ನು ಕೊಟ್ಟರು. ಹೆಚ್ಚಿನ ಹಣಸೋರಿಕೆ ಇರುವ ಅಬಕಾರಿ ಇಲಾಖೆಯಲ್ಲಿ ಪ್ರಪ್ರಥಮ ಬಾರಿಗೆ ಹಿರಿಯ ಅಧಿಕಾರಿಗಳ ಹಾಗೂ ಅಬ್ಕಾರಿ ಉದ್ಯಮಿಗಳ ನೇರ ಸಭೆಯನ್ನು ನಡೆಸಿದರು. ತೆರಿಗೆ ಸೋರಿಕೆಯನ್ನು ತಪ್ಪಿಸಲು ಮತ್ತು ಶೇ.30 ರಷ್ಟು ಆದಾಯವನ್ನು ಪ್ರತಿ ತಿಂಗಳು ಹೆಚ್ಚಿಸಲು ಅಬ್ಕಾರಿ ಉದ್ಯಮಿಗಳನ್ನು ಒಪ್ಪಿಸಿದರು. ಆದಾಗ್ಯೂ ಕೆಲವು ಡಿಸ್ಟಿಲರಿಗಳ ಮಾಲೀಕರು ಸೆಕೆಂಡ್ಸ್ ಮಾರಾಟ ನಿಲ್ಲಿಸಲಿಲ್ಲ. ಮಾರಾಟ ತೆರಿಗೆ ಇಲಾಖೆ ಮತ್ತು ಅಬ್ಕಾರಿ ತೆರಿಗೆ ಇಲಾಖೆ ಹಿರಿಯ ಅಧಿಕಾರಿಗಳು ತಮ್ಮ ಸಿಬ್ಬಂದಿ ಜೊತೆ ಜೀಪು ಸಮೇತ ಡಿಸ್ಟಿಲರಿಗಳ ಮುಂದೆ ಕಾದು ನಿಂತರು. ತೆರಿಗೆ ಇಲ್ಲದೇ ಮದ್ಯ ಮಾರಾಟಮಾಡುವುದು ಅಬ್ಕಾರಿ ಉದ್ಯಮಿಗಳಿಗೆ ಸಾಧ್ಯವಾಗದೇ ಹೋಯಿತು. ಈ ಬಿಗಿ ಕ್ರಮ ಹಿಂದೆಂದೂ ರಾಜ್ಯದಲ್ಲಿ ನಡೆದಿರಲಿಲ್ಲ. ಇದರಿಂದ ಅಬ್ಕಾರಿ ಲಾಬಿ ಇವರ ಮೇಲೆ ಕಿಡಿಕಾರಿತು. ಆದರೆ, ಇದಕ್ಕೆ ಲೆಕ್ಕಿಸದೇ ಸೋರಿಕೆ ನಿಲ್ಲಿಸುವ ಮೂಲಕ ಹೆಚ್ಚಿನ ಲಾಭವನ್ನು ತರಲು ಬೊಮ್ಮಾಯಿ ಯಶಸ್ವಿಯಾದರು

ಬೊಮ್ಮಾಯಿಯವರು ಕೈಗಾರಿಕಾ ಮಂತ್ರಿಯಾದಾಗ ತೆಗೆದುಕೊಂಡ ಕ್ರಮದಿಂದ ನಷ್ಟದಲ್ಲಿದ್ದ ಬಹುತೇಕ ಸಾರ್ವಜನಿಕ ಉದ್ಯಮಗಳು ಲಾಭವನ್ನು ಮಾಡಲು ಆರಂಭಿಸಿದ್ದವು. ಕೆಲವು ಪ್ರಮುಖ ಕೈಗಾರಿಕೆಗಳ ಮೇಲೆ ಖಾಸಗೀ ವಲಯದ ಉದ್ಯಮಿಗಳ ಕಣ್ಣು ಬಿದ್ದಿತು. ಮಂಗಳೂರು ಕೆಮಿಕಲ್ಸ್ ಅಂಡ್ ಫರ್ಟಿಲೈಸರ್ಸ್ ಲಿ, ಇದರಲ್ಲಿ ಪ್ರಮುಖವಾಗಿತ್ತು. ಉದ್ಯಮಿ ಮನು ಛಾಬ್ರಿಯಾ ಬಂಡವಾಳ ಮಾರುಕಟ್ಟೆಯಲ್ಲಿ ಈ ಕಂಪೆನಿಯ ಶೇ.5 ರಷ್ಟು ಷೇರನ್ನು ಖರೀದಿ ಮಾಡಿದರು. ಅವರಿಗೆ ಆಡಳಿತ ಮಂಡಳಿಯಲ್ಲಿ ಹಿಡಿತ ಸಾಧಿಸಲು ಇನ್ನು ಶೇ.25 ರಷ್ಟು ಷೇರು ಅಗತ್ಯವಿತ್ತು. ಇದಕ್ಕಾಗಿ ಭಾರೀ ಪ್ರಮಾಣದ ಲಾಬಿ ನಡೆಸಿದರು.

ಮಾರುಕಟ್ಟೆಯಲ್ಲಿ ಇದರ ಪರಿಣಾಮವಾಗಿ ಎಂ.ಸಿ.ಎಫ್. ಷೇರು ಬೆಲೆ ಮೂರು ಪಟ್ಟು ಹೆಚ್ಚಾಯಿತು. ಮನು ಛಾಬ್ರಿಯಾ ಬೊಮ್ಮಾಯಿಯವರನ್ನು ಕಂಡು ಶೇ.22 ರಷ್ಟು ಷೇರುಗಳನ್ನು ತಮಗೆ ಮಾರಲು ವಿನಂತಿಸಿಕೊಂಡರು. ಛಾಬ್ರಿಯಾ ಅಷ್ಟೊತ್ತಿಗಾಗಲೇ ಸಂಬಂಧಪಟ್ಟ ಇಲಾಖೆಯಿಂದ ಇದರ ಬಗ್ಗೆ ಕಡತವನ್ನು ಸಿದ್ಧಪಡಿಸಿಕೊಂಡು ಬಂದಿದ್ದರು. ಬೊಮ್ಮಾಯಿಯವರು ಲಾಭದಾಯಕ ಇರುವ ಎಂ.ಸಿ.ಎಫ್ ಷೇರುಗಳನ್ನು ಮಾರುವ ಉದ್ದೇಶವಿಲ್ಲವೆಂದು ಸ್ಪಷ್ಟವಾಗಿ ಹೇಳಿದರು. ಆಗ ಛಾಬ್ರಿಯಾ ಚುನಾವಣೆಗೆ ಆರ್ಥಿಕ ನೆರವು ನೀಡುವ ಬಗ್ಗೆ ಪ್ರಸ್ತಾಪಿಸಿದಾಗ ಬೊಮ್ಮಾಯಿ ಉದ್ಯಮಿಗೆ ಹೊರಹೋಗುವ ದಾರಿ ತೋರಿಸಿದರು. ಹೀಗೆ ಸಾರ್ವಜನಿಕ ಆಸ್ತಿಯನ್ನು ಯಾವುದೇ ಆಸೆಗೆ ಬಲಿಯಾಗದೇ ಬೊಮ್ಮಾಯಿಯವರು ಕಾಪಾಡಿದರು.

ಮೈಸೂರು ಕಾಗದದ ಕಾರ್ಖಾನೆಯನ್ನು ಖಾಸಗೀಕರಣಗೊಳಿಸಲು ಅಧಿಕಾರಿಗಳು ಬಹಳ ಒತ್ತಡ ತಂದಿದ್ದರು. ಇದಕ್ಕೊಪ್ಪದ ಬೊಮ್ಮಾಯಿಯವರು ವಿದೇಶದಿಂದ ಕಚ್ಚಾವಸ್ತು ತರುವ ವ್ಯವಸ್ಥೆಮಾಡಿ ಅದನ್ನು ಲಾಭದಾಯಕ ಉದ್ದಿಮೆಯಾಗಿಸಿದರು. ಇದಲ್ಲದೇ ಎನ್.ಜಿ.ಇ.ಎಫ್. ಹಾಗೂ ಮೈಸೂರು ಲ್ಯಾಂಪ್ಸ್ ಅನ್ನು ಲಾಭದೆಡೆಗೆ ತಂದರು.

ಹೈದರಾಬಾದ್ ಕರ್ನಾಟಕದ ಜಿಲ್ಲೆಗಳ ಅಭಿವೃದ್ಧಿಗಾಗಿ ವಿಶೇಷ ಆಸಕ್ತಿ ತೋರಿದ ಬೊಮ್ಮಾಯಿಯವರು ಪ್ರತ್ಯೇಕ ಮಂಡಳಿಯನ್ನು ಸ್ಥಾಪಿಸಿದರು. ರಾಜ್ಯದ ಪ್ರಾದೇಶಿಕ ಅಸಮತೋಲನದ ನಿವಾರಣೆಗೆ ಸರ್ಕಾರ ಕೈಗೊಂಡ ಮೊದಲ ಪ್ರಮುಖ ಪ್ರಯತ್ನ ಇದಾಗಿದೆ.

ರಾಜ್ಯ ಹಣಕಾಸು ಸಚಿವರೂ ಆಗಿದ್ದ ಬೊಮ್ಮಾಯಿಯವರು 1989–90ರ ಬಜೆಟ್ ಮಂಡಿಸುವ ಮೂಲಕ ತಮ್ಮ ಚಿಂತನೆಗೆ ಹೊಸರೂಪ ನೀಡಿ ಅಭಿವೃದ್ಧಿಯ ಕನಸು ನೀಡಿದರು. ಕಲಿಕೆಯಲ್ಲೇ ಗಳಿಕೆ, ಹಸಿರು ಕಿರಣ, ನಜೀರ್ ನಿವಾಸ್ ಯೋಜನಾ ಇವು ಬೊಮ್ಮಾಯಿಯವರ ಆಯವ್ಯಯದ ಹೊಸ ಯೋಜನೆಗಳು. ರೈತರ ನಲವತ್ತು ಸಾವಿರ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಕಲ್ಪಿಸುವ ಮುಖಾಂತರ ಕೃಷಿ ಕ್ಷೇತ್ರಕ್ಕೆ ಸುಮಾರು 80 ಕೋಟಿ ರೂಪಾಯಿಗಳನ್ನು ಒದಗಿಸಿದರು. ಕೃಷಿಗೆ ಪೂರಕವಾಗುವ ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಒತ್ತನ್ನು ನೀಡಿ ಜಿಲ್ಲಾ ಪರಿಷತ್ತುಗಳಿಗೆ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಒಟ್ಟು ರೂ. 1016 ಕೋಟಿ ನೀಡಿ ಗ್ರಾಮೀಣ ಪ್ರದೇಶದಲ್ಲಿ ಮೂಲಭೂತ ಸೌಕರ್ಯ ಸ್ಥಾಪನೆಗೆ ಶಕ್ತಿಯನ್ನು ತುಂಬಿದರು. ಕೃಷಿ, ವಿದ್ಯುತ್, ನೀರಾವರಿ ಶಿಕ್ಷಣ ಹೀಗೆ ಎಲ್ಲ ರಂಗದ ಉನ್ನತಿಯನ್ನು ಗಮನದಲ್ಲಿರಿಸಿಕೊಂಡು ಮಂಡಿಸಿದ ಬೊಮ್ಮಾಯಿಯವರ ಜನಪರ ಬಜೆಟ್ ರಾಜ್ಯದ ಸಮಗ್ರ ಅಭಿವೃದ್ಧಿಗೆ ಪೂರಕವಾಗಿತ್ತು.

## ರಾಷ್ಟ್ರಪತಿ ಆಡಳಿತ – ಐತಿಹಾಸಿಕ ತೀರ್ಪು

1989ರ ಏಪ್ರಿಲ್ ತಿಂಗಳು ರಾಜ್ಯದ ಜನತೆ ರಾಜಕೀಯ ಒಳಸುಳಿಗಳು, ತಂತ್ರಗಾರಿಕೆಗೆ ಹಾಗೂ ಪ್ರಜಾತಂತ್ರದ ಬೇರುಗಳೇ ಅಲುಗಾಡಿದ್ದಕ್ಕೆ ಮೂಕ ಸಾಕ್ಷಿಯಾದರು. ಪಕ್ಷದಲ್ಲಿ ಮೂಡಿದ ಆಂತರಿಕ ಭಿನ್ನಾಭಿಪ್ರಾಯ, ಗುಂಪುಗಾರಿಕೆ ತಾರಕಕ್ಕೇರಿ ಏಪ್ರಿಲ್ 17 ರಂದು ಕಲ್ಯಾಣರಾವ್ ಮೊಳಕೇರಿ ಎಂಬ ಶಾಸಕರು ತನ್ನೊಂದಿಗೆ 19 ಜನ ಶಾಸಕರು ಸಹಿ ಮಾಡಿದ ಪತ್ರವನ್ನು ರಾಜ್ಯಪಾಲರಿಗೆ ನೀಡಿ ಸರ್ಕಾರದಿಂದ ಬೆಂಬಲ ವಾಪಸ್ಸು ಪಡೆಯುವುದಾಗಿ ತಿಳಿಸಿದರು. ಈ ಬಗ್ಗೆ ರಾಜ್ಯಪಾಲರು ಯಾವುದೇ ರೀತಿಯ ವಿವರ ಕೇಳಲಿಲ್ಲ.

ಏಪ್ರಿಲ್ 20 ರಂದು 13 ಜನ ಶಾಸಕರು ತಾವು ಸಹಿ ಮಾಡಿದ್ದ ಪತ್ರ ಖೊಟ್ಟಿಯೆಂದು ಹೇಳಿದರಲ್ಲದೇ ಬೊಮ್ಮಾಯಿಯವರಿಗೆ ತಮ್ಮ ಬೆಂಬಲವನ್ನು ವ್ಯಕ್ತಪಡಿಸುವ ಮತ್ತೊಂದು ಅಧಿಕೃತ ಪತ್ರವನ್ನು ರಾಜ್ಯಪಾಲರಿಗೆ ನೀಡಿದರು. ಅದೇ ದಿನ ಬೊಮ್ಮಾಯಿಯವರು ಸಚಿವ ಸಂಪುಟ ಸಭೆ ನಡೆಸಿ ತಾವು ಕೂಡಲೇ ವಿಧಾನಸಭೆಯಲ್ಲಿ ಬಹುಮತ ಸಾಬೀತು ಪಡಿಸುವುದಾಗಿ ರಾಜ್ಯಪಾಲರಿಗೆ ತಿಳಿಸುವ ಪತ್ರ ನೀಡಿದರು. 21 ರಂದು ಸಿಪಿಐ, ಸಿಪಿಎಂ ಹಾಗೂ ಇತರ ಶಾಸಕರು ರಾಜ್ಯಪಾಲರ ಮುಂದೆ ಹೋಗಿ ಬೊಮ್ಮಾಯಿಯವರಿಗೆ ಬೆಂಬಲ ಸೂಚಿಸಿ ಬಹುಮತ ಸಾಬೀತು ಪಡಿಸಿದರು. ಆದರೂ ಕೂಡ ರಾಜ್ಯಪಾಲರು ಸಂವಿಧಾನ ಹಾಗೂ ಪ್ರಜಾಪ್ರಭುತ್ವದ ನೀತಿಗಳನ್ನು ಗಾಳಿಗೆ ತೂರಿ ಸರ್ಕಾರವನ್ನು ವಜಾ ಮಾಡಿದರು.

ಕರ್ನಾಟಕದ ಅಂದಿನ ರಾಜ್ಯಪಾಲರಾದ ವೆಂಕಟಸುಬ್ಬಯ್ಯರವರು 1989ರ, ಏಪ್ರಿಲ್ 21 ರಂದು ಬೊಮ್ಮಾಯಿ ಸರ್ಕಾರವನ್ನು ವಜಾಮಾಡಿದ್ದು ಪ್ರಜಾಪ್ರಭುತ್ವವನ್ನು ಕಗ್ಗೊಲೆ ಮಾಡಿದ ಕರಾಳ ದಿನ. ಜನರಿಂದ ಆಯ್ಕೆಯಾದ ಸರ್ಕಾರವನ್ನು ಯಾವುದೇ ಕಾರಣ ನೀಡದೆ, ರಾಜಕೀಯ ದಾಳದ ಒಂದು ಭಾಗವಾಗಿ ಸ್ವಯಂ ರಾಜ್ಯಪಾಲರು ಸಂವಿಧಾನದ ವಿಧಿ 356 ರ ದುರ್ಬಳಕೆ ಮಾಡಿ ರಾಷ್ಟ್ರಪತಿ ಆಡಳಿತವನ್ನು ಹೇರುವ ಮೂಲಕ ಕೆಟ್ಟ ಸಂಪ್ರದಾಯ ಸೃಷ್ಟಿಸಿದರು.

ಈ ನಿರ್ಣಯದ ವಿರುದ್ಧ ಬೊಮ್ಮಾಯಿಯವರು ಹೈಕೋರ್ಟಿಗೆ ಅರ್ಜಿ ಸಲ್ಲಿಸಿದರು. ಅಲ್ಲಿ ಅವರಿಗೆ ನ್ಯಾಯ ದೊರೆಯಲಿಲ್ಲ. ನಂತರ ಅವರು ಸರ್ವೋಚ್ಚ ನ್ಯಾಯಾಲಯದ ಒಂಭತ್ತು ಜನ ನ್ಯಾಯಾಧೀಶರ ಸಂವಿಧಾನ ಪೀಠದ ಮುಂದೆ ಈ ಪ್ರಕರಣವನ್ನು ಒಯ್ದರು. ಅಲ್ಲಿ ಖ್ಯಾತ ವಕೀಲ ಸೋಲಿ ಸೊರಬ್ಜಿ ಬೊಮ್ಮಾಯಿಯವರ ಪರ ವಾದ ಮಂಡಿಸಿದರು. ಈ ಪ್ರಕರಣ ನಾಲ್ಕು ವರ್ಷಗಳ ಕಾಲ ಎಳೆದಿತ್ತು. ಹಿರಿಯ ನ್ಯಾಯವಾದಿ ರಾಂ ಜೇಠ್ಮಲಾನಿ ಅವರು ಒಂದು ದಿನ

ಬೊಮ್ಮಾಯಿಯವರನ್ನು ಭೇಟಿಯಾದಾಗ, ಈ ಪ್ರಕರಣವನ್ನು ಮುಂದುವರೆಸುವುದರಲ್ಲಿ ಯಾವುದೇ ಲಾಭವಿಲ್ಲ, ಇದನ್ನು ಇಲ್ಲಿಗೇ ಬಿಟ್ಟುಬಿಡಿ ಎಂದು ಸೂಚಿಸಿದರು. ಆಗ ಬೊಮ್ಮಾಯಿಯವರು, "ಇಲ್ಲಿ ನನಗೆ ವೈಯಕ್ತಿಕ ಲಾಭದ ಪ್ರಶ್ನೆ ಇಲ್ಲ. ಸಂವಿಧಾನವನ್ನು ಎತ್ತಿ ಹಿಡಿಯುವುದು ಮತ್ತು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಕಾಪಾಡುವುದು ಮುಖ್ಯ. ಭಾರತದಲ್ಲಿ ಮತ್ತೆಂದೂ ಚುನಾಯಿತ ಸರ್ಕಾರಗಳನ್ನು ಹೀಗೆ ಬೇಕಾಬಿಟ್ಟಿ ಕಿತ್ತು ಹಾಕದಂತೆ ನ್ಯಾಯಾಲಯ ಸೂಚಿಸಬೇಕು ಎಂಬುದು ನನ್ನ ಆಶಯವಾಗಿದೆ" ಎಂದು ಹೇಳಿದರು.

1994ರ ಮಾರ್ಚ್ 11ರಂದು ಸರ್ವೋಚ್ಚ ನ್ಯಾಯಾಲಯ ಈ ಪ್ರಕರಣದಲ್ಲಿ ಮಹತ್ತರ ತೀರ್ಪು ನೀಡಿತು. ಜನತೆಯಿಂದ ಆಯ್ಕೆಯಾದ ಸರ್ಕಾರದ ಬಹುಮತವನ್ನು ವಿಧಾನಸಭೆಯಲ್ಲಿ ಮಾತ್ರ ಪರೀಕ್ಷೆಗೆ ಒಳಪಡಿಸಬೇಕು. ರಾಜ್ಯಪಾಲರ ಇಚ್ಛಾನುಸಾರವಲ್ಲ ಎಂದು ಸ್ಪಷ್ಟವಾಗಿ ತಿಳಿಸಿತು. ವಿಧಿ 356 ರಾಜ್ಯದಲ್ಲಿ ಕೇವಲ ಸಂವಿಧಾನಿಕ ಬಿಕ್ಕಟ್ಟು ಸೃಷ್ಟಿಯಾದಾಗ ಮಾತ್ರ ಬಳಸತಕ್ಕದ್ದು. ರಾಜ್ಯಪಾಲರ ಶಿಫಾರಸ್ಸು ಲೋಕಸಭೆ ಮತ್ತು ರಾಜ್ಯಸಭೆಯಲ್ಲಿ ಚರ್ಚೆಯಾಗಿ ಅಂಗೀಕಾರವಾಗಬೇಕು ಎಂದು ಸರ್ವೋಚ್ಚ ನ್ಯಾಯಾಲಯ ಐತಿಹಾಸಿಕ ತೀರ್ಪು ನೀಡಿತು. ಈ ತೀರ್ಪಿನಿಂದಾಗಿ ದೇಶದಲ್ಲಿ ಪ್ರಜಾಪ್ರಭುತ್ವದ ಬೇರುಗಳು ಮತ್ತಷ್ಟು ಗಟ್ಟಿಯಾದವು. ಪ್ರಸ್ತುತ ಯಾವುದೇ ರಾಜ್ಯ ಸರ್ಕಾರಗಳು ವಜಾ ಆಗುವಂತಹ ಪರಿಸ್ಥಿತಿಗೆ ಸಿಲುಕಿದಾಗ ಬೊಮ್ಮಾಯಿಯವರ ಪ್ರಕರಣ ಮಾಧ್ಯಮಗಳಲ್ಲಿ ಚರ್ಚೆಯಾಗುತ್ತದೆ. ವೈಯಕ್ತಿಕ ಲಾಭ ನಷ್ಟಗಳ ಬಗ್ಗೆಯಷ್ಟೇ ಯೋಚಿಸದೇ ದೇಶದ, ಪ್ರಜಾಪ್ರಭುತ್ವದ ಹಿತವನ್ನಷ್ಟೇ ದೃಷ್ಟಿಯಲ್ಲಿರಿಸಿಕೊಂಡು ನಿರ್ಧಾರವನ್ನು ತೆಗೆದುಕೊಳ್ಳುವ ಮನೋಭಾವದ ಬೊಮ್ಮಾಯಿಯವರಂತಹ ರಾಜಕಾರಣಿಗಳು ವಿರಳ.

## ಕೇಂದ್ರ ಮಾನವ ಸಂಪನ್ಮೂಲ ಸಚಿವ

ರಾಜಕಾರಣದಲ್ಲಿ ನಿರೀಕ್ಷೆಗೂ ಮೀರಿದ ಬೆಳವಣಿಗೆಗಳು ಸಂಭವಿಸುತ್ತವೆ. ರಾಜ್ಯದಲ್ಲಿ ಬೊಮ್ಮಾಯಿಯವರ ಸಂಪುಟದಲ್ಲಿ ದೇವೇಗೌಡರು ಸಚಿವರಾಗಿದ್ದರು. ಮುಂದೆ ದೇವೇಗೌಡರು ದೇಶದ ಪ್ರಧಾನಿಗಳಾದಾಗ ಬೊಮ್ಮಾಯಿಯವರು ಅವರ ಸಂಪುಟದಲ್ಲಿ ಮಾನವ ಸಂಪನ್ಮೂಲ ಸಚಿವರಾದರು. ಜನತಾದಳದ ರಾಷ್ಟ್ರೀಯ ಅಧ್ಯಕ್ಷರಾಗಿದ್ದ ಅವರಿಗೆ ರಾಷ್ಟ್ರ ರಾಜಕಾರಣದ ಹಾಗೂ ಪ್ರತಿಯೊಂದು ರಾಜ್ಯದ ಪರಿಸ್ಥಿತಿಯ ಸಂಪೂರ್ಣ ಮಾಹಿತಿಯಿತ್ತು. ಅಲ್ಲದೇ ಎಲ್ಲಾ ಪ್ರಮುಖ ಪಕ್ಷಗಳ ರಾಷ್ಟ್ರ ಮತ್ತು ರಾಜ್ಯಗಳ ನಾಯಕರೊಂದಿಗೆ ನಿಕಟ ಸಂಪರ್ಕ ಇದ್ದುದರಿಂದ ಕೇಂದ್ರದ ಸಚಿವರಾಗಿ ಕಾರ್ಯನಿರ್ವಹಿಸುವುದು ಸುಲಭವಾಯಿತು.

ಮಾನವ ಸಂಪನ್ಮೂಲ ಇಲಾಖೆ 1985 ರಲ್ಲಿ ಅಸ್ತಿತ್ವಕ್ಕೆ ಬಂದಿತು. ದಿವಂಗತ ಪ್ರಧಾನಿ ರಾಜೀವ್ ಗಾಂಧಿಯವರು ರಾಷ್ಟ್ರ ನಿರ್ಮಾಣಕ್ಕೆ ಮಾನವ ಸಂಪನ್ಮೂಲದ ಸೃಷ್ಟಿ ಮತ್ತು ಬಳಕೆ ಮುಖ್ಯವೆಂದು ಭಾವಿಸಿ ಈ ಇಲಾಖೆಯನ್ನು ಅಸ್ತಿತ್ವಕ್ಕೆ ತಂದರು. ಈ ಇಲಾಖೆಯಲ್ಲಿ ಪಿ.ವಿ.ನರಸಿಂಹರಾವ್, ಮಾಧವರಾವ್ ಸಿಂಧ್ಯರವರು ಸಚಿವರಾಗಿ ಕೆಲಸ ಮಾಡಿದ್ದರು. ಇದೊಂದು ಪ್ರಮುಖ ಹಾಗೂ ವಿಶಾಲವಾದ ಖಾತೆಯಾಗಿತ್ತು. ಈ ಖಾತೆಯ ಅಧಿಕಾರ ವಹಿಸಿಕೊಂಡ ಬೊಮ್ಮಾಯಿಯವರಿಗೆ ಆಶ್ಚರ್ಯ ಕಾದಿತ್ತು. ಸುಮಾರು ಐವತ್ತು ಸಾವಿರಕ್ಕಿಂತ ಅಧಿಕ ಕಡತಗಳು ವಿಲೇವಾರಿಯಾಗದೇ ಉಳಿದಿದ್ದವು. ಈ ಕಡತಗಳ ವಿಲೇವಾರಿಯೇ ದೊಡ್ಡ ಸವಾಲಾಗಿತ್ತು. ಇದಕ್ಕಾಗಿ ಬೊಮ್ಮಾಯಿಯವರು ವಿಶೇಷ ಘಟಕವೊಂದನ್ನು ಮಾಡಿ ಕೇವಲ ನಾಲ್ಕೇ ತಿಂಗಳಲ್ಲಿ ಕಡತಗಳಿಗೆ ಮುಕ್ತಿ ನೀಡಿದರು. ಇದರಿಂದಾಗಿ ಬೊಮ್ಮಾಯಿಯವರ ಕಾರ್ಯದಕ್ಷತೆಯ ಬಗ್ಗೆ ರಾಷ್ಟ್ರದ ಆಡಳಿತ ವರ್ಗದಲ್ಲಿ ಅಪಾರ ವಿಶ್ವಾಸ ಮೂಡಿತು.

ಮಾನವ ಸಂಪನ್ಮೂಲ ಇಲಾಖೆಯಲ್ಲಿ ಶಿಕ್ಷಣ ವಿಭಾಗಕ್ಕೆ ಪ್ರಮುಖ ಸ್ಥಾನ. ಸ್ವತಂತ್ರ ಬಂದಾಗಿನಿಂದ ಎಲ್ಲಾ ಸರ್ಕಾರಗಳೂ ವಿದ್ಯಾ ಇಲಾಖೆಯನ್ನು ನಿರ್ಲಕ್ಷ್ಯಕ್ಕೆ ಒಳಪಡಿಸಿವೆ. ಇದನ್ನು ಮನಗಂಡ ಬೊಮ್ಮಾಯಿಯವರು ಬಜೆಟ್‌ನಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಮೀಸಲಾಗಿದ್ದ ಕೇವಲ ಶೇ.3 ರಷ್ಟಿದ್ದ ಹಣವನ್ನು ಶೇ.6 ಕ್ಕೆ ಹೆಚ್ಚಿಸಬೇಕೆಂದು ಪ್ರತಿಪಾದಿಸಿದರು. ಇದಕ್ಕಾಗಿ ಬೇಕಾಗಿರುವ ಮಾಹಿತಿಯನ್ನು ಅಂಕಿ ಅಂಶಗಳ ಸಮೇತ ಸಂಗ್ರಹಿಸಿ 1997ರ ಬಜೆಟ್‌ನಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಶೇ.6 ರಷ್ಟು ಹಣ ಪಡೆದುಕೊಳ್ಳುವಲ್ಲಿ ಯಶಸ್ವಿಯಾದರು. ಇದರಿಂದಾಗಿ ದೇಶದಾದ್ಯಂತ ಶಿಕ್ಷಣ ರಂಗಕ್ಕೆ ಬೃಹತ್ ಪ್ರಮಾಣದಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸಾಧ್ಯವಾಯಿತು.

ಉನ್ನತ ಶಿಕ್ಷಣದಲ್ಲಿ ಸರ್ಕಾರ ಹೆಚ್ಚಿನ ಬಂಡವಾಳ ಹೂಡಲು ಸಾಧ್ಯವಿರದ ಕಾರಣ ಅದಕ್ಕಾಗಿ ಅರೆ ಸರ್ಕಾರಿ ಮತ್ತು ಖಾಸಗಿ ವಲಯದಿಂದ ಬಂಡವಾಳವನ್ನು ಸೆಳೆಯಲು ಶಿಕ್ಷಣ ನಿಧಿಯನ್ನು ಸ್ಥಾಪಿಸಿದರು.

ಐಐಟಿ ಮತ್ತು ಐಐಎಂಗಳಲ್ಲಿ ವಿದ್ಯಾಭ್ಯಾಸ ಮುಗಿಸಿ ವಿದೇಶಗಳಿಗೆ ಪಲಾಯನ ಮಾಡುವ ವಿದ್ಯಾರ್ಥಿಗಳ ಶುಲ್ಕ ಹೆಚ್ಚಾದಾಗ ವಿರೋಧಪಕ್ಷಗಳಿಂದ ತೀವ್ರ ಟೀಕೆಗಳು ಬಂದವು. ಆಗ ಬೊಮ್ಮಾಯಿಯವರು " ಅಮೆರಿಕಾ ಮತ್ತು ಇತರ ದೇಶಗಳ ಶಿಕ್ಷಣಕ್ಕೆ ಭಾರತ ಸಬ್ಸಿಡಿಯನ್ನು ಕೊಡಲು ಸಾಧ್ಯವಿಲ್ಲ" ಎಂದು ಹೇಳುವ ಮೂಲಕ ಉನ್ನತ ಶಿಕ್ಷಣದ ಬಗೆಗಿನ ತಮ್ಮ ಸ್ಪಷ್ಟ ನಿಲುವನ್ನು ವ್ಯಕ್ತಪಡಿಸಿದರು.

ಪ್ರತಿಭಾವಂತ ವಿದ್ಯಾರ್ಥಿಗಳು ಉನ್ನತ ಶಿಕ್ಷಣದಿಂದ ವಂಚಿತರಾಗಬಾರದು ಎಂಬ ಉದ್ದೇಶದಿಂದ ಹೊಸದಾಗಿ ಐಐಟಿ ಮತ್ತು ಐಐಎಂಗಳ ಸ್ಥಾಪನೆಗೆ ಒಂದು ಸಮಿತಿಯನ್ನು ರಚಿಸಿದ್ದಲ್ಲದೇ, ಆ ವರದಿಯ ಆಧರಿಸಿ ಇಂದೋರ್‌ನಲ್ಲಿ ಹೊಸ ಐಐಎಂ ಸ್ಥಾಪಿಸಲು ಯಶಸ್ವಿಯಾದರು. ದೇಶದಾದ್ಯಂತ ನಾಲ್ಕು ಐಐಟಿಗಳನ್ನು ಸ್ಥಾಪಿಸಬೇಕು, ಅದರಲ್ಲಿ ಒಂದು ಐಐಟಿ ಕರ್ನಾಟಕದಲ್ಲಿ ಸ್ಥಾಪನೆಯಾಗಬೇಕು ಎಂಬುದು ಬೊಮ್ಮಾಯಿಯವರ ಆಸೆಯಾಗಿತ್ತು. ಪ್ರಸ್ತಾವನೆ ಸಂಪುಟದ ಮುಂದೆ ಬಂದಾಗ ಸರ್ಕಾರ ಅಧಿಕಾರ ಕಳೆದುಕೊಂಡಿತ್ತು. ಕರ್ನಾಟಕದಲ್ಲಿ, ಅದರಲ್ಲೂ ವಿದ್ಯಾ ಕೇಂದ್ರವಾದ ಧಾರವಾಡದಲ್ಲಿ ಐಐಟಿ ಸ್ಥಾಪಿಸಬೇಕೆಂಬ ಬೊಮ್ಮಾಯಿಯವರ ಕನಸು ಕನಸಾಗಿಯೇ ಉಳಿಯಿತು.

ಶಿಕ್ಷಣವನ್ನು ಮೂಲಭೂತ ಹಕ್ಕಾಗಿಸಲು ತೀರ್ಮಾನಿಸಿದ ಬೊಮ್ಮಾಯಿಯವರು ದೇಶದ ಶಿಕ್ಷಣ ತಜ್ಞರು ಮತ್ತು ಆರ್ಥಿಕ ತಜ್ಞರೊಡನೆ ಒಂದು ವರ್ಷಗಳ ಕಾಲ ನಿರಂತರವಾಗಿ ಚರ್ಚಿಸಿ ಶಿಕ್ಷಣ ಮೂಲಭೂತ ಹಕ್ಕು ಎಂಬ ಕರಡು ಮಸೂದೆಯನ್ನು ಸಿದ್ಧಪಡಿಸಿದರು. ಇದರ ಬಗ್ಗೆ ವ್ಯಾಪಕವಾಗಿ ಚರ್ಚೆಯಾಗಲಿ ಎಂಬ ಉದ್ದೇಶದಿಂದ ರಾಜ್ಯಸಭೆಯಲ್ಲಿ ಮೊದಲು ಮಸೂದೆ ಮಂಡಿಸಿದರು. ಆದರೆ ರಾಜಕೀಯ ಸ್ಥಿತ್ಯಂತರದಿಂದಾಗಿ ಸರ್ಕಾರ ಉಳಿಯಲಿಲ್ಲ. ಮುಂದೆ ಅಧಿಕಾರಕ್ಕೆ ಬಂದ ಸರ್ಕಾರಗಳು ಈ ನಿಟ್ಟಿನಲ್ಲಿ ಚಿಂತಿಸದೇ ಹೋದದ್ದು ವಿಪರ್ಯಾಸ.

ಇದಲ್ಲದೇ ಪ್ರತಿಭಾನ್ವೇಷಕರಾದ ಬೊಮ್ಮಾಯಿಯವರು ದೇಶದಾದ್ಯಂತ ಅರ್ಹ ಪ್ರತಿಭೆಗಳನ್ನು ಗುರುತಿಸಿ ಉನ್ನತ ಸ್ಥಾನಗಳಿಗೆ ನೇಮಿಸಿದರು. ಶ್ರೀ ಶಾಂತಿನಾಥ

ದೇಸಾಯಿಯವರನ್ನು ಕುವೆಂಪು ವಿಶ್ವವಿದ್ಯಾಲಯದ ಕುಲಪತಿಯನ್ನಾಗಿಸಿದರೆ, ಸುಮತೀಂದ್ರ ನಾಡಿಗರವರನ್ನು ನ್ಯಾಷನಲ್ ಬುಕ್ ಟ್ರಸ್ಟ್ ಅಧ್ಯಕ್ಷರಾಗಿ, ರಾಮೇಗೌಡರನ್ನು ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಳಿಯ ಅಧ್ಯಕ್ಷರಾಗಿ, ಮಂಗಳೂರು ವಿ.ವಿ. ಯ ಕುಲಪತಿಗಳಾಗಿದ್ದ ಎಂ.ಐ.ಸವದತ್ತಿ ರವರನ್ನು ಯು.ಜಿ.ಸಿ. ಸದಸ್ಯರನ್ನಾಗಿ ನೇಮಿಸಿದರು. ಇತಿಹಾಸ ತಜ್ಞ ಪ್ರೊ.ಎಸ್. ಶೆಟ್ಟರ್ ಅವರನ್ನು ಇತಿಹಾಸ ಸಂಶೋಧನಾ ಕೇಂದ್ರದ ಮುಖ್ಯಸ್ಥರನ್ನಾಗಿ ಮಾಡಿದರು. ಕವಿ ಚನ್ನವೀರ ಕಣವಿ, ವಿದ್ವಾನ್ ಪಂಚಾಕ್ಷರಿ ಗವಾಯಿಗಳು ಬೊಮ್ಮಾಯಿಯವರ ಶಿಫಾರಸ್ಸಿನಿಂದಾಗಿ ನ್ಯಾಷನಲ್ ಪ್ರೊಫೆಸರ್‌ಗಳಾದರು. ಡಾ. ಸಿದ್ದಲಿಂಗ ಪಟ್ಟಣ ಶೆಟ್ಟಿ ಅವರನ್ನು ಕೇಂದ್ರ ಭಾಷಾ ಸಮಿತಿಯ ಸದಸ್ಯರನ್ನಾಗಿ ಮಾಡಿದರು. ಉದ್ಯಮಿಗಳಾದ ಬಾಬ ಕಲ್ಯಾಣಿ ಯವರನ್ನು ಐಐಎಂ ಇಂದೋರ್‌ನ ಅಧ್ಯಕ್ಷರಾಗಿ ಮತ್ತು ಶ್ರೀ ಆರ್.ಎನ್.ಶೆಟ್ಟಿ ಅವರನ್ನು ಐಐಟಿ ಮುಂಬಯಿಯ ನಿರ್ದೇಶಕರನ್ನಾಗಿ ನೇಮಿಸಿದರು.

ಕೇಂದ್ರ ಮಾನವ ಸಂಪನ್ಮೂಲ ಸಚಿವಾಲಯಕ್ಕೆ ಒಳಪಡುವ ಬಹುತೇಕ ಸಂಸ್ಥೆಗಳಲ್ಲಿ ಸ್ಥಾನಮಾನಗಳನ್ನು ತುಂಬುವಾಗ ಕನ್ನಡಿಗರಿಗೆ ಆದ್ಯತೆಯನ್ನು ನೀಡಿದರು. ಕರ್ನಾಟಕದ ಶಿಕ್ಷಣ ಕ್ಷೇತ್ರಕ್ಕೆ ಕೇಂದ್ರದಿಂದ ಅತಿ ಹೆಚ್ಚಿನ ನೆರವು ದೊರೆತ ಕಾಲವಿದು ಎಂದು ಅನೇಕ ಗಣ್ಯರು ಈಗಲೂ ನೆನೆಯುತ್ತಾರೆ.

ಕರ್ನಾಟಕದ ಆರು ಜಿಲ್ಲೆಗಳಿಗೆ ಮಾತ್ರ ಸೀಮಿತವಾಗಿದ್ದ ಡಿಪಿಇಪಿ ಕಾರ್ಯಕ್ರಮವನ್ನು 12 ಜಿಲ್ಲೆಗಳಿಗೆ ವಿಸ್ತರಿಸಿ ಶೈಕ್ಷಣಿಕ ಅಭ್ಯುದಯಕ್ಕೆ ಕಾರಣರಾದರು. ಧಾರವಾಡ, ಗುಲಬರ್ಗಾ ವಿ.ವಿ ಗಳಲ್ಲಿ ಬೃಹತ್ ವಿದ್ಯಾರ್ಥಿನಿಲಯಗಳ ಸ್ಥಾಪನೆಗೆ ಅನುದಾನ ಬಿಡುಗಡೆ ಮಾಡಿದರು.

ಬೆಂಗಳೂರಿನಲ್ಲಿ ನಡೆದ ರಾಷ್ಟ್ರೀಯ ಕ್ರೀಡಾ ಕೂಟದ ಸಿದ್ಧತಾ ಕೆಲಸಗಳು ಹಣಕಾಸಿನ ಕೊರತೆಯಿಂದಾಗಿ ಕುಂಟುತ್ತಿದ್ದಾಗ ಹಣ ಬಿಡುಗಡೆ ಮಾಡಿ ಚುರುಕುಗೊಳಿಸಿದ್ದಲ್ಲದೇ, ಕಂಠೀರವ ಕ್ರೀಡಾಂಗಣ ಪೂರ್ಣಗೊಳಿಸಲು ಅಗತ್ಯ ಹಣಕಾಸಿನ ನೆರವನ್ನು ಬಿಡುಗಡೆ ಮಾಡಿದರು. ಮುಂದೆ ರಾಷ್ಟ್ರೀಯ ಕ್ರೀಡಾಕೂಟವನ್ನು ಪ್ರಧಾನಿ ದೇವೇಗೌಡರಿಂದಲೇ ಉದ್ಘಾಟನೆ ಮಾಡಿಸಿದರು. ಇದಲ್ಲದೇ ಕೊಡಗಿನಲ್ಲಿ ಜನರಲ್ ಕಾರ್ಯಪ್ಪ ಕ್ರೀಡಾಂಗಣ, ಬೆಂಗಳೂರಿನ ಬ್ಯಾಡ್ಮಿಂಟನ್ ಅಸೋಸಿಯೇಷನ್ ಮತ್ತು ರೈಫಲ್ ಅಸೋಸಿಯೇಷನ್‌ಗಳಿಗೆ ಹಣಕಾಸಿನ ನೆರವು ನೀಡಿದರು.

ನಾಲ್ಕು ದಶಕಗಳ ಕಾಲ ರಾಷ್ಟ್ರ ಮತ್ತು ರಾಜ್ಯ ರಾಜಕಾರಣದಲ್ಲಿ ಸಕ್ರಿಯವಾಗಿದ್ದು, ಸರ್ಕಾರದಲ್ಲಿ ಹಾಗೂ ಪಕ್ಷದಲ್ಲಿ ವಿವಿಧ ಉನ್ನತ ಹುದ್ದೆಗಳನ್ನು ಅಲಂಕರಿಸಿ ಯಶಸ್ವಿಯಾದ ಬೊಮ್ಮಾಯಿಯವರು 1999ರ ಚುನಾವಣೆಯ ನಂತರ ವಿರಾಮವನ್ನು ಬಯಸಿದರು. ಕರ್ನಾಟಕವನ್ನು ಪ್ರಗತಿಯ ಪಥದಲ್ಲಿ ಮುನ್ನೆಡೆಸಿದ ಪಕ್ಷ, ಅಭಿವೃದ್ಧಿಯನ್ನೇ ಮೂಲ ಮಂತ್ರವಾಗಿರಿಸಿಕೊಂಡು ಜನಪರ ಕಾರ್ಯಕ್ರಮಗಳನ್ನು ರೂಪಿಸಿದ ಪಕ್ಷ, ಅಧಿಕಾರ ವಿಕೇಂದ್ರೀಕರಣಕ್ಕೆ ಪಣ ತೊಟ್ಟು ಸಾಧಿಸಿದ ಪಕ್ಷ, ರಾಷ್ಟ್ರ ರಾಜಕಾರಣಕ್ಕೆ ಹೊಸ ದಿಕ್ಕು ತೋರಿಸಿದ ಪಕ್ಷ, ತಾವು ಕಟ್ಟಿ ಬೆಳೆಸಿದ ಪಕ್ಷ ಪದೇ ಪದೇ ಒಡಕಿನತ್ತ ಸಾಗಿದ್ದು ಬೊಮ್ಮಾಯಿಯವರನ್ನು ಘಾಸಿಮಾಡಿತ್ತು. ದೇಹದಲ್ಲಿ ಚೈತನ್ಯವಿರುವಷ್ಟು ಕಾಲವೂ ಪಕ್ಷದ ಒಗ್ಗಟ್ಟಿಗೆ ಶ್ರಮಿಸಿದ ಬೊಮ್ಮಾಯಿಯವರಿಗೆ, ಈ ಆಂತರಿಕ ಕಲಹಗಳಿಂದಾಗಿ ತಮ್ಮ ಸಾಧನೆಗಳು ಕಾಣದಂತಾಗಿದುದಕ್ಕೆ ತೀವ್ರವಾಗಿ ಮನ ನೊಂದರು.

## ಏಕೀಕರಣ ಪ್ರಶಸ್ತಿ

ಕರ್ನಾಟಕದ ಏಕೀಕರಣಕ್ಕಾಗಿ ಹೋರಾಟ ನಡೆಸಿದ ಬೊಮ್ಮಾಯಿಯವರ ಸೇವೆಯನ್ನು ಗುರುತಿಸಿದ ಕರ್ನಾಟಕ ಸರ್ಕಾರ ಅವರಿಗೆ ಕರ್ನಾಟಕ ಏಕೀಕರಣ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಚ್.ಡಿ. ಕುಮಾರಸ್ವಾಮಿಯವರು ತಮ್ಮ ಸಂಪುಟದ ಸಹೋದ್ಯೋಗಿಗಳಾಗಿದ್ದ ಎಂ.ಪಿ.ಪ್ರಕಾಶ್‌ರೊಂದಿಗೆ ಬೊಮ್ಮಾಯಿಯವರ ಗೃಹಕ್ಕೇ ಆಗಮಿಸಿ ಪ್ರಶಸ್ತಿ ನೀಡಿ ಗೌರವಿಸಿದರು. ಇದರೊಂದಿಗೆ ಏಕೀಕರಣಕ್ಕಾಗಿ ಶ್ರಮಿಸಿದ ಬೊಮ್ಮಾಯಿಯವರನ್ನು ಗುರುತಿಸಿ ಗೌರವಿಸಿದಷ್ಟೇ ಅಲ್ಲದೇ, ಸರ್ಕಾರವೂ ಸಹ ಗೌರವಕ್ಕೆ ತನ್ಮೂಲಕ ಪಾತ್ರವಾಯಿತು.

ಬೊಮ್ಮಾಯಿಯವರು ತಮ್ಮ ರಾಜಕೀಯ ಜೀವನದುದ್ದಕ್ಕೂ ಪ್ರಾದೇಶಿಕ ಅಸಮಾನತೆಯನ್ನು ಸರಿಪಡಿಸುವ ಅಗತ್ಯವನ್ನು ಒತ್ತಿ ಹೇಳಿದ್ದರು. ಪ್ರಾದೇಶಿಕ ಅಸಮಾನತೆ ಅಳಿಸಿ ರಾಜ್ಯದೆಲ್ಲೆಡೆ ಏಕರೂಪದ ಅಭಿವೃದ್ಧಿಯನ್ನು ಸಾಧಿಸುವ ನಿಟ್ಟಿನಲ್ಲಿ ಡಾ|| ಡಿ.ಎಂ. ನಂಜುಂಡಪ್ಪನವರ ವರದಿಯ ಅನುಷ್ಠಾನ ಆಗಬೇಕೆಂಬುದು ಅವರ ನಿಲುವಾಗಿತ್ತು. ಅಂದು ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಅವರು ಈ ಅಭಿಪ್ರಾಯವನ್ನು ಮಾನ್ಯ ಮುಖ್ಯಮಂತ್ರಿಗಳಿಗೆ ಸ್ಪಷ್ಟವಾಗಿ ಮನವರಿಕೆ ಮಾಡಿಕೊಟ್ಟರು.

ಏಕೀಕರಣ ಪ್ರಶಸ್ತಿ ನೀಡಿ ಗೌರವಿಸಿದರೆ ಸಾಲದು, ಏಕೀಕೃತ ಕರ್ನಾಟಕದಲ್ಲಿ ಅಸಮಾನತೆಯನ್ನು ತೊಡೆದುಹಾಕುವ ರಾಜಕೀಯ ಇಚ್ಛಾಶಕ್ತಿಯನ್ನು ಸರ್ಕಾರ ಪ್ರದರ್ಶಿಸಿದರೆ ಮಾತ್ರ ಇಂತಹ ಪ್ರಶಸ್ತಿಗಳಿಗೆ ಗೌರವ ಬರುವುದು ಎಂದು ಅವರು ರಾಜ್ಯ ಸರ್ಕಾರಕ್ಕೆ ಕಿವಿ ಮಾತು ಹೇಳಿದರು.

## ಕೊನೆಯ ನೆಮ್ಮದಿ ದಿನಗಳು

ಇತ್ತೀಚಿನ ರಾಜಕಾರಣವನ್ನು ಕುರಿತು "ಕರ್ನಾಟಕದ ರಾಜಕೀಯದಲ್ಲಿ ಹಣ ಮತ್ತು ತೋಳ್ಬಲ ಪ್ರಮುಖ ಪಾತ್ರವಹಿಸುತ್ತಿರುವುದು ಅಪಾಯಕಾರಿ ಬೆಳವಣಿಗೆಯಾಗಿದೆ. ಇದು ನಿಲ್ಲಬೇಕು. ಈ ನಿಟ್ಟಿನಲ್ಲಿ ಸಿದ್ಧಾಂತ ಮತ್ತು ಕಾರ್ಯಕ್ರಮಗಳ ಆಧಾರದ ಮೇಲೆ ರಾಜಕೀಯ ವ್ಯವಸ್ಥೆಯನ್ನು ರೂಪಿಸಬೇಕಿದೆ. ಕರ್ನಾಟಕದ ಜನತೆ ಈ ನಿಟ್ಟಿನಲ್ಲಿ ಮುಂದಾಗಬೇಕು" ಎಂಬುದು ಬೊಮ್ಮಾಯಿಯವರ ಕೊನೆಯ ದಿನಗಳ ಸ್ಪಷ್ಟ ಅಭಿಪ್ರಾಯವಾಗಿತ್ತು.

"ಬೊಮ್ಮಾಯಿಯವರು ಅಪ್ಪಟ ಶರಣ, ಆದರೆ ಎಂದೆಂದಿಗೂ ಜಾತಿವಾದಿಯಲ್ಲ. ಈ ವೈಶಾಲ್ಯದಿಂದಾಗಿ ನಾವೆಲ್ಲ ಅವರಿಗೆ ಆಕರ್ಷಿತರಾದೆವು" ಎಂಬ ಕವಿ, ನಾಟಕಕಾರ ಚಂದ್ರಶೇಖರ ಕಂಬಾರರ ಮಾತುಗಳು ಬೊಮ್ಮಾಯಿಯವರ ವ್ಯಕ್ತಿತ್ವವನ್ನು ಹಿಡಿದಿಡುತ್ತದೆ.

ತಮ್ಮ ಬಾಳ ಸಂಜೆಯ ದಿನಗಳನ್ನು ಮೌನವಾಗಿಯೇ ಕಳೆದ ಬೊಮ್ಮಾಯಿಯವರಿಗೆ ತಮ್ಮ ಬದುಕಿನ ಸುದೀರ್ಘ ಪಯಣದಲ್ಲಿ ಕರ್ತವ್ಯ ನಿಷ್ಠೆ, ಹೋರಾಟ, ಜಯ, ಸೋಲು, ಸುಖ ದುಃಖಗಳನ್ನು ಸಮನಾಗಿ ಸ್ವೀಕರಿಸಿದ ಸಮಾಧಾನವಿತ್ತು.

ರಾಜಕಾರಣದ ಒತ್ತಡಗಳಿಂದಾಗಿ ಹಾಗೂ ಸದಾ ಓಡಾಟ, ಜನ ಸಂಪರ್ಕದಿಂದಾಗಿ ಬಿಡುವಿರದ ದಿನಗಳನ್ನು ಕಳೆದ ಬೊಮ್ಮಾಯಿಯವರು ತಮ್ಮ ಕೊನೆಯ ದಿನಗಳನ್ನು ತಮ್ಮ ಕುಟುಂಬಕ್ಕೆ ಮೀಸಲಾಗಿಟ್ಟರು. ಮೊಮ್ಮಕ್ಕಳ ಜೊತೆ ಆಟವಾಡುತ್ತ ಸಮಯ ಕಳೆದ ಬೊಮ್ಮಾಯಿಯವರದು ಸಂತೃಪ್ತ ಜೀವನ. ಸದಾ ಚಿಂತನ ಶೀಲ ಮನಸ್ಸು ಇದ್ದುದರಿಂದ ದೇಶ, ನಾಡು, ಜನರ ಅಭಿವೃದ್ಧಿಯ ಬಗ್ಗೆ ಚಿಂತಿಸುತ್ತ , ಇಷ್ಟವಾದ ಪುಸ್ತಕಗಳನ್ನು ಓದುತ್ತ ಕಾಲವನ್ನು ಕಳೆಯುತ್ತಿದ್ದರು.

ಮಾವನ ಮಗಳಾದ ಗಂಗಮ್ಮನವರೇ ಹೆಂಡತಿಯಾಗಿ ಬಂದದ್ದು ಇವರ ಸುದೈವವಾಗಿತ್ತು. ಕುಟುಂಬವನ್ನು ಸಮರ್ಥವಾಗಿ ತೂಗಿಸಿಕೊಂಡು ಹೋಗುತ್ತಿದ್ದುದಲ್ಲದೇ ಗಂಗಮ್ಮನವರು ಬೊಮ್ಮಾಯಿಯವರ ಅಣ್ಣನ ಮಕ್ಕಳನ್ನೂ ಹುಬ್ಬಳ್ಳಿಗೆ ತಂದು ಸಲಹಿದ್ದರು. ಬೊಮ್ಮಾಯಿಯವರಿಗೆ ವಕೀಲಿ ವೃತ್ತಿಯಲ್ಲೂ ನೆರವಾಗುತ್ತಿದ್ದರು. ಚುನಾವಣೆಯ ಸಮಯದಲ್ಲಿ ನೂರಾರು ಜನರಿಗೆ ಊಟೋಪಚಾರಗಳನ್ನು ಸಂತೋಷದಿಂದ ಮಾಡುತ್ತಿದ್ದರು. ಅಗತ್ಯವಿದ್ದಾಗ ಚುನಾವಣಾ ಪ್ರಚಾರದಲ್ಲೂ ಭಾಗವಹಿಸುತ್ತಿದ್ದರು. ಪತಿಯ ಅಧಿಕಾರದಲ್ಲಿ ಎಂದಿಗೂ ಹಸ್ತಕ್ಷೇಪ ಮಾಡದ ಗಂಗಮ್ಮನವರನ್ನು ಕಂಡರೆ ಬೊಮ್ಮಾಯಿಯವರಿಗೆ ಅಪಾರ

ಗೌರವ. ಮಕ್ಕಳ ಬೆಳವಣಿಗೆ, ವಿದ್ಯಾಭ್ಯಾಸದ ಸಂಪೂರ್ಣ ಜವಾಬ್ದಾರಿಯನ್ನು ಗಂಗಮ್ಮನವರೇ ನಿಭಾಯಿಸಿದ್ದರು. ಕ್ಯಾನ್ಸರ್‌ನಿಂದಾಗಿ ಪತ್ನಿ ಗಂಗಮ್ಮನವರು 2002ರ ಸೆಪ್ಟೆಂಬರ್ 11 ರಂದು ಶಿವೈಕ್ಯರಾದಾಗ ಬೊಮ್ಮಾಯಿಯವರು ಒಂಟಿಯಾಗಿ ಜರ್ಜರಿತರಾದರು.

ನಂತರದ ದಿನಗಳನ್ನು ಬಹುತೇಕ ಮೌನವಾಗಿಯೇ ಕಳೆದು, ತಮ್ಮ ಇಳಿ ವಯಸ್ಸಿನಲ್ಲಿ ಜಾರಿಬಿದ್ದು ಮೂಳೆ ಮುರಿದುಕೊಂಡ ಬೊಮ್ಮಾಯಿಯವರು ಮತ್ತೆ ಚೇತರಿಸಿಕೊಂಡರಾದರೂ ಬಹುಕಾಲ ಉಳಿಯಲಿಲ್ಲ. ದಿ.10.10.2007 ರಂದು ವಿಧಿವಶರಾದರು. ಕರ್ನಾಟಕದ ರಾಜಕೀಯ ಇತಿಹಾಸದ ಅಧ್ಯಾಯವೊಂದು ಇವರ ಸಾವಿನೊಂದಿಗೆ ಅಂತ್ಯವಾಯಿತು.

ರಾಯಿಸ್ಟ್ ಬೊಮ್ಮಾಯಿ ಕಾಯಕವೇ ಕೈಲಾಸ ಎಂದು ನಂಬಿದವರು. ಕಡೆ ತನಕ ನಾಸ್ತಿಕರಾಗೇ ಉಳಿದರು. ಇಷ್ಟಾದರೂ ಬೇರೆಯವರ ನಂಬಿಕೆಯನ್ನು ಎಂದಿಗೂ ಅಗೌರವದಿಂದ ನೋಡಲಿಲ್ಲ ಎಂಬುದು ಅವರ ಘನತೆಯನ್ನು ತೋರುತ್ತದೆ. ಮುಖ್ಯಮಂತ್ರಿಯ ಅವಧಿಯ ಕೊನೆಯ ಸಂಪುಟ ಸಭೆಯಲ್ಲಿ ಅವರ ತೀರ್ಮಾನವಾದ ಕೂಡಲ ಸಂಗಮದ ಸಂರಕ್ಷಣೆ ಮತ್ತು ಅದರ ಅಭಿವೃದ್ಧಿಗೆ ಪ್ರಾಧಿಕಾರದ ರಚನೆ ಇದಕ್ಕೊಂದು ತಾಜಾ ಉದಾಹರಣೆ.

*** *** ***

ರಾಷ್ಟ್ರದ ಮುಖ್ಯವಾದ ಸಂಪತ್ತು
ಮಾನವಶಕ್ತಿ. ಈ ಮಾನವ ಶಕ್ತಿಯಾದ
ಪ್ರತಿಯೊಬ್ಬ ಸದೃಢ ವಯಸ್ಕನಿಗೆ ಕೆಲಸ
ಕೊಡತಕ್ಕ ಒಂದು ಕಾರ್ಯವನ್ನು ನಾವು
ಮಾಡದೇಹೋದರೆ, ನಮ್ಮ ದೇಶದ
ಆರ್ಥಿಕ ಸ್ಥಿತಿಯನ್ನು ಉದ್ಧಾರ
ಮಾಡುವುದಕ್ಕಾಗುವುದಿಲ್ಲ.

– ಎಸ್.ಆರ್. ಬೊಮ್ಮಾಯಿ

ಇವೊತ್ತು ಈ ರಾಜ್ಯದಲ್ಲಿ ಬಡತನ
ಹೋಗಬೇಕಾದರೆ ಒಂದು
ಆರ್ಥಿಕವಾದಂಥ, ಸುಸಂಪನ್ನವಾದಂತ
ಸಮಾಜವನ್ನು ನಿರ್ಮಾಣ
ಮಾಡಬೇಕಾದರೆ ವಕ್ಕಲುತನಕ್ಕೆ ಹೆಚ್ಚು
ಗಮನ ಕೊಡಬೇಕು. ಹಾಗೆ ಗಮನ
ಕೊಡುವಾಗ ಬೇಸಾಯ ಕೂಲಿಗಾರರ ಬಗ್ಗೆ
ಎಚ್ಚರ ವಹಿಸಬೇಕೆಂದು ಹೇಳುತ್ತೇನೆ.

**– ಎಸ್.ಆರ್. ಬೊಮ್ಮಾಯಿ**

## ಸದನದ ಗಮನ ಸೆಳೆದ ಬರಗಾಲದ ಗಂಭೀರತೆ

ದಿನಾಂಕ: 6.10.1968

**1967–68ರಲ್ಲಿ ರಾಜ್ಯವನ್ನು ಕಾಡಿದ ಭೀಕರ ಬರಗಾಲದ ಹಿನ್ನೆಲೆಯಲ್ಲಿ ಬೊಮ್ಮಾಯಿಯವರು ಸದನದ ಗಮನವನ್ನು ಸೆಳೆದ ರೀತಿ ಗಮನಾರ್ಹ. ಗ್ರಾಮೀಣ ಪ್ರದೇಶದ ಜನತೆಯ ಕಷ್ಟಗಳ ನಿಕಟ ಅನುಭವವಿದ್ದ ಬೊಮ್ಮಾಯಿಯವರು ಆ ಸಂದರ್ಭದಲ್ಲಿನ ಪರಿಸ್ಥಿತಿಯನ್ನು ಎಳೆ ಎಳೆಯಾಗಿ ಬಿಡಿಸಿಟ್ಟಿದ್ದೇ ಅಲ್ಲದೇ ಇಂತಹ ಸಂದರ್ಭಗಳಲ್ಲಿ ಸರ್ಕಾರದ ನಿಲುವು ಹೇಗಿರಬೇಕು. ಎಂತಹ ಕಾರ್ಯಕ್ರಮ ರೂಪಿಸಬೇಕು ಎಂಬ ಮಾರ್ಗದರ್ಶನ ನೀಡುವುದಲ್ಲದೇ ಸರ್ಕಾರ ಎಲ್ಲಿ ಎಡವುತ್ತಿದೆ ಎಂಬುದನ್ನು ಸ್ಪಷ್ಟವಾಗಿ ಎತ್ತಿ ತೋರಿಸುತ್ತಾರೆ.**

**ಶ್ರೀ ಎಸ್.ಆರ್. ಬೊಮ್ಮಾಯಿ :** ಮಾನ್ಯ ಅಧ್ಯಕ್ಷರೇ, ಮೊಟ್ಟ ಮೊದಲನೆಯದಾಗಿ ರಾಜ್ಯದಲ್ಲಿ ಇರುವ ಭೀಕರ ಬರಗಾಲ ಪರಿಸ್ಥಿತಿಯ ಬಗ್ಗೆ ಈಗಾಗಲೇ ಕೈಗೊಂಡಿರುವ ಪರಿಹಾರ ಕಾರ್ಯಗಳನ್ನು ತಿಳಿಸಿ ಮುಂದೆ ಕೈಗೊಳ್ಳಬೇಕಾದ ಕೆಲಸಗಳ ವಿಚಾರದಲ್ಲಿ ಮಾನ್ಯ ಸದಸ್ಯರು ಅಭಿಪ್ರಾಯವನ್ನು ಸೂಚಿಸಬೇಕೆಂದು ಮುಖ್ಯಮಂತ್ರಿಗಳು ಕೇಳಿರುವುದು ಸ್ವಾಗತಾರ್ಹವಾಗಿದೆ. ಈ ದೇಶದಲ್ಲಿ ಬರಗಾಲ ಮೇಲಿಂದ ಮೇಲೆ ಬರುವ ಪರಿಸ್ಥಿತಿಯಿದೆ. ಬರಗಾಲ ಬಂದಾಗಲೇನೋ ಸರಕಾರದವರು ತಾತ್ಕಾಲಿಕವಾಗಿ ಕೆಲವು ಕಾರ್ಯಕ್ರಮಗಳನ್ನು ಕೈಗೊಂಡು ಅಲ್ಲಲ್ಲಿ ಜನರಿಗೆ ಅಲ್ಪಸ್ವಲ್ಪ ಸವಲತ್ತುಗಳನ್ನು ಕೊಡುತ್ತಿದ್ದಾರೆ. ಶಾಶ್ವತವಾದ ಪರಿಹಾರವೊದಗಿಸಲು ಇದುವರೆಗೆ ಸರಿಯಾದ ಕಾರ್ಯಕ್ರಮ ಕೈಗೊಂಡಿಲ್ಲ. ಮೊಟ್ಟ ಮೊದಲನೆಯದಾಗಿ ಸ್ವಾತಂತ್ರ್ಯ ಬಂದನಂತರ ಮೂರು ಯೋಜನೆಗಳಲ್ಲಿ ಒಕ್ಕಲುತನಕ್ಕೆ ಯಾವ ಸ್ಥಾನ ಕೊಡಬೇಕಾಗಿತ್ತೋ ಅದನ್ನು ಕೊಡದೇ ಹೋದ್ದರಿಂದ ಈಗ ಕಷ್ಟವೊದಗಿದೆ. ಒಕ್ಕಲುತನಕ್ಕೆ ಪ್ರಥಮ ಪ್ರಾಶಸ್ತ್ಯ ಕೊಡದೇ ಚಿಕ್ಕ ನೀರಾವರಿ ಯೋಜನೆಗಳನ್ನು ಕೈಗೊಳ್ಳದೇ ಸರಕಾರದವರು ಅಲಕ್ಷ್ಯ ಮಾಡಿದ್ದರಿಂದ ನಾವು ಈ ದುರಾವಸ್ಥೆಗೆ ಈಡಾಗಬೇಕಾಯಿತು.

ಮೊಟ್ಟಮೊದಲನೆಯದಾಗಿ ನಾಲ್ಕನೆಯ ಪಂಚವಾರ್ಷಿಕ ಯೋಜನೆಯಲ್ಲಿ ಒಕ್ಕಲುತನಕ್ಕೆ ಪ್ರಥಮ ಪ್ರಾಶಸ್ತ್ಯವನ್ನು ಕೊಟ್ಟು ದೇಶದ ರಕ್ಷಣೆಗಾಗಿ ಖರ್ಚು ಮಾಡುವಷ್ಟೇ ಹಣವನ್ನು ಒಕ್ಕಲುತನದ ಸಲುವಾಗಿ ಖರ್ಚು ಮಾಡುವುದು ಅವಶ್ಯವಿದೆ. ಈ ಬಗ್ಗೆ ನಾವು ವಿಚಾರ ಮಾಡತಕ್ಕ ಮತ್ತೊಂದು ಮಹತ್ವದ ಕೆಲಸ

ಎಂದರೆ ನಮ್ಮಲ್ಲಿರುವ ಜನಬಲವನ್ನು ಉಪಯೋಗ ಮಾಡುವುದು ನಾವು ಮಾತನಾಡುವಾಗ ಪರದೇಶದಿಂದ ಸಹಾಯ ದೊರೆಯಬೇಕು. ಯಂತ್ರಗಳನ್ನು ತರಬೇಕು. ಬಾವಿಯನ್ನು ಅಗೆಯಲು ಯಂತ್ರಗಳನ್ನು ತರಬೇಕು. ಅದಕ್ಕೆ ಹಣ ಬೇಕು ಹಣವಿಲ್ಲದೆ ಯೋಜನೆಗಳೆಲ್ಲ ವ್ಯರ್ಥವಾಗುತ್ತಿವೆ ಎಂದು ಹೇಳುತ್ತೇವೆ. ನಮ್ಮಲ್ಲಿರತಕ್ಕ ಜನಬಲವನ್ನು ಸರಿಯಾಗಿ ಉಪಯೋಗ ಮಾಡಬೇಕು. ಇದಕ್ಕೆ ಸರ್ಕಾರದವರು ಮತ್ತು ಜನ ನಾಯಕರು ಜನತೆಯಲ್ಲಿ ಹೊಸ ವಾತಾವರಣ, ಹೊಸ ವಿಚಾರ ಕ್ರಾಂತಿಯನ್ನು ತರಬೇಕಾಗಿದೆ. ಪ್ರತಿಯೊಬ್ಬ ಮನುಷ್ಯನು ಹಳ್ಳಿಯಲ್ಲಿರುವ ಜನಬಲ ಸರಿಯಾಗಿ ಉಪಯೋಗ ಆಗುವಂತೆ ಕಾರ್ಯಕ್ರಮಗಳನ್ನ ತೆಗೆದುಕೊಳ್ಳಬೇಕು. ಬಾವಿ ತೆಗೆಯುವುದಕ್ಕೆ ಯಂತ್ರ ಬೇಕು ಎಂದು ಹೇಳುವುದಕ್ಕೆ ಬದಲಾಗಿ ಸಾವಿರಾರು ಜನ ತರುಣರು ಸರಿಯಾಗಿ ಒಂದು ವಾರ ಕೆಲಸ ಮಾಡಿದರೆ ಆ ಊರಿಗೆ ಬೇಕಾದ ಬಾವಿಯಾಗುತ್ತದೆ. ರಸ್ತೆ ಬೇಕು ಎಂದರೆ ರಸ್ತೆ ಆಗುತ್ತದೆ. ಗ್ರಾಮಾಂತರದಲ್ಲಿ ಪ್ರತಿಯೊಬ್ಬರು ಸರಿಯಾಗಿ ಕೆಲಸ ಮಾಡಿದರೆ ಒಂದೇ ವಾರದಲ್ಲಿ ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿಗೆ ರಸ್ತೆಯಾಗುತ್ತದೆ. ಅದೇ ರೀತಿ ಒಕ್ಕಲುತನದ ಅಭಿವೃದ್ಧಿ ಸಲುವಾಗಿಯೂ ಮಾಡಬೇಕಾಗಿದೆ. ಸಾಲ ತಂದು ಜನಗಳಿಗೆ ಆಹಾರವನ್ನು ಒದಗಿಸುವ ಕಾರ್ಯಕ್ರಮವನ್ನು ಇಟ್ಟುಕೊಂಡರೆ ಅದರಿಂದ ಯಾವ ಪರಿಹಾರವು ಆಗುವುದಿಲ್ಲ. ಶಾಶ್ವತ ಪರಿಹಾರದ ಬಗ್ಗೆ ಕಾರ್ಯಕ್ರಮವನ್ನು ರೂಪಿಸಲು ಒಂದು ಸಮಿತಿಯನ್ನು ನೇಮಿಸಬೇಕು. ಈ ಸಭೆಯ ಸದಸ್ಯರು ಅಧಿಕಾರಿಗಳು ಇವರನ್ನೊಳಗೊಂಡ ಒಂದು ಕಮಿಟಿಯನ್ನು ಮಾಡಿ ಅವರ ಸಲಹೆ ಪ್ರಕಾರ ತೀವ್ರ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಸೂಚನೆ ಕೊಡುತ್ತೇವೆ.

ಮುಖ್ಯಮಂತ್ರಿಗಳು ಸ್ಪಷ್ಟವಾಗಿ ತಮ್ಮ ಭಾಷಣದಲ್ಲಿ ಹೇಳಿದ್ದಾರೆ, ಕೊಟ್ಟ ಹಣವನ್ನು ಅಧಿಕಾರಿಗಳು ಖರ್ಚು ಮಾಡಿಲ್ಲ, ಎಷ್ಟೋ ಸಲ ಅಧಿಕಾರಿಗಳು ಮತ್ತು ದಲ್ಲಾಳಿಗಳ ಕಡೆಯಿಂದ ಹಣದ ದುರುಪಯೋಗವಾಗುವ ಸಂಭವವಿದೆ ಎನ್ನುವ ಮಾತನ್ನು ಹೇಳಿದ್ದಾರೆ. ಆ ಬಗ್ಗೆ ನಾನು ಅವರನ್ನು ಅಭಿನಂದಿಸುತ್ತೇನೆ. ಆದರೆ ಅವರು ಅಂಥ ಅಧಿಕಾರಿಗಳ ಬಗ್ಗೆ ಯಾವ ಯಾವ ಕ್ರಮಗಳನ್ನು ತೆಗೆದುಕೊಂಡಿದ್ದಾರೆ ಎನ್ನುವುದನ್ನು ಮಾತ್ರ ಹೇಳಲಿಲ್ಲ. ಅದನ್ನು ಸಭೆಯ ಮುಂದೆ ತಮ್ಮ ಉತ್ತರದಲ್ಲಿ ತಿಳಿಸಬೇಕು. ನಮಗೆ ಇನ್ನೂ ಒಂದು ಅನುಭವ ಏನು ಬಂದಿದೆ ಎಂದರೆ ಮಂತ್ರಿಗಳು ಭಾಷಣ ಮಾಡುತ್ತಾರೆ ಹೇಳಿದ್ದನ್ನೇ ಹೇಳಿಕೊಂಡು ಹೋಗುತ್ತಾರೆ. ನಾವು ಮಾಡುವ ಕೆಲಸಗಳನ್ನು ನಾವು ಮಾಡುವ ರೀತಿಯಲ್ಲಿಯೇ ಮಾಡಬಹುದು ಎನ್ನುವ ಭಾವನೆ

ಬಂದಿದೆ. ನನಗೆ ತಿಳಿದ ಮಟ್ಟಿಗೆ ಸ್ವಾತಂತ್ರ್ಯ ಬಂದ ನಂತರ ದಿವಂಗತ ಜವಹರಲಾಲ್ ನೆಹರು ಅವರು ಹೇಳಿದರು. ಎಲ್ಲಿ ಕಾಳಸಂತೆಕೋರರಿದ್ದಾರೆ ಅವರನ್ನೆಲ್ಲ ಗಲ್ಲಿಗೆ ಏರಿಸಬೇಕು ಎಂದು ಇಷ್ಟೆಲ್ಲ ಹೇಳಿದ್ದರೂ ಒಬ್ಬರ ಮೇಲೂ ಯಾವುದೇ ರೀತಿಯ ಕ್ರಮವನ್ನು ತೆಗೆದುಕೊಂಡಿಲ್ಲ. ಆದ್ದರಿಂದ ಮಾನ್ಯ ಮುಖ್ಯಮಂತ್ರಿಗಳು ತಪ್ಪು ಮಾಡಿದವರ ಮೇಲೆ ಏನು ಕ್ರಮ ತೆಗೆದುಕೊಳ್ಳುತ್ತಾರೆ, ಯಾವ ಕ್ರಮ ತೆಗೆದುಕೊಳ್ಳುತ್ತಾರೆ ಎನ್ನುವುದನ್ನು ಸ್ಪಷ್ಟವಾಗಿ ಹೇಳಬೇಕೆಂದು ಕೇಳಿಕೊಳ್ಳುತ್ತೇನೆ.

ಯುದ್ಧಕಾಲದಲ್ಲಿ ಯಾವ ರೀತಿ ತುರ್ತುಪರಿಸ್ಥಿತಿ ಎಂದು ಹೇಳಿ ಕೆಲಸಮಾಡಿದರೋ ಅದೇ ರೀತಿಯಾಗಿ ಪರಿಹಾರ ಕಾರ್ಯ ನಡೆಯಬೇಕು. ನಾನು ನಮ್ಮ ಭಾಗದಲ್ಲಿ ಎರಡು ತಿಂಗಳಿಂದ ಪ್ರವಾಸ ಮಾಡುತ್ತಿದ್ದೇನೆ. ಬರಗಾಲದ ಕಾಮಗಾರಿಗಳು ಯಾವ ರೀತಿ ನಡೆಯುತ್ತಿವೆ ಎಂದು ನೋಡುತ್ತಿದ್ದೇನೆ. ತಾಲ್ಲೂಕು ಕಮಿಟಿಯಿಂದ ಅಸಿಸ್ಟೆಂಟ್ ಕಮೀಷನರ್, ಡೆಪ್ಯುಟಿ ಕಮೀಷನರ್‌ಗೆ ಹೋಗಿ ಎಕ್ಸಿಕ್ಯೂಟೀವ್ ಇಂಜಿನಿಯರ್ ಪ್ಲಾನ್ ಮತ್ತು ಎಸ್ಟಿಮೇಟುಗಳು ಬರಬೇಕು ಅದೆಲ್ಲ ಬಂದ ಮೇಲೆ ಕೆಲಸಕ್ಕೆ ಆರ್ಡರ್ ಕೊಡಬೇಕು. ಇದರಿಂದ ಎರಡು ಮೂರು ತಿಂಗಳವರೆಗೆ ವಿಳಂಬವಾಗುತ್ತದೆ. ಅಭಾವ ಇರುವ ಸಂದರ್ಭದಲ್ಲಿ ಕೆಲಸಗಳನ್ನು ಮಾಡಿಸುವುದರಲ್ಲಿ ಹೇಗೆ ವಿಳಂಬವಾದರೆ ಜನ ಹೇಗೆ ಬದುಕಬೇಕು? ಈಗಾಗಲೇ ಅನೇಕ ಸದಸ್ಯರು ರೇಟುಗಳ ಬಗ್ಗೆ ಹೇಳಿದ್ದಾರೆ. ಷೆಡ್ಯೂಲ್ ರೇಟ್ ಏನಿದೆ ಅದು 10 ವರ್ಷಗಳ ಹಿಂದೆ ಲೋಕೋಪಯೋಗಿ ಖಾತೆ ರಿವೈಸ್ ಮಾಡಿದ್ದು ಇದುವರೆಗೂ ಹಾಗೆಯೇ ಇದೆ. ಅವರು ಗೊತ್ತು ಮಾಡಿರುವ ದರಕ್ಕೆ ಕೆಲಸ ಮಾಡಲು ಜನ ಬರುವುದಿಲ್ಲ. ಕೆಲಸದ ರೀತಿಯೇ ಬಹಳ ವಿಚಿತ್ರವಾಗಿದೆ. ಅನ್ನವಿಲ್ಲದೆ ದಿನೇ ದಿನೇ ಜನ ಸಾಯುವ ಸ್ಥಿತಿಯಲ್ಲಿದ್ದಾರೆ ಅಂಥವರ ಸಲುವಾಗಿ ಪ್ರತಿನಿತ್ಯ ಅಂಥವರಿಗೆ ಸಿಕ್ಕುವ ಸಲುವಾಗಿ ಈ ಕೆಲಸಗಳನ್ನು ಮಾಡಬೇಕಾಗಿದೆ. ಅಂಥದ್ದರಲ್ಲಿ ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳು 15 ದಿವಸ ಕೆಲಸ ಮಾಡಿ ಮೆಷರ್‌ಮೆಂಟ್ ತೆಗೆದುಕೊಂಡು ಮೇಲಿನವರ ಅಪ್ರೂವಲ್ ತೆಗೆದುಕೊಂಡು ಆ ಮೇಲೆ ಹಣ ಕೊಡುತ್ತೇವೆ ಎಂದು ಹೇಳುತ್ತಾರೆ. ಪ್ರತಿನಿತ್ಯ ದುಡಿದವನಿಗೆ ಹಣ ಸಿಕ್ಕದೆ ಹೋದರೆ ಅವನು ಬದುಕುವುದು ಕಷ್ಟ ಆದುದರಿಂದ ಪ್ರತಿನಿತ್ಯ ಬರಗಾಲದಲ್ಲಿ ಕೆಲಸ ಮಾಡತಕ್ಕ ಕೂಲಿಗಾರರಿಗೆ ಬಡ ಜನಗಳಿಗೆ ಅದೇ ದಿವಸ ಆಹಾರದ ರೂಪದಲ್ಲಿ ಸಂಬಳ ಸಿಕ್ಕಬೇಕು. ಇಲ್ಲದೆ ಹೋದರೆ ಅವರು ಬದುಕುವುದಕ್ಕೆ ಸಾಧ್ಯವಿಲ್ಲ.

ಕುಡಿಯುವ ನೀರಿನ ಬಗ್ಗೆ ಧಾರವಾಡ ಜಿಲ್ಲೆಯಲ್ಲಿ ಕೆಲವು ಹಳ್ಳಿಗಳಲ್ಲಿ ದಾರುಣ ಪರಿಸ್ಥಿತಿ ಇದೆ. ನನ್ನ ತಾಲ್ಲೂಕಿನಲ್ಲಿ 8–10 ಗ್ರಾಮಗಳಲ್ಲಿ ನೀರಿನ ತೊಂದರೆ ಬಹಳವಾಗಿದೆ ಅಲ್ಲಿರುವ ಕೆರೆಗಳಲ್ಲಿ ನೀರು ಬತ್ತಿ ಹೋಗಿದೆ. ಒಂದು ಗುಂಡಿ ತೆಗೆದರೆ ರಾತ್ರಿಯೆಲ್ಲ ಕಾದು ಬೆಳಗಾಗುವವರೆಗೂ ಇದ್ದರೆ ಒಂದು ಕೊಡನೀರು ಸಿಕ್ಕುತ್ತದೆ. ಅದನ್ನು ಯಾರಾದರೂ ಬಂದು ತೆಗೆದುಕೊಂಡು ಹೋಗುತ್ತಾರೆ ಎಂದು ಜನ ಗುಡಿಸಲು ಹಾಕಿಕೊಂಡು ಅಲ್ಲಿಯೇ ಕುಳಿತಿರುತ್ತಾರೆ. ಅಲ್ಲದೆ ಐದಾರು ಮೈಲಿಯಿಂದ ನೀರು ಬರಬೇಕು. ಅಲ್ಲಿಗೆ ನೀರು ಒದಗಿಸುವ ವ್ಯವಸ್ಥೆಯನ್ನು ಮಾಡಿಕೊಡಿ ಎಂದು ಅಧಿಕಾರಿಗಳಿಗೆ ತಿಳಿಸಿದ ಮೇಲೆ ಟ್ರಕ್ನಲ್ಲಿ ನೀರನ್ನು ಒಯ್ಯುವ ವ್ಯವಸ್ಥೆಯನ್ನು ಮಾಡಿದ್ದಾರೆ. ಆದರೆ ಅವರಿಗೆ ಎರಡು ತಿಂಗಳಾದರೂ ಇದುವರೆಗೂ ಹಣ ಸಿಕ್ಕಿಲ್ಲ, ಷೆಡ್ಯೂಲ್ ರೇಟುಗಳು ಇನ್ನೂ ಬಂದಿಲ್ಲ. ಅದಕ್ಕೆ ಬರೆದಿದ್ದೇವೆ ಎಂದು ಹೇಳುತ್ತಾರೆ. ಕುಡಿಯುವ ನೀರನ್ನು ಒದಗಿಸಿದಂಥ ಟ್ರಕ್ ಮಾಲೀಕರಿಗೆ ಎರಡು ಮೂರು ತಿಂಗಳವರೆಗೆ ಹಣ ಕೊಡದೇ ಇದ್ದರೆ ಯಾರು ಆ ಕೆಲಸಕ್ಕೆ ಮುಂದೆ ಬರುತ್ತಾರೆ. ಈ ರೀತಿಯ ಅವ್ಯವಸ್ಥೆ ಬರಗಾಲ ಪರಿಹಾರ ಕ್ರಮದಲ್ಲಿ ನಡೆಯುತ್ತಿದೆ. ಇದಕ್ಕೆ ನನ್ನ ಸೂಚನೆ ಏನೆಂದರೆ ತಾಲ್ಲೂಕು ಮಟ್ಟದಲ್ಲಿ ಪರಿಹಾರ ಸಮಿತಿಗಳು ಎಂದು ಏನಿವೆ ತಾಲ್ಲೂಕು ಬೋರ್ಡು ಬೇಡ. ಅಧಿಕಾರಿಗಳು ಬೇಡ – ತಾಲ್ಲೂಕು ರಿಲೀಫ್ ಕಮಿಟಿಗಳಿಗೆ ಈ ಅಧಿಕಾರವನ್ನು ಕೊಡಬೇಕು ಅವರು ಹೆಚ್ಚು ಹಣ ಖರ್ಚು ಮಾಡಿ ಕೆಲಸ ಮಾಡುವಂಥ ವ್ಯವಸ್ಥೆ ಆಗಬೇಕು.

ನಮ್ಮ ಭಾಗದಲ್ಲಿ ಒಂದು ವಿಚಿತ್ರವಿದೆ. ಅಲ್ಲಿ ಕೆರೆಗಳಿಲ್ಲ ರಸ್ತೆ ಕೆಲಸ ಮಾಡುವುದಕ್ಕಾಗುವುದಿಲ್ಲ. ಜನಗಳಿಗೆ ಕೆಲಸ ಕೊಡುವ ರೀತಿ ಎಂದರೆ ರೈತರು ತಮ್ಮ ಹೊಲಗಳಲ್ಲಿ ಒಡ್ಡು ಹಾಕಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಡಬೇಕು. ಸರ್ಕಾರದವರೂ ಈ ಕೆಲಸವನ್ನು ತೆಗೆದುಕೊಳ್ಳುತ್ತಿಲ್ಲ. ಸರ್ಕಾರದವರಿಂದ ತೆಗೆದುಕೊಳ್ಳುವುದಕ್ಕಾಗದೇ ಇದ್ದರೆ ದೊಡ್ಡದೊಡ್ಡ ರೈತರು ತಮ್ಮ ತಮ್ಮ ಹೊಲಗಳಲ್ಲಿ ಒಡ್ಡು ಹಾಕುವ ಕೆಲಸವನ್ನು ಬರಗಾಲ ಕಾಮಗಾರಿಯನ್ನಾಗಿ ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕು. ಅದಕ್ಕೆ ಸರ್ಕಾರದಿಂದ ಹಣ ಕೊಡುವ ವ್ಯವಸ್ಥೆಯಾಗಬೇಕು. ಆ ಭಾಗದಲ್ಲಿ ಕೆರೆಗಳಲ್ಲದೆ ಬಾವಿ ತೆಗೆಯಲಿಕ್ಕೆ ಸಾಧ್ಯವಿದೆ. ಕೂಲಿ ಮಾಡುವ ಜನರು ಕೆಲಸವಿಲ್ಲದೆ ಉಪವಾಸ ಸಾಯುವ ಪರಿಸ್ಥಿತಿ ಇರುವುದರಿಂದ ತೀವ್ರ ಒಂದು ವ್ಯವಸ್ಥೆ ಮಾಡಿ ಜಮೀನು ಮಾಲೀಕರು ತಮ್ಮ ತಮ್ಮ ಜಮೀನು ಅಭಿವೃದ್ಧಿಯ ಸಲುವಾಗಿ ಮಾಡುವ ಕೆಲಸವನ್ನು ಬರಗಾಲ ಕಾಮಗಾರಿಯಂತೆ ಮಾಡುವ ವ್ಯವಸ್ಥೆಯನ್ನು ಕೂಡಲೇ ಮಾಡಬೇಕು.

ಕುಡಿಯುವ ನೀರಿನ ಬಗ್ಗೆ ಹೇಳುವುದಾದರೆ ಧಾರವಾಡ ಜಿಲ್ಲೆಯಲ್ಲಿ ಸುಮಾರು ಒಂದು ಸಾವಿರ ಹಳ್ಳಿಗಳಿಗೆ ಸಂಬಂಧಪಟ್ಟ ಹಾಗೆ ಯೋಜನೆಗಳು ತಯಾರಾಗಿವೆ. ಆದರೆ ಕಾರ್ಯಗತವಾಗದೆ 20 ವರ್ಷಗಳಲ್ಲಿ ಕೇವಲ 10 ಕೆಲಸಗಳಾಗಿರುವಾಗ ಎಲ್ಲ ಭಾವಿಗಳನ್ನು ಎಷ್ಟು ಕಾಲದಲ್ಲಿ ಮಾಡುವುದಕ್ಕೆ ಸಾಧ್ಯವಾಗುತ್ತದೆ ಎನ್ನುವುದನ್ನು ಯೋಚನೆ ಮಾಡಿ ಆದ್ದರಿಂದ ತೀವ್ರತರವಾಗಿ ಕುಡಿಯುವ ನೀರನ್ನು ಒದಗಿಸಲು ಸರ್ಕಾರದವರು ಹಣವನ್ನು ಒದಗಿಸಬೇಕು. ಮತ್ತು ಆ ಬಗ್ಗೆ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಈ ಸಮಯದಲ್ಲಿ ಸೂಚನೆ ಕೊಡಬಯಸುತ್ತೇನೆ.

ಅಧ್ಯಕ್ಷರು ಈ ವಿಷಯದ ಬಗ್ಗೆ ಮಾತನಾಡುವುದಕ್ಕೆ ಅವಕಾಶ ಕೊಟ್ಟಿದ್ದಕ್ಕಾಗಿ ಅವರನ್ನು ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ನಾಡಿನ ಹಿತರಕ್ಷಣೆ ರಾಜಕೀಯ ಲಾಭಕ್ಕಿಂತ ಮುಖ್ಯ

ದಿನಾಂಕ: 25.02.1970

**ರಾಜ್ಯವನ್ನು ಸ್ವತಂತ್ರ ಬಂದಾಗಿನಿಂದಲೂ ಕಾಡುತ್ತಿರುವ ಜಟಿಲ ಸಮಸ್ಯೆಗಳಲ್ಲಿ ಗಡಿ ವಿವಾದವೂ ಒಂದು. ಮಹಾಜನ್ ವರದಿಯನ್ನು ಕೂಲಂಕಷವಾಗಿ ಅಧ್ಯಯನ ಮಾಡಿದ್ದ ಬೊಮ್ಮಾಯಿಯವರು ಅಂದು ಉದ್ಭವಿಸಿದ್ದ ಗಡಿ ವಿವಾದದ ಹಿನ್ನೆಲೆಯಲ್ಲಿ ಚರ್ಚೆಯಲ್ಲಿ ಪಾಲ್ಗೊಂಡು ಆಡಿದ ಮಾತುಗಳು ಗಮನಾರ್ಹ. ಈ ಹಿನ್ನೆಲೆಯಲ್ಲಿ ಸರ್ಕಾರದ ನಿಲುವು ಸ್ಪಷ್ಟಪಡಿಸುವಂತೆ ಬೊಮ್ಮಾಯಿಯವರು ಒತ್ತಾಯಿಸಿದರಲ್ಲದೇ ಮಾನ್ಯ ಶಾಂತವೇರಿ ಗೋಪಾಲಗೌಡರ ನಿರ್ಣಯಕ್ಕೆ ಬೆಂಬಲ ನೀಡಿ ನಾಡಿನ ಹಿತರಕ್ಷಣೆಯೇ ಸಂದರ್ಭದ ರಾಜಕೀಯ ಲಾಭಕ್ಕಿಂತ ಮುಖ್ಯ ಎಂಬ ನಿಲುವು ವ್ಯಕ್ತಪಡಿಸುತ್ತಾರೆ. ರಾಜ್ಯದ ಪರವಾದ ಈ ಕಳಕಳಿಯನ್ನು ಅವರ ಜೀವನದ ಉದ್ದಕ್ಕೂ ನಾವು ಕಾಣಬಹುದು.**

**ಶ್ರೀ ಎಸ್.ಆರ್. ಬೊಮ್ಮಾಯಿ** (ಕುಂದಗೋಳ್) ಮಾನ್ಯ ಅಧ್ಯಕ್ಷರೇ, ಈಗಾಗಲೇ ವಿರೋಧ ಪಕ್ಷದ ನಾಯಕರಾದ ಶ್ರೀಮಾನ್ ಶಿವಪ್ಪನವರು ಮತ್ತು ಶ್ರೀಮಾನ್ ಗೋಪಾಲಗೌಡರು ಪಟ್ಟ ಅಭಿಪ್ರಾಯಕ್ಕೆ ಬೆಂಬಲ ಕೊಟ್ಟು ಕೆಲವು ಮಾತುಗಳನ್ನು ಹೇಳುತ್ತೇವೆ.

ಭಾರತ ದೇಶವು ಸ್ವತಂತ್ರವಾದ ಮೇಲೆ ಭಾಷಾವಾರು ರಾಜ್ಯಗಳ ಬೇಡಿಕೆ ಬಂದಾಗ ಈ ದೇಶದ ಅನೇಕ ನಾಯಕರು ಈ ದೇಶವನ್ನು ಭಾಷೆಯ ಆಧಾರದ ಮೇಲೆ ವಿಂಗಡಣೆ ಮಾಡುತ್ತೀರಾ ಈ ರೀತಿ ವಿಂಗಡಣೆ ಮಾಡುವುದರಿಂದ ದೇಶದ ಒಕ್ಕೂಟಕ್ಕೆ ಆಘಾತವುಂಟಾಗಬಹುದು. ಅಥವಾ ಆ ರೀತಿ ವಿಭಾಗ ಮಾಡುವುದರಿಂದ ಜನರ ಕಲ್ಯಾಣವಾಗಬಹುದೇ ಎಂಬ ಸಂಶಯವನ್ನು ಅನೇಕರು ವ್ಯಕ್ತಪಡಿಸಿದ್ದಾರೆ. ಆದರೂ ದೇಶದ ಜನಾಂಗದ ಏಳಿಗೆಗಾಗಿ ಸರ್ಕಾರದ ಕಲಾಪಗಳು ಆಯಾ ಭಾಷೆಯಲ್ಲಿ ನಡೆಯಬೇಕೆನ್ನುವ ದೃಷ್ಟಿಯಿಂದ ಕೇಂದ್ರ ಸರ್ಕಾರದವರು ಇದಕ್ಕೆ ಸಂಬಂಧಪಟ್ಟ ಒಂದು ನಿರ್ಣಯವನ್ನು ಪಾರ್ಲಿಮೆಂಟಿನಲ್ಲಿ 1956ನೇ ಇಸವಿಯಲ್ಲಿ ಮಾಡಿದ್ದಾರೆ. ಅದರಿಂದ ಅನೇಕ ಕಡೆಗಳಲ್ಲಿ ಅನೇಕ ರೀತಿಯ ಗೊಂದಲಗಳು ಉಂಟಾದರೂ ಸಾಮಾನ್ಯ ಜನರ ಹಿತದೃಷ್ಟಿಯಿಂದ ಎಲ್ಲರೂ ಎಸ್.ಆರ್.ಸಿ. ವರದಿಯ ಪ್ರಕಾರ ನಡೆದುಕೊಳ್ಳುವ ನಿರ್ಣಯವನ್ನು ಒಪ್ಪಿಕೊಂಡರು. ಮಹಾರಾಷ್ಟ್ರ ಮತ್ತು ಮೈಸೂರು ಗಡಿಯ ವಾದವನ್ನು ಹೇಳುವುದಾದರೆ ಮೊಟ್ಟ ಮೊದಲನೆಯದಾಗಿ ಪಾರ್ಲಿಮೆಂಟಿನಲ್ಲಿ ಬಂದಾಗ ಅನೇಕ ತಿದ್ದುಪಡಿಗಳನ್ನು ಮಹಾರಾಷ್ಟ್ರದ ಸದಸ್ಯರು ಮುಂದೆ ಮಾಡಿದರು ಮತ್ತು ಈಗ ಮಾಡತಕ್ಕ ವಾದವನ್ನು

ಪಾರ್ಲಿಮೆಂಟಿನಲ್ಲಿ ಆಗ ಕೂಡ ಹೇಳಿದ್ದರು. ಆದರೂ ಪಾರ್ಲಿಮೆಂಟಿನಲ್ಲಿ ಸದಸ್ಯರು ತಮ್ಮ ವಿವೇಕ ಬುದ್ಧಿಯನ್ನು ಉಪಯೋಗಿಸಿಕೊಂಡು ಎಸ್.ಆರ್.ಸಿ. ವರದಿಯನ್ನು ಒಪ್ಪಿಕೊಂಡಿದ್ದಾರೆ. ಮಹಾರಾಷ್ಟ್ರದ ವಾದವನ್ನು ತಿರಸ್ಕರಿಸಿದ್ದಾರೆ. ಈ ರೀತಿ ಕಾಯಿದೆ ಬಂದ ಮೇಲೆ ಮಹಾರಾಷ್ಟ್ರದಲ್ಲೂ ಚಳವಳಿ ನಡೆಯಿತು. ಆ ಕಾಲಕ್ಕೆ ಮಹಾರಾಷ್ಟ್ರದವರು ಕೇಂದ್ರ ಸರ್ಕಾರಕ್ಕೆ  ಒಂದು ಮನವಿಯನ್ನು ಅರ್ಪಿಸಿದರು. ಮುಂದೆ ಮಹಾರಾಷ್ಟ್ರದ ಮುಖ್ಯಮಂತ್ರಿಯವರು ಮತ್ತು ಮೈಸೂರು ರಾಜ್ಯದ ಮುಖ್ಯಮಂತ್ರಿಯವರು ಅನೇಕ ಸಲ ಸೇರಿ ಚರ್ಚೆ ಮಾಡಿದರು. ಈ ಪ್ರಶ್ನೆ ಬಗೆಹರಿಯಲಿಲ್ಲ. ಅವರು ಆ ಕಾಲಕ್ಕೆ ನಾಲ್ಕು ಜನರ ಒಂದು ಕಮಿಷನ್ ನೇಮಕ ಮಾಡುವುದಕ್ಕೆ ಒಪ್ಪಿಕೊಂಡರು. ನಮ್ಮ ರಾಜ್ಯದ ಹಿರಿಯ ಸದಸ್ಯರಾದ ಚನ್ನಯ್ಯನವರು ಮಳಿಮಠರವರು ಮತ್ತು ಬೊಂಬಾಯಿಯ ಪಾಠಕ್‌ಸರ್ ಮತ್ತು ಎಂ.ಡಿ.ಭಟ್ ಇವರನ್ನು ಒಳಗೊಂಡ ಒಂದು ಸಮಿತಿಯನ್ನು ಮಾಡಿದರು. ಆ ಸಮಿತಿಯೊಂದು ಸಾಮಾನ್ಯ ನಿರ್ಣಯಕ್ಕೆ ಬರಲು ಪ್ರಯತ್ನ ಮಾಡಿದರೂ ಆಗದೆ ಹೋಯಿತು. ನಂತರ ಮುಖ್ಯಮಂತ್ರಿಗಳಿಗೂ ಈ ಸಮಸ್ಯೆಯನ್ನು ಬಗೆಹರಿಸಲಿಕ್ಕೆ ಆಗಲಿಲ್ಲ. ಮತ್ತು ಕಾಂಗ್ರೆಸ್ ವರ್ಕಿಂಗ್ ಕಮಿಟಿಯಲ್ಲಿ ಮಹಾರಾಷ್ಟ್ರದವರ  ಒತ್ತಾಯಕ್ಕೆ ಮಣಿದು ಒಂದು ನಿರ್ಣಯವನ್ನು ತಂದು ಅದರ ಪ್ರಕಾರ ಈ ಮಹಾಜನ ಕಮಿಷನ್ ನೇಮಕವಾಯ್ತು ಇದರ ಬಗ್ಗೆಯೂ ಕೇಂದ್ರದವರು ಈ ಧೋರಣೆ ತಾಳಿದುದಕ್ಕೆ ಕನ್ನಡನಾಡಿನ ಜನರು ಚಳವಳಿ ಮಾಡಿದ್ದರು. ಏನೇ ಆದರೂ ನಮ್ಮ ನಮ್ಮ ನಡುವೆ ಇರುವ ಸಣ್ಣ ಸಮಸ್ಯೆಯನ್ನು ರಾಷ್ಟ್ರದ ಹಿತದೃಷ್ಟಿಯಿಂದ ಬಗೆಹರಿಸುವುದಕೋಸ್ಕರ ಈ ಏಕ ಸದಸ್ಯ ಆಯೋಗನ್ನು ಒಪ್ಪಿಕೊಂಡೆವು. ಮುಂದೆ ತಮ್ಮ ತಮ್ಮ ಸಾಕ್ಷಿಗಳನ್ನು ಪುರಾವೆಗಳನ್ನು ಎರಡೂ ಪಕ್ಷದವರು ಮುಂಡಿಸಿದರು. ಮಹಾಜನ್‌ರವರು ಎಲ್ಲಾ ಸಮಸ್ಯೆಗಳನ್ನು ಪರಾಮರ್ಶಿಸಿ ಒಂದು ನಿರ್ಣಯವನ್ನು ಕೊಟ್ಟರು. ಗೋಪಾಲಗೌಡರು ಹೇಳಿದಂತೆ ಮಹಾಜನ ಕಮಿಷನ್ ವರದಿಯ ಪ್ರಕಾರ ನಿಪ್ಪಾಣಿ ಮುಂತಾದ ಪ್ರದೇಶ ಮಹಾರಾಷ್ಟ್ರಕ್ಕೆ ಹೋಗುತ್ತದೆ. ಅಂಥ ಅನ್ಯಾಯವಾಗಿದ್ದರೂ ಈ ಗಡಿಯ ಸಮಸ್ಯೆ ಕೊನೆಗೊಳ್ಳಲಿ ಎಂದು ಒಪ್ಪಿಕೊಂಡಿದ್ದೇವೆ.

ಮಹಾರಾಷ್ಟ್ರದ ಮುಖಂಡರು ಮಹಾಜನ್ ನೇಮಿಸಿದ್ದಕ್ಕೆ ಆನಂದವನ್ನು ವ್ಯಕ್ತಪಡಿಸಿದ್ದಾರೆ, ಸ್ವಾಗತ ಮಾಡಿದ್ದಾರೆ, ಯಾವ ನಿರ್ಣಯ ಬಂದರೂ ಒಪ್ಪಿಕೊಳ್ಳುತ್ತೇವೆಂದು ಹೇಳಿದ್ದಾರೆ. ಮಾನ್ಯ ಗೃಹ ಮಂತ್ರಿಯವರಾದ ಚವಾಣರು ಸಹ ಅನೇಕ ಕಡೆ ಕಮಿಷನ್ ನೇಮಕ ಮಾಡಿದ್ದು ಒಳ್ಳೆಯದು ಎಂದು ಹೇಳಿದ್ದಾರೆ. ಈ ರೀತಿ ನಿರ್ಣಯ ಬರುವುದಕ್ಕೆ ಮೊದಲು ಮಹಾರಾಷ್ಟ್ರ ಮುಖಂಡರು ಸಹ ಒಪ್ಪಿದ್ದಾರೆ. ಯೋಗ್ಯವಾದ ಮಹಾಜನ್ ನಿರ್ಣಯ ಬಂದಮೇಲೆ, ಅದನ್ನು

ಸಂಪೂರ್ಣವಾಗಿ ಐತೀರ್ಪೆಂದು ಒಪ್ಪಬೇಕೆಂದು ಈ ಸಭೆಯಲ್ಲೂ ನಿರ್ಣಯ ಮಾಡಿದ್ದಾರೆ. ಆ ನಿರ್ಣಯವಾಗಿ ಸುಮಾರು ಎರಡು ವರ್ಷವಾದರೂ ಕೇಂದ್ರ ಸರ್ಕಾರದವರು ಸುಮ್ಮನೆ ಇದ್ದು, ಈಗ ಒಮ್ಮಿಂದೊಮ್ಮೆಗೆ ಏಕೆ ಎದ್ದರು ಎಂಬುದನ್ನು ಹಲವು ಸದಸ್ಯರು ಈಗಾಗಲೇ ಹೇಳಿದ್ದಾರೆ. ಅದರಲ್ಲಿ ಅರ್ಥ ಇದೆ, ಮಾನ್ಯ ಮಿತ್ರರಾದ ಕೆ.ಎಚ್.ಪಾಟೀಲರು ಹೇಳಿದರು ವೀರೇಂದ್ರ ಪಾಟೀಲರು ಬೆಳಗಾಂನಲ್ಲಿ ಮಾಡಿದ ಭಾಷಣದ ಪರಿಣಾಮವಾಗಿ ಈ ರೀತಿಯ ಕ್ರಮವನ್ನು ಕೇಂದ್ರ ಸರ್ಕಾರದಲ್ಲಿ ಪ್ರಧಾನಮಂತ್ರಿಯವರು ತೆಗೆದುಕೊಂಡಿದ್ದಾರೆ ಎಂದು ನಾನೂ ಆ ಸಭೆಯಲ್ಲಿ ಭಾಗವಹಿಸಿದ್ದೆ, ಸಂಪೂರ್ಣವಾಗಿ ಮುಖ್ಯಮಂತ್ರಿಯವರ ಭಾಷಣವನ್ನು ಕೇಳಿದ್ದೇನೆ.

**ಶ್ರೀ ಕೆ.ಎಚ್. ರಂಗನಾಥ್:** ಈ ಕುರಿತು ನನ್ನದೊಂದು ಸ್ಪಷ್ಟನೆ ಇದೆ. ಇವರು ಸಬ್‌ಸ್ಟಿಟ್ಯೂಟ್ ಮೋಶನ್‌ನಲ್ಲಿ ಈ ರೀತಿ ಹೇಳಿದ್ದಾರೆ. ಕೇಂದ್ರ ಸರ್ಕಾರವು ಗಡಿ ಸಮಸ್ಯೆಯನ್ನು ಬಗೆಹರಿಸುವ ನಿಟ್ಟಿನಲ್ಲಿ ಈಗ ಪ್ರಯತ್ನ ನಡೆಸಿದೆ. ನನಗೆ ತಿಳಿದಮಟ್ಟಿಗೆ ಪತ್ರಿಕೆಗಳಲ್ಲಿ ಏನೊಂದು ಊಹಾಪೋಹ ಬಂದಿದೆ, ಅದರ ಪ್ರಕಾರ ನಾವು ಹೇಳುತ್ತಿದ್ದೇವೆ. ಸರಿಯಾದ ವರದಿ ನಮ್ಮ ಮುಂದಿಲ್ಲ. ನಿನ್ನೆ ಮುಖ್ಯಮಂತ್ರಿಯವರು ಹೇಳಿದ್ದಾರೆ, ಕೇಂದ್ರದವರು ಕರಾರುವಾಕ್ಕಾಗಿ ಅಭಿಪ್ರಾಯವನ್ನು ಬರವಣಿಗೆಯ ಮೂಲಕ ತಿಳಿಸದ ಹೊರತು ಅದರ ಬಗ್ಗೆ ಏನೂ ಹೇಳುವುದಕ್ಕಾಗುವುದಿಲ್ಲ ಮತ್ತು ಅಲ್ಲಿಯವರೆಗೆ ಡೆಲ್ಲಿಗೆ ಹೋಗಿ ಮಾತನಾಡುವುದಿಲ್ಲವೆಂದು ಹೇಳಿದ್ದು ನಿನ್ನೆ ಪತ್ರಿಕೆಯಲ್ಲೂ ಬಂದಿದೆ. ಹೀಗಿರುವಾಗ ಮಾನ್ಯ ಸದಸ್ಯರು ಒಂದು ನಿರ್ಣಯದಲ್ಲಿ ಈ ರೀತಿ ಹೇಳಿದ್ದಾರೆಂಬ ಅಭಿಪ್ರಾಯವನ್ನು ಸಭೆಯ ಮುಂದೆ ಇಟ್ಟಿದ್ದಾರೆ. ಇದರಿಂದ ಏನಾಗುತ್ತದೆ ಎಂದರೆ ನಮಗೆ ಸರಿಯಾದ ಸಮಾಚಾರ ಏನು ಎಂಬುದು ತಿಳಿಯುತ್ತಿಲ್ಲ. ಇವತ್ತಿನ ದಿವಸದ ಪತ್ರಿಕೆಯಲ್ಲಿ ವರದಿಯಾಗಿದೆ, ಮಾನ್ಯ ಮುಖ್ಯಮಂತ್ರಿಗಳು ತಮ್ಮ ಪಕ್ಷದ ಸದಸ್ಯರಿಗೆ ಈ ವಿಚಾರದಲ್ಲಿ ಸಂಪೂರ್ಣವಾದಂಥ ವಿಷಯವನ್ನು ಹೇಳಿದ್ದಾರೆ ಎಂಬುದಾಗಿ ಶುಕ್ರವಾರ ಇದೇ ವಿಷಯವನ್ನು ಚರ್ಚೆಮಾಡಲು ಮಂತ್ರಿಮಂಡಲದವರು ಕ್ಯಾಬಿನೆಟ್ ಮೀಟಿಂಗ್ ಸಹ ಇಟ್ಟುಕೊಂಡಿದ್ದರು. ನಂತರ ಮಾನ್ಯ ಮಂತ್ರಿಗಳಾದ ಶ್ರೀಮಾನ್ ಕೌಜಲಗಿ ಮತ್ತು ರಾಚಯ್ಯನವರನ್ನು ದೆಹಲಿಗೆ ಕಳಿಸಿದ್ದು, ಅಲ್ಲಿಂದ ಶ್ರೀಮಾನ್ ಕೌಜಲಗಿ ಅವರು ವಾಪಸ್ ಬಂದಿದ್ದು ಮತ್ತು ರಾಚಯ್ಯನವರು ಇನ್ನೂ ಬಾರದೆ ಇರುವುದು ಇವೆಲ್ಲಾ ಪತ್ರಿಕೆಗಳಲ್ಲಿ ಬರುತ್ತಿವೆ. ನಮಗೆ ಪತ್ರಿಕೆಗಳಲ್ಲಿ ಬರುತ್ತಿರುವ ವಿಷಯಗಳು ತಿಳಿದಿವೆಯೇ ಹೊರತು ಖಚಿತವಾದ ವಿಷಯ ತಿಳಿದಿಲ್ಲ. ಆದ್ದರಿಂದ ತಮ್ಮ ಮೂಲಕ ಮಾನ್ಯ ಸದಸ್ಯರನ್ನು ನಾನು ಕೇಳಿದ್ದು ಇಷ್ಟೆ, ಮಾನ್ಯ ಮುಖ್ಯಮಂತ್ರಿಗಳು ಕೇಂದ್ರ ಸರ್ಕಾರದ ಅಭಿಪ್ರಾಯವನ್ನು ಖಚಿತವಾಗಿ ತಮ್ಮ ಪಕ್ಷದ ಸದಸ್ಯರಿಗೆ

ತಿಳಿಸಿದ್ದರೆ, ಅದರ ಒಂದು ಆಧಾರದ ಮೇಲೆ ಶ್ರೀಮಾನ್ ಬೊಮ್ಮಾಯಿ ಅವರು ತಿಳಿದುಕೊಂಡು ನಿರ್ಣಯ ಮಂಡಿಸಿದ್ದರೆ ನಾವು ಸಹ ನಮ್ಮ ಅಭಿಪ್ರಾಯವನ್ನು ತಿಳಿಸುವುದಕ್ಕೆ ಅವಕಾಶವಾಗುತ್ತದೆ. ಇಲ್ಲದಿದ್ದರೆ ಗಾಳೀ ಸಮಾಚಾರದ ಮೇಲೆ ನಾವೆಲ್ಲಾ ಇಲ್ಲಿ ಮಾತನಾಡಿದರೆ ಅದು ಬನಪ್ಪ ಪಾರ್ಕಿನಲ್ಲಿ ಭಾಷಣ ಮಾಡಿದಂತಾಗುತ್ತದೆ. ಆದ್ದರಿಂದ ಮತ್ತೊಮ್ಮೆ ತಮ್ಮ ಮೂಲಕ ಮಾನ್ಯ ಸದಸ್ಯರನ್ನು ಕೇಳಿಕೊಳ್ಳುತ್ತಿದ್ದೇವೆ. ಅವರಿಗೆ ವಿಷಯ ಏನು ಎಂಬುದು ಕೂಲಂಕಷವಾಗಿ ಗೊತ್ತಿದ್ದರೆ, ಅದನ್ನು ಇಲ್ಲಿ ಹೇಳಿದರೆ ಆ ಬಗ್ಗೆ ಶಕ್ತಿಯುತವಾದಂಥ ನಿಯಮವನ್ನು ಎಲ್ಲಾ ಪಕ್ಷಗಳವರೂ ತಳೆಯುವುದಕ್ಕೆ ಮತ್ತು ತಕ್ಕ ಕಾರ್ಯಕ್ರಮ ಕೈಗೊಳ್ಳುವುದಕ್ಕೆ ಅವಕಾಶವಾಗುತ್ತದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಾನ್ಯ ಶ್ರೀಮಾನ್ ರಂಗನಾಥ್ ಅವರು ಕೇಳಿದ ಪ್ರಶ್ನೆಗೆ ಉತ್ತರ ಕೊಡುವುದಾದರೆ, ಮಾನ್ಯ ಮುಖ್ಯಮಂತ್ರಿಗಳು ತಮ್ಮ ಪಕ್ಷದ ಸಭೆಯಲ್ಲಿ ಯಾವುದೇ ಗುಟ್ಟಿನ ವಿಷಯವನ್ನೂ ಸಹ ಹೇಳಲಿಲ್ಲ. ಕೇಂದ್ರ ಸರ್ಕಾರದಿಂದ ಇಂತಹ ಪ್ರಪೋಸಲ್ಸ್ ಬಂದಿದೆ ಎಂಬುದನ್ನು ಸಹ ಹೇಳಲಿಲ್ಲ. ನಾನೂ ಸಹ ಪತ್ರಿಕೆಗಳಲ್ಲಿ ಬರುತ್ತಿರುವ ವಿಷಯಗಳನ್ನು ಓದುತ್ತಿದ್ದೇನೆ. ಈ ವಿಷಯವಾಗಿ ಹಿಂದೂಸ್ಥಾನದ ಎಲ್ಲಾ ಪತ್ರಿಕೆಗಳಲ್ಲಿಯೂ ವರದಿ ಬರುತ್ತಿದೆ. ಮಹತ್ವವಾದ ವಿಷಯಗಳು ಏನು, ಕೇಂದ್ರ ಸರ್ಕಾರದವರು ಮಹಾರಾಷ್ಟ್ರದವರಿಗೆ ತಿಳಿಸಿದ್ದು ಏನು ಮೈಸೂರು ಸರ್ಕಾರಕ್ಕೆ ತಿಳಿಸಿದ್ದು ಏನು ಎಂಬುದು ಕೆಲವು ದಿನಗಳಿಂದ ಪತ್ರಿಕೆಗಳಲ್ಲಿ ಭರುತ್ತಿದೆ. ಅದೇ ಆಧಾರದ ಮೇಲೆ ಶ್ರೀ ವಿ.ಎನ್.ಪಾಟೀಲರು ಒಂದು ಠರಾವನ್ನು ತಂದಿದ್ದಾರೆ.

**ಶ್ರೀ ಕೆ.ಎಚ್. ರಂಗನಾಥ್:** ಇವತ್ತಿನ ಪತ್ರಿಕೆಯಲ್ಲಿ ಮಾನ್ಯ ಮುಖ್ಯಮಂತ್ರಿಗಳು ತಮ್ಮ ಪಕ್ಷದ ಸದಸ್ಯರಿಗೆ ಕೇಂದ್ರ ಸರ್ಕಾರದ ಅಭಿಪ್ರಾಯವನ್ನು ತಿಳಿಸಿದ್ದಾರೆಂದು ವರದಿ ಬಂದಿದೆ. ಆ ರೀತಿ ಏನಾದರೂ ತಿಳಿಸಿದ್ದರೆ ಅದನ್ನು ಇಲ್ಲಿ ಹೇಳಿದರೆ ನಮಗೂ ಅನುಕೂಲವಾಗುತ್ತದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ನಾನು ಈಗ ಪತ್ರಿಕೆಗಳಲ್ಲಿ ಬಂದಿರುವ ಅಭಿಪ್ರಾಯದ ಪ್ರಕಾರ ಮಾತನಾಡುತ್ತಿದ್ದೇನೆ. ಈ ವಿಷಯದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಏನನ್ನೂ ಸಹ ನಮಗೆ ತಿಳಿಸಿಲ್ಲ. ಕೆಲವು ದಿನಗಳ ಹಿಂದೆ ಬೆಳಗಾಂನಲ್ಲಿ ನಡೆದ ಭಾಷಣದ ಪರಿಣಾಮವಾಗಿ ಪರಿಸ್ಥಿತಿ ಒಮ್ಮಿಂದೊಮ್ಮೆಗೆ ಪ್ರಾರಂಭವಾಯಿತು ಎನ್ನತಕ್ಕಂಥ ಮಾತನ್ನು ನಾನು ಒಪ್ಪುವುದಕ್ಕಾಗುವುದಿಲ್ಲ. ಬೆಳಗಾಂನಲ್ಲಿ ನಮ್ಮ ಮುಖ್ಯಮಂತ್ರಿಗಳು ಮಾಡಿದ ಭಾಷಣವನ್ನು ನಾನು ಕೇಳಿದ್ದೇನೆ.

ಅವರ ಭಾಷಣದಲ್ಲಿ ಪ್ರಧಾನಮಂತ್ರಿಗಳನ್ನು ಅವಹೇಳನ ಮಾಡುವಂತಹ ವಿಷಯವಾಗಲೀ ಅಥವಾ ಅವರ ಸ್ಥಾನಕ್ಕೆ ಅವಹೇಳನ ಮಾಡುವಂತಹ ವಿಷಯವಾಗಲೀ ಇರಲಿಲ್ಲ. ಗಡಿ ಭಾಗದಲ್ಲಿರುವ ಕನ್ನಡ ನಾಡಿನ ಜನತೆಯನ್ನು ರಕ್ಷಣೆ ಮಾಡುವುದಾಗಿ ಭರವಸೆ ಕೊಟ್ಟರು. ಆ ರೀತಿ ಭರವಸೆ ಕೊಡುವುದು ಮುಖ್ಯಮಂತ್ರಿಗಳ ಕರ್ತವ್ಯ. ಹಿಂದೆ ಇದೇ ಸಭೆಯಲ್ಲಿ ಮಹಾಜನ್ ವರದಿಯನ್ನು ಒಪ್ಪಿಕೊಳ್ಳಬೇಕೆಂದು ಠರಾವ್ ಮಾಡಿ ಕಳಿಸಿದ ಮೇಲೆ ಆ ಬಗ್ಗೆ ಕೇಂದ್ರದವರು ಯಾವ ಕ್ರಮವನ್ನು ತೆಗೆದುಕೊಳ್ಳಲಿಲ್ಲ. ಹಿಂದೆ ಅನೇಕ ಸಲ ಮಹಾರಾಷ್ಟ್ರದ ಮುಖ್ಯಮಂತ್ರಿಗಳು ಗಡಿ ಬಗ್ಗೆ ಕೇಂದ್ರ ಸರ್ಕಾರದ ಮುಂದೆ ಪ್ರಸ್ತಾಪ ಮಾಡಿದಾಗಲೂ ಕೂಡ ಅದನ್ನು ತೀರ್ಮಾನ ಮಾಡಲಿಲ್ಲ. ಈಗ ಒಮ್ಮಿಂದೊಮ್ಮೆಗೆ ಈ ಪ್ರಶ್ನೆಯನ್ನು ಎತ್ತಿಕೊಂಡಿರುವುದಕ್ಕೆ ಕಾರಣವಾದರೂ ಕೂಡ ಏನು? ಪಾರ್ಲಿಮೆಂಟ್ ಪ್ರಾರಂಭವಾಗುವ ಮುನ್ನಾ ದಿವಸ ಇಬ್ಬರು ಅಧಿಕಾರಿಗಳನ್ನು ಪ್ರಧಾನಮಂತ್ರಿಗಳು ನಮ್ಮ ರಾಜ್ಯಕ್ಕೆ ಕಳಿಸುವ ಉದ್ದೇಶವಾದರೂ ಕೂಡ ಏನಿತ್ತು? ಇಂತಹ ಪ್ರಶ್ನೆಗಳು ಬಂದಾಗ ಯಾವಾಗಲೂ ಕೇಂದ್ರದ ಮಂತ್ರಿಗಳು ರಾಜ್ಯದ ಮಂತ್ರಿಗಳೊಡನೆ ಸಮಾಲೋಚನೆ ಮಾಡುವುದು ಒಂದು ಸಂಪ್ರದಾಯ. ಆದರೂ ಕೂಡ ಇಷ್ಟೊಂದು ಅವಸರದಿಂದ ಅಧಿಕಾರಿಗಳು ಇಲ್ಲಿಗೆ ಕಳಿಸಬೇಕಾದ ಕಾರಣವಾದರೂ ಕೂಡಾ ಏನಿತ್ತು? ಇದರಲ್ಲಿ ಏನೋ ರಾಜಕೀಯ ಇದೆ ಎಂದು ಹೇಳುತ್ತೇನೆ. ಮೈಸೂರು ಸರ್ಕಾರ ಸಿಂಡಿಕೇಟ್ ಸರ್ಕಾರವಾಗಿದ್ದು ಕೇಂದ್ರ ಸರ್ಕಾರಕ್ಕೆ ಅಂದರೆ ಸಿಂಡಿಕೇಟ್ ಸರ್ಕಾರಕ್ಕೆ ಬೆಂಬಲ ಕೊಡಲಿಲ್ಲ ಎಂಬ ಕಾರಣದಿಂದ ಈ ಸಿಂಡಿಕೇಟ್ ಸರ್ಕಾರವನ್ನು ಉರುಳಿಸುವುದಕ್ಕೆ ಕೆಲವೊಂದು ಒತ್ತಡಗಳ ಮೂಲಕ ಸಂಚು ನಡೆಸುತ್ತಿದ್ದಾರೆಂದು ಹೇಳುತ್ತೇನೆ. ಶ್ರೀಮತಿ ಇಂದಿರಾಗಾಂಧಿಯವರು ಬಿಹಾರ್ ರಾಜ್ಯದಲ್ಲಿ ಏನು ಮಾಡಿದ್ದಾರೆ ಉತ್ತರ ಪ್ರದೇಶದಲ್ಲಿ ಏನು ಮಾಡಿದ್ದಾರೆ ಎಂಬುದನ್ನು ನೋಡುತ್ತಿದ್ದೇವೆ. ಅದೇ ರೀತಿ ಮೈಸೂರಿನಲ್ಲಿಯೂ ಕೂಡ ಮಾಡುವುದಕ್ಕೆ ಹೊರಟಿದ್ದಾರೆ. ಒಂದು ಜನಾಂಗದ ಭವಿಷ್ಯವನ್ನು ನಿರ್ಧಾರ ಮಾಡುವಾಗ ರಾಜಕೀಯವನ್ನು ಉಪಯೋಗಿಸುವುದು ಸರಿಯಲ್ಲ. ರಾಜಕೀಯ ಮುಖಂಡರು ಯಾರೇ ಇರಲಿ ಅವರಿಗೆ ಅಧಿಕಾರ ಎಂಬುದು ನಿರಂತರವಾಗಿ ಇರುವುದಿಲ್ಲ. ಅಧಿಕಾರದಲ್ಲಿರುವಾಗ ಪ್ರಜಾಪ್ರಭುತ್ವವನ್ನು ಉಳಿಸಬೇಕಾದರೆ ಜನಾಭಿಪ್ರಾಯವನ್ನು ತಿಳಿದುಕೊಂಡು ಅದರಂತೆ ನಡೆಯುವುದು ಅವರ ಕರ್ತವ್ಯ. ಪ್ರಜಾಪ್ರಭುತ್ವದಲ್ಲಿ ಜನರಿಗೆ ವಿರುದ್ಧವಾಗಿ ಯಾವುದೇ ನಿರ್ಣಯವನ್ನು ಜನತೆಯ ಮೇಲೆ ಹೇರುವುದಕ್ಕೆ ಹೋಗುವುದು ಸರಿಯಲ್ಲ. ಅದನ್ನು ಕನ್ನಡದ ಜನತೆ ಸಹಿಸುವುದಿಲ್ಲ. ಆ ರೀತಿ ಏನಾದರೂ ಮಾಡಿದರೆ ಅದಕ್ಕೆ ಸರಿಯಾದ ಉತ್ತರ ಕೊಡುವುದಕ್ಕೆ ನಾವು ಸಿದ್ಧರಿದ್ದೇವೆ. ಮಾನ್ಯ ಮುಖ್ಯಮಂತ್ರಿಗಳಾದ ವಿರೇಂದ್ರಪಾಟೀಲರು ಇಂತಹ ಸಮಯದಲ್ಲಿ ಕನ್ನಡದ

ಜನತೆಗೆ ಸರಿಯಾದ ಮಾರ್ಗದರ್ಶನ ಮಾಡಬೇಕೆಂದು ಈ ಮೂಲಕ ಕೇಳಿಕೊಳ್ಳುತ್ತೇನೆ. ಅವರು ಕನ್ನಡದ ಹಿತರಕ್ಷಣೆ ಮಾಡಬೇಕು ಮತ್ತು ಕೇಂದ್ರ ಸರ್ಕಾರಕ್ಕೆ ಸರಿಯಾದ ಉತ್ತರ ಕೊಡುವುದಕ್ಕೆ ತಯಾರಾಗಬೇಕು. ಮಾನ್ಯ ವಿರೋಧಪಕ್ಷದ ನಾಯಕರಾದ ಶ್ರೀ ಶಿವಪ್ಪನವರು ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಉತ್ತಮವಾಗಿ ಹೇಳಿದ್ದಾರೆ. ಮತ್ತು ಶ್ರೀಮಾನ್ ಗೋಪಾಲಗೌಡರು ಸಹ ಒಂದು ನಿರ್ಣಯದ ಮೂಲಕ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ರಾಜ್ಯದ ಹಿತದೃಷ್ಟಿಯಿಂದ ಕನ್ನಡಿಗರ ಹಿತದೃಷ್ಟಿಯಿಂದ ಈ ಸಭೆ ಒಂದು ಏಕ ಮತದಿಂದ ನಿರ್ಧಾರಕ್ಕೆ ಬರಲು ಅನುವು ಮಾಡಿಕೊಡಬೇಕೆಂದು ಸಿಂಡಿಕೇಟ್‌ನ ನಾಯಕರಾದ ಶ್ರೀಮಾನ್ ಸಿದ್ದವೀರಪ್ಪನವರನ್ನು ನಾನು ಕಳಕಳಿಯಿಂದ ವಿನಂತಿ ಮಾಡಿಕೊಳ್ಳುತ್ತಿದ್ದೇನೆ.

**ಶ್ರೀ ಆರ್. ದಯಾನಂದಸಾಗರ್:** ಹಾಗಾದರೆ ನಮ್ಮ ನಾಯಕರ ಠರಾವನ್ನೇ ತಾವು ಏತಕ್ಕೆ ಅನುಮೋದಿಸಬಾರದು ?

**ಶ್ರೀ ಎಸ್.ಆರ್. ಬೊಮ್ಮಾಯಿ:** ಶ್ರೀಮಾನ್ ಗೋಪಾಲಗೌಡರ ಠರಾವಿಗೆ ಬೆಂಬಲ ಕೊಟ್ಟರೆ ನಾನು ನನ್ನ ಠರಾವನ್ನು ವಾಪಸ್ಸು ತೆಗೆದುಕೊಳ್ಳುವುದಕ್ಕೆ ನಾನು ತಯಾರು ಇದ್ದೇನೆ. ಶ್ರೀಮಾನ್ ಸಿದ್ದವೀರಪ್ಪನವರ ಠರಾವಿಗೆ ಏತಕ್ಕೆ ಸಪೋರ್ಟ್ ಮಾಡಬಾರದು ಎನ್ನುವುದಕ್ಕೆ ಕಾರಣ ಇಷ್ಟೆ. ಈಗಾಗಲೇ ಈ ಮನೆಯವರು ಒಂದು ನಿರ್ಣಯಕ್ಕೆ ಬಂದಿದ್ದೇವೆ. 1967ನೇ ಇಸವಿಯಲ್ಲಿ ಮಹಾಜನ್ ಕಮಿಷನ್ನಿನ ಅವಾರ್ಡ್‌ನ್ನು ಐತೀರ್ಪೆಂದು ಪರಿಗಣಿಸಿ ಅದನ್ನು ಒಪ್ಪಿಕೊಳ್ಳಬೇಕೆಂದು ಈ ಮನೆಯವರು ಕೇಂದ್ರ ಸರ್ಕಾರಕ್ಕೆ ಒತ್ತಾಯ ಮಾಡಿದ್ದಾರೆ. ಈಗ ನಾವು ಅದನ್ನು ಬದಲಾಯಿಸಿದರೆ ಅದು ವಿರೋಧವಾಗುತ್ತದೆ. ಈ ದೃಷ್ಟಿಯಿಂದ ನಾನು ಶ್ರೀಮಾನ್ ಸಿದ್ದವೀರಪ್ಪನವರ ಠರಾವಿಗೆ ವಿರೋಧವನ್ನು ವ್ಯಕ್ತ ಮಾಡುತ್ತೇನೆ. ಈ ವಿಷಯದಲ್ಲಿ ನಾವು ಒಮ್ಮೆ ನಿರ್ಣಯವನ್ನು ತೆಗೆದುಕೊಂಡಿದ್ದೇವೆ. ಮತ್ತೆ ನಾವು ಹಿಂದಕ್ಕೆ ಬಂದರೆ ಅದು ಸರಿ ಕಾಣುವುದಿಲ್ಲ. ಕನ್ನಡ ನಾಡಿನ ಹಿತದೃಷ್ಟಿಯಿಂದ ಶ್ರೀಮಾನ್ ಗೋಪಾಲಗೌಡರು ತಂದಿರತಕ್ಕ ಠರಾವಿಗೆ ಎಲ್ಲರೂ ಬೆಂಬಲ ಕೊಡಬೇಕೆಂದು ನಾನು ಕೇಳಿಕೊಳ್ಳುತೇನೆ.

**ಶ್ರೀ ಹೆಚ್.ಎಂ. ಚನ್ನಬಸಪ್ಪ:** ಶ್ರೀಮಾನ್ ಸಿದ್ದವೀರಪ್ಪನವರ ನಿರ್ಣಯವನ್ನು ಒಪ್ಪಿಕೊಳ್ಳುವುದಾದರೆ ನಿಪ್ಪಾಣಿ ಹಾಗೂ ಇನ್ನೂ ಕೆಲವು ಹಳ್ಳಿಗಳು ನಮಗೆ ಉಳಿದುಕೊಳ್ಳುತ್ತವೆ. ಆದ್ದರಿಂದ ಶ್ರೀಮಾನ್ ಸಿದ್ದವೀರಪ್ಪನವರು ತಂದಿರತಕ್ಕ ನಿರ್ಣಯ ಪ್ರಗತಿದಾಯಕವಾಗಿದೆಯೋ ಅಥವಾ ಶ್ರೀಮಾನ್ ಗೋಪಾಲಗೌಡರು ತಂದಿರತಕ್ಕ ನಿರ್ಣಯ ಪ್ರಗತಿದಾಯಕವೋ ಎಂಬುದನ್ನು ಮಾನ್ಯ ಸದಸ್ಯರು ಹೇಳಬೇಕು.

**ಶ್ರೀ ಎಸ್.ಆರ್. ಬೊಮ್ಮಾಯಿ:** ಇದು ಒಪ್ಪತಕ್ಕ ಮಾತು ಅಲ್ಲ. ಮಹಾಜನ್ ಕಮಿಷನ್ ಅನ್ನು ನೇಮಕಮಾಡಿ ಅವರು ಈಗಾಗಲೇ ವರದಿ ಮಾಡಿದ್ದಾರೆ. ಆದ್ದರಿಂದ ಮಾನ್ಯ ಸದಸ್ಯರು ಹೇಳತಕ್ಕಂಥ ಮಾತು ಈಗಾಗಲೇ ಹಳೆಯ ಮಾತಾಗಿದೆ. ಕೇಂದ್ರ ಸರ್ಕಾರದವರು ಶ್ರೀಮಾನ್ ಸಿದ್ದವೀರಪ್ಪನವರು ತಂದಿರತಕ್ಕ ನಿರ್ಣಯವನ್ನು ಮೀರಿ ಬೇರೆ ನಿರ್ಣಯವನ್ನು ತೆಗೆದುಕೊಳ್ಳುವುದಿಲ್ಲ ಎನ್ನುವ ಮಾತನ್ನು ಹೇಳಿದ್ದರೆ ನಾವು ಅವರ ನಿರ್ಣಯವನ್ನು ಒಪ್ಪಿಕೊಳ್ಳಬಹುದಾಗಿತ್ತು. ಶ್ರೀಮಾನ್ ಸಿದ್ದವೀರಪ್ಪನವರು ಅವರ ನಿರ್ಣಯದ ಪ್ರಕಾರ ಮಹಾರಾಷ್ಟ್ರದವರನ್ನು ಮತ್ತು ಪ್ರಧಾನಿಯವರನ್ನು ಒಪ್ಪಿರುತ್ತೇನೆ ಎನ್ನುವ ಭರವಸೆಯನ್ನು ಕೊಟ್ಟರೆ ನಾನು ಅವರ ನಿರ್ಣಯವನ್ನು ಒಪ್ಪಿಕೊಳ್ಳುವುದಕ್ಕೆ ತಯಾರಾಗಿದ್ದೇನೆ.

**ಶ್ರೀ ಹೆಚ್. ಸಿದ್ದವೀರಪ್ಪ:** ಮಹಾಜನ್ ಕಮೀಷನ್ ರಿಪೋರ್ಟನ್ನು ಮಹಾರಾಷ್ಟ್ರದವರು ಒಪ್ಪಿದರೆ ಈ ನಿರ್ಣಯಕ್ಕೆ ನಾನು ನನ್ನ ಬೆಂಬಲವನ್ನು ಕೊಡುತ್ತೇನೆ. ನಾನು ನನ್ನ ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳುವ ಭರವಸೆಯನ್ನು ಕೊಡುತ್ತೇನೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಈಗ ನಮ್ಮ ಮುಂದಿರತಕ್ಕ ಪ್ರಶ್ನೆಯನ್ನು ಯಾವುದೇ ರಾಜಕೀಯ ಮತ್ತು ಪಕ್ಷದ ದೃಷ್ಟಿಯಿಂದ ನೋಡದೆ, ಯಾವುದೇ ರಾಜಕೀಯ ಲಾಭದ ದೃಷ್ಟಿಯಿಂದ ನೋಡದೆ ಸಮಗ್ರ ಕನ್ನಡಿಗರ ಹಿತದೃಷ್ಟಿಯಿಂದ ಶ್ರೀಮಾನ್ ಗೋಪಾಲಗೌಡರು ತಂದಿರತಕ್ಕ ನಿರ್ಣಯಕ್ಕೆ ನಾವು ಬೆಂಬಲಕೊಡೋಣ. ನಾವೆಲ್ಲರೂ ಪಕ್ಷದ ಮುಖಾಂತರ ದೆಹಲಿಗೆ ಹೋಗಿ ಪ್ರಧಾನ ಮಂತ್ರಿಗಳಿಗೆ ಕೇಂದ್ರ ಸರ್ಕಾರದ ಮಂತ್ರಿಗಳಿಗೆ, ಪಾರ್ಲಿಮೆಂಟ್ ಸದಸ್ಯರಿಗೆ ನಮ್ಮ ಹಕ್ಕು ಬಾಧ್ಯತೆಗಳು ಯಾವ ರೀತಿ ನ್ಯಾಯಬದ್ಧವಾಗಿದೆ ಎಂಬುದನ್ನು ತಿಳಿಸಿ ನನಗೆ ಅನ್ಯಾಯ ಮಾಡತಕ್ಕದ್ದು ಸರಿಯಲ್ಲ ಎಂದು ಅವರಿಗೆ ಮನವರಿಕೆ ಮಾಡಿಕೊಡಬೇಕು ಮತ್ತು ನಮ್ಮ ಮೈಸೂರಿನ ಕೇಸು ಏನಿದೆ ಇದರ ಬಗ್ಗೆ ಸರಿಯಾದ ಅಂಕಿ ಅಂಶಗಳು ಮತ್ತು ಕಾಗದ ಪತ್ರಗಳನ್ನು ತೆಗೆದುಕೊಂಡು ಹೋಗಿ ಪ್ರಧಾನ ಮಂತ್ರಿಗಳಿಗೆ ಕೇಂದ್ರ ಸರ್ಕಾರದ ಮಂತ್ರಿಗಳಿಗೆ ಮತ್ತು ಪಾರ್ಲಿಮೆಂಟ್ ಸದಸ್ಯರಿಗೆ ಮನವರಿಕೆ ಮಾಡಿಕೊಡಬೇಕು. ಈ ದೃಷ್ಟಿಯಿಂದ ಎಲ್ಲರೂ ಒಗ್ಗಟ್ಟಾಗಿ ಒಂದು ನಿರ್ಣಯವನ್ನು ಪಾಸು ಮಾಡೋಣ. ದೆಹಲಿಗೆ ಹೋಗೋಣ. ಕಾರ್ಯವನ್ನು ಸಾಧನೆ ಮಾಡೋಣ ಎಂದು ಹೇಳಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

*****

## ಕಾನೂನು ಸುವ್ಯವಸ್ಥೆ ಎಂಬ ಸೂಕ್ಷ್ಮತೆ

ದಿನಾಂಕ: 10.10.1973 ವಿಧಾನ ಪರಿಷತ್ತು

**ರಾಜ್ಯದ ವಿಧಾನ ಪರಿಷತ್ ಸದಸ್ಯರಾಗಿ 1973ರಲ್ಲಿ ಸೃಷ್ಟಿಯಾದ ಕಾಳಸಂತೆ ವ್ಯವಹಾರದಿಂದ ಉಂಟಾದ ಬಿಕ್ಕಟ್ಟು, ಅದರ ಪರಿಣಾಮವಾಗಿ ಅಶಾಂತಿಯ ಬಗ್ಗೆ ಬೊಮ್ಮಾಯಿಯವರು ಆಡಿರುವ ಮಾತುಗಳಲ್ಲಿ ಸಮಸ್ಯೆಯ ಮೂಲ, ಅದರ ಸೂಕ್ಷ್ಮತೆ, ಸಂಕೀರ್ಣತೆಗಳನ್ನು ಗ್ರಹಿಸುವ ಗುಣವನ್ನು ಕಾಣಬಹುದು. ಸಮಸ್ಯೆಯನ್ನು ಸರಿಯಾಗಿ ನಿರ್ವಹಿಸದಿದ್ದರೆ ಸರ್ಕಾರ ಹೇಗೆ ಜನತೆಯ ವಿಶ್ವಾಸವನ್ನು ಕಳೆದುಕೊಳ್ಳುತ್ತದೆ ಎಂಬುದನ್ನು ಕೂಡಾ ಬೊಮ್ಮಾಯಿಯವರು ಇಲ್ಲಿ ವಿವರಿಸುತ್ತಾರೆ.**

**ಶ್ರೀ ಎಸ್.ಆರ್. ಬೊಮ್ಮಾಯಿ:** ನಾನು ನನ್ನ ವಿಚಾರವನ್ನು ಸ್ವಲ್ಪ ಕಾಲದಲ್ಲಿಯೇ ಹೇಳಬಯಸುತ್ತೇನೆ. ಮೊಟ್ಟಮೊದಲನೆಯದಾಗಿ ರಾಜ್ಯದಲ್ಲಿ ಅಶಾಂತಿ ಒಂದು ಅವ್ಯವಸ್ಥೆ ಒಂದು ಸ್ಫೋಟಕ ಪರಿಸ್ಥಿತಿ ಉಂಟಾಗಲಿಕ್ಕೆ ಮೊದಲನೆಯ ಕಾರಣಗಳನ್ನು ಶ್ರೀಮಾನ್ ಪರಮೇಶ್ವರಪ್ಪನವರು ಹೇಳಿದ್ದಾರೆ. ನನ್ನ ದೃಷ್ಟಿಯಲ್ಲಿ 1971ನೇ ಇಸವಿಯಲ್ಲಿ ಪಾರ್ಲಿಮೆಂಟಿನ ಚುನಾವಣೆ ಕಾಲಕ್ಕೆ ಮತ್ತು ಅಸೆಂಬ್ಲಿ ಚುನಾವಣೆ ಕಾಲಕ್ಕೆ ಅಧಿಕಾರಾರೂಢ ಪಕ್ಷವು ಜನತೆಗೆ ಕೊಟ್ಟ ವಚನ, ಜನತೆಯಲ್ಲಿ ಹುಟ್ಟಿಸಿದಂಥ ಆಸೆ ಆಕಾಂಕ್ಷೆಗಳು ಕೇವಲ ಕನಸಾಗಿದ್ದಕ್ಕೆ ಈ ಅಶಾಂತಿಗೆ ಮೂಲ ಕಾರಣವಾಯಿತು. ಸ್ವಲ್ಪದರಲ್ಲಿ ಹೇಳುವುದಾದರೆ ಮನೆ ಇಲ್ಲದವರಿಗೆ ಮನೆ, ಕೆಲಸ ಇಲ್ಲದವರಿಗೆ ಕೆಲಸ, ಪ್ರತಿಯೊಬ್ಬರಿಗೂ ಸುಗಮ ಜೀವನ ಸಾಧಿಸುವುದಕ್ಕೆ ಅವಶ್ಯಕವಾದ ಎಲ್ಲಾ ಕಾರ್ಯಕ್ರಮಗಳನ್ನು ನಾವು ಕೈಗೊಳ್ಳುತ್ತೇವೆ ಎಂಬ ಮಾತು ಕೊಟ್ಟು ನಾವು ಅಧಿಕಾರಕ್ಕೆ ಬಂದರೆ ದೇಶದ ಬಡತನವನ್ನು ಓಡಿಸುತ್ತೇವೆ ಎನ್ನುವ ಮಾತನ್ನು ಕೊಟ್ಟರು, ಜನ ನಂಬಿ ಮತ ಕೊಟ್ಟರು. ನೀವು ಅಧಿಕಾರದಲ್ಲಿ ಬಂದಿದ್ದೀರಿ ಅತ್ಯಂತ ಹೆಚ್ಚಿನ ಬಹುಮತದಲ್ಲಿ ಆ ನಂತರ 3 ವರ್ಷಗಳ ಆಡಳಿತದಲ್ಲಿ ಕೇಂದ್ರ ಸರ್ಕಾರದವರು ರಾಜ್ಯ ಸರ್ಕಾರದವರು ಕೊಟ್ಟ ಮಾತನ್ನು ತಪ್ಪಿದ್ದಾರೆ. ಅದಕ್ಕೆ ವಿರುದ್ಧವಾಗಿ ನಡೆದಿದ್ದಾರೆ, ಅದಕ್ಕಾಗಿ ಜನರಲ್ಲಿ ಅಶಾಂತಿ ಇದೆ, ಆ ಒಂದು ಅಶಾಂತಿ ಈ ರೀತಿ ಪ್ರದರ್ಶನವಾಗುತ್ತಿದೆಯೆಂದು ತಿಳಿದುಕೊಳ್ಳಬೇಕು. ಇವತ್ತು ಒಂದು ಮಾತಿನಲ್ಲಿ ಹೇಳುವುದಾದರೆ ಒಬ್ಬ ಇಂಗ್ಲಿಷ್‌ಮನ್ 'Easy promises and lame excuss' ಎಂದು ಹೇಳಿದ್ದಾನೆ. ಮನಬಂದಂತೆ ಮಾತು ಕೊಟ್ಟರೆ ಆ

ಮಾತನ್ನು ಪೂರೈಸುವುದು ಯಾವಾಗ? ಅನೇಕ ಸುಳ್ಳು ನೆಪಗಳನ್ನು ಮಾತ್ರ ಹೇಳುತ್ತಾನೆ. ಇವತ್ತು ದೇಶದಲ್ಲಿರತಕ್ಕ ಬೆಲೆ ಏರಿಕೆ. ನಿರುದ್ಯೋಗತನ ಅಶಾಂತಿಗೆ ಮೂಲ ಕಾರಣ. ಸ್ವಲ್ಪ ದಿವಸಗಳ ಹಿಂದೆ ಪ್ರಧಾನ ಮಂತ್ರಿಗಳಿಂದ ಹಿಡಿದು ಮುಖ್ಯಮಂತ್ರಿಗಳು, ರಾಜ್ಯ ಮಂತ್ರಿಗಳು, ಆಳುವ ಪಕ್ಷದ ನಾಯಕರೆಲ್ಲರೂ ವಿರೋಧ ಪಕ್ಷದವರು ನಮ್ಮ ಪ್ರಗತಿಗೆ ಅಡ್ಡಿ ಬರುತ್ತಿದ್ದಾರೆಂದು ಹೇಳಿದರು. ಮನುಷ್ಯ ಕೊಟ್ಟ ಮಾತಿಗೆ ತಪ್ಪಿದಾಗ, ಬೆಲೆ ಏರಿಕೆ ಆದಾಗ ವ್ಯಾಪಾರಸ್ಥರು ಅದಕ್ಕೆ ಮೂಲ ಕಾರಣವೆಂದು ಹೇಳಿದರು. ಇವತ್ತು ಅವರಲ್ಲಿ ಹಣ ಇದೆ ಅವರು ಆಹಾರ ಧಾನ್ಯ ಸಂಗ್ರಹ ಮಾಡುತ್ತಿದ್ದಾರೆ. ಜನರನ್ನು ಸುಲಿಗೆಮಾಡುತ್ತಿದ್ದಾರೆ. ಅದಕ್ಕೆ ಸಗಟು ವ್ಯಾಪಾರವನ್ನು ಕೈಯಲ್ಲಿ ತೆಗೆದುಕೊಳ್ಳುತ್ತೇವೆಂದು ಹೇಳಿದ್ದೀರ. ಆದರೆ ಆ ಮಾತನ್ನು ಸಹ ಸರಿಯಾಗಿ ನಡೆಸಲಿಲ್ಲ ಮುಖ್ಯವಾಗಿ ನಮ್ಮ ರಾಜ್ಯದ ಮುಖ್ಯಮಂತ್ರಿಗಳಿಗೆ ಮಾತನಾಡುವುದರಲ್ಲಿ ಬಹಳ ಚಪಲ ಎಂದು ಹೇಳುತ್ತೇನೆ. ಡೆಲ್ಲಿಯಿಂದ ಬಂದ ಕೂಡಲೇ ಪತ್ರಿಕಾ ಪ್ರತಿನಿಧಿಗಳನ್ನು ಭೇಟಿಯಾದ ಕೂಡಲೇ ನಾವು ಗೋಧಿ ವ್ಯಾಪಾರವನ್ನು ರಾಷ್ಟ್ರೀಕರಣಮಾಡುತ್ತೇವೆ. ಅಕ್ಕಿ ವ್ಯಾಪಾರವನ್ನು ರಾಷ್ಟ್ರೀಕರಿಸುತ್ತೇವೆ. ಜೋಳದ ವ್ಯಾಪಾರವನ್ನು ರಾಷ್ಟ್ರೀಕರಿಸುತ್ತೇವೆ. ಎಣ್ಣೆ ಮಿಲ್ಲುಗಳನ್ನು ಕೈಯಲ್ಲಿ ತೆಗೆದುಕೊಳ್ಳುತ್ತೇವೆ ಎಂದು ಪದೇ ಪದೇ ಹೇಳಿದರು. ಆದರೆ ಇವತ್ತಿನವರೆಗೂ ಒಂದು ವ್ಯಾಪಾರವನ್ನು ಕೈಯಲ್ಲಿ ತೆಗೆದುಕೊಳ್ಳಲಿಲ್ಲ. ಗೋಧಿ ಧಾರಣೆ ಮಾರ್ಕೆಟಿನಲ್ಲಿ ಕಡಿಮೆ ಇತ್ತು. ಇವರು ಗೋಧಿ ವ್ಯಾಪಾರವನ್ನು ತೆಗೆದುಕೊಳ್ಳುತ್ತೇವೆಂದ ಕೂಡಲೇ ಎರಡು ಪಟ್ಟು ಅದರ ಬೆಲೆ ಜಾಸ್ತಿ ಆಯಿತು. ಕಳ್ಳ ವ್ಯಾಪಾರಸ್ಥರು, ಕಾಳಸಂತೆಕೋರರು ಬ್ಲಾಕ್ ಮಾರ್ಕೆಟರ್ಸ್ ಹೋಗಿ ಏನು ಮಾತನಾಡಿದರೋ ಗೊತ್ತಿಲ್ಲ ಎರಡು ತಿಂಗಳಾದರೂ ಇನ್ನೂ ತೆಗೆದುಕೊಳ್ಳಲಿಲ್ಲ. ಕಳ್ಳ ವ್ಯಾಪಾರಸ್ಥರು ಅವರನ್ನು ಭೇಟಿಯಾದಾಗ ಏನು ಮಾತುಕತೆ ನಡೆಸಿದರು, ಅವರು ಏನು ಕೊಟ್ಟರು ಎಂದು ಕೇಳುತ್ತೇನೆ? ಇವತ್ತು ಅಕ್ಕಿ ಸಗಟು ವ್ಯಾಪಾರ ತೆಗೆದುಕೊಳ್ಳುತ್ತೇವೆಂದು ಬರೀ ಬಾಯಿ ಮಾತಿನಿಂದ ಹೇಳುತ್ತಿದ್ದಾರೆಯೇ ವಿನಾ ಕೈಯಲ್ಲಿ ಮಾಡುತ್ತಿಲ್ಲ. ಜೋಳದ ವ್ಯಾಪಾರ, ಗೋಧಿ ವ್ಯಾಪಾರ, ರಾಗಿ ವ್ಯಾಪಾರ ಎಲ್ಲಾ ತೆಗೆದುಕೊಳ್ಳುತ್ತೇವೆ ಎಂದು ಹೇಳುತ್ತಲೇ ಇದ್ದಾರೆ. ನಿಮ್ಮಲ್ಲಿ ಹಣ ಇದ್ದರೆ ತೆಗೆದುಕೊಳ್ಳುತ್ತೇವೆಂದು ಹೇಳಿ ಇಲ್ಲದಿದ್ದರೆ ಸುಮ್ಮಸುಮ್ಮನೇ ಮಾತನಾಡಬೇಡಿ, ಇದೇ ಬೆಲೆ ಏರಿಕೆಗೆ ಮುಖ್ಯ ಕಾರಣ. ಮುಖ್ಯಮಂತ್ರಿಗಳು ಜಿಲ್ಲಾ ಬಂದ್ ಇಲ್ಲದಿದ್ದರೆ ಬೆಲೆ ಏರಿಕೆ ಆಗುತ್ತದೆ ಎಂದು ಹೇಳಿದರು. ಜಿಲ್ಲಾ ಬಂದ್ ಹೆಸರಿನಲ್ಲಿ ಎಷ್ಟೋ ಪರ್ಮಿಟ್ ಕೊಟ್ಟಿದ್ದೀರಿ? ಒಂದು ಪರ್ಮಿಟ್ಟಿನಲ್ಲಿ ಎಷ್ಟು ಸಲ ಆಹಾರಧಾನ್ಯ ಸಾಗಿಸುತ್ತಿದ್ದಾರೆ ಎಂಬುದು ನಮಗೆ ಗೊತ್ತಿದೆ.

ಇದು ನಿಜವಾಗಿ ಕಲ್ಪನೆಯ ಮಾತಲ್ಲ, ಪ್ರತಿ ಜಿಲ್ಲೆಯಿಂದ ರಾತ್ರಿ ಆಹಾರ ಧಾನ್ಯ ಹೋಗುತ್ತಿದೆ. ಇದು ಬೆಲೆ ಏರಿಕೆಗೆ ಮುಖ್ಯ ಕಾರಣ. ಇವರು ವಿದ್ಯಾರ್ಥಿಗಳ ಮೇಲೆ ಕೂಲಿಗಾರರ ಮೇಲೆ ಹೊಟ್ಟೆಗಾಗಿ ಅನ್ನ ಕೇಳುವವರ ಮೇಲೆ ಗುಂಡು ಹಾರಿಸುತ್ತಾರೆ. ಒಂದು ದಿವಸ ಮಂತ್ರಿಗಳು ಬರಲಿ, ತೋರಿಸುತ್ತೇನೆ. ಕಳ್ಳ ವ್ಯಾಪಾರ ಮಾಡುವವರು, ಟ್ರಕ್‌ನಲ್ಲಿ ಗೋವಾ ಮತ್ತು ಮಂಗಳೂರು ಬಾರ್ಡರ್‌ನಲ್ಲಿ ಪ್ರತಿ ದಿವಸ ಆಹಾರ ಸಾಗಿಸುತ್ತಾರೆ. ಟ್ರಕ್‌ಗಳು ಸಾಲು ಸಾಲಾಗಿ ಹೋಗುತ್ತವೆ. ಬಿಜಾಪುರ, ಧಾರವಾಡ, ಬೆಳಗಾಂ ಕಡೆಗಳಿಂದ ಆಹಾರ ಹೋಗುತ್ತದೆ. ಅದನ್ನು ತಡೆಗಟ್ಟುವುದಕ್ಕೆ ಪೊಲೀಸರು ತಮ್ಮ ಬಲವನ್ನು ಉಪಯೋಗಿಸದೆ, ಇಲ್ಲಿ ಜನರ ಮೇಲೆ ಉಪಯೋಗಿಸುತ್ತಾರೆ. ರಾಜ್ಯದಿಂದ ಹೊರಗೆ ಹೋಗುವ ಆಹಾರಧಾನ್ಯಗಳನ್ನು ತಡೆಗಟ್ಟುತ್ತಾ ಇಲ್ಲ. ಜಿಲ್ಲಾ ನಿರ್ಬಂಧ ಏಕೆ ಇಟ್ಟಿದ್ದೀರಿ ತಮಗೆ ಅನುಕೂಲ ಮಾಡಿಕೊಡುವವರಿಗೆ ಪರ್ಮಿಟ್ ಕೊಡುತ್ತಿರಿ, ಕಳ್ಳ ವ್ಯಾಪಾರ ಮಾಡುವವರಿಗೆ ಪರ್ಮಿಟ್ ಕೊಡುತ್ತೀರಿ. ಇವತ್ತು ತಮ್ಮ ಪಕ್ಷದವರಿಗೆ ಯಾರು ಯಾರಿಗೆ ಪರ್ಮಿಟ್ ಕೊಟ್ಟಿದ್ದೀರಿ ವಿಚಾರಮಾಡಿ ಜಿಲ್ಲೆಯಿಂದ ಜಿಲ್ಲೆಗೆ ಅಕ್ಕಿ, ಜೋಳ ಎಷ್ಟು ಸಲ ಅವರು ಒಯ್ಯುತ್ತಾರೆ. ಕಳ್ಳ ವ್ಯಾಪಾರಕ್ಕೆ ಬೆಂಬಲ ಕೊಡುತ್ತಿದ್ದಾರೆ. ನಿಮ್ಮ ಅರಸು ಸರ್ಕಾರದವರು, ಅದನ್ನು ಪತ್ತೆಹಚ್ಚಿ ತೆಗೆಯಿರಿ? ಆಗ ನಿಮ್ಮ ಸರ್ಕಾರಕ್ಕೆ ಬೆಂಬಲ ಕೊಡುವುದಕ್ಕೆ ಒಪ್ಪುತ್ತೇನೆ. ಕಳ್ಳ ವ್ಯಾಪಾರ ನಾವು ಮಾಡುತ್ತಾ ಇಲ್ಲ. ನಾವು ಕಳ್ಳ ವ್ಯಾಪಾರಕ್ಕೆ ಬೆಂಬಲ ಕೊಡುತ್ತಾ ಇಲ್ಲ. ರೈತರು ಲೆವಿ ಕೊಡುವ ಸಲುವಾಗಿ ಹಿಂದು ಮುಂದೆ ನೋಡುವುದಿಲ್ಲ. ನಮ್ಮ ಜಿಲ್ಲೆಯಲ್ಲಿ ಯಾವ ರೈತನು ಲೆವಿ ಕೊಡದೆ ಬಾಕಿ ಇಟ್ಟುಕೊಳ್ಳಲಿಲ್ಲ. ರೈತನಿಗೆ ಯೋಗ್ಯ ಬೆಲೆ ಕೊಡಬೇಕು ಎಂದು ಶ್ರೀಮಾನ್ ಅರಸುರವರು ಮಾತು ಮಾತಿಗೆ ಹೇಳುತ್ತಾರೆ. ಯಾವಾಗ ಕೊಟ್ಟಿದ್ದೀರಿ, ಬರೀ ಮಾತಿನಲ್ಲಿ ಹೇಳಿದರೆ ಆಗುವುದಿಲ್ಲ. ರೈತನಿಗೆ ಯೋಗ್ಯಬೆಲೆ ಕೊಡುತ್ತಾ ಇಲ್ಲ, ಜನರಿಗೆ ಬೇಕಾದಂಥ ಜೋಳ, ಅಕ್ಕಿ, ರಾಗಿ ಯಾವುದೇ ಧಾನ್ಯ ಇರಲಿ, ಅವರಿಗೆ ಮುಟ್ಟಬೇಕಾದರೆ 100ಕ್ಕೆ 30ರಷ್ಟು ಬೆಲೆ ಹೆಚ್ಚಾಗುತ್ತದೆ.

**ಶ್ರೀಮತಿ ಇ.ಇ.ವಾಜ್:** ಮೊನ್ನೆ ಬೊಮ್ಮಾಯಿಯವರು ಜಿಲ್ಲೆಯಿಂದ ಜಿಲ್ಲೆಗೆ ಆಹಾರ ಧಾನ್ಯಗಳು ಹೋಗುವುದಕ್ಕೆ ಪರ್ಮಿಟ್ ಕೊಡುತ್ತಾರೆ ಎಂದು ಹೇಳಿದರು. ಇತ್ತೀಚೆಗೆ ಅಭಾವ ಬಂದಿದ್ದರಿಂದ ಸರ್‌ಪ್ಲಸ್ ಡಿಸ್ಟ್ರಿಕ್‌ನಿಂದ ಡಿಫಿಸಿಟ್ ಡಿಸ್ಟ್ರಿಕ್ಟ್‌ಗೆ ಆಹಾರ ಧಾನ್ಯ ತೆಗೆದುಕೊಂಡು ಹೋಗಲು ಸೊಸೈಟಿಗಳಿಗೆ ಟ್ರೇಡರ್ಸ್‌ಗೆ ಪರ್ಮಿಟ್ ಕೊಟ್ಟಿದ್ದೇವೆ. ಹೈಬ್ರಿಡ್ ಜವಾರ್ ಡಿಫಿಸಿಟ್ ಏರಿಯಾಕ್ಕೆ ಹೋಗಲು ಏರ್ಪಾಡು ಮಾಡಿದ್ದೇವೆ.

**ಶ್ರೀ ಎಸ್.ಸಿ. ಕುಬ್‌ಸದ್:** ಯಾವ ಯಾವ ಜಿಲ್ಲೆಯಲ್ಲಿ ಅಭಾವ ಇಲ್ಲ ಎಂದು ಏನಾದರೂ ಕಂಡುಹಿಡಿದಿದ್ದೀರಾ?

**ಶ್ರೀಮತಿ ಇ.ಇ. ವಾಜ್:** ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಭಾವ ಇದೆ ಅದಕ್ಕಾಗಿ ಅಲ್ಲಿಗೆ ಮಂಡ್ಯ ಮತ್ತು ಮೈಸೂರಿನಿಂದ ಆಹಾರ ಧಾನ್ಯ ತೆಗೆದುಕೊಂಡು ಹೋಗಲು ಪರ್ಮಿಟ್ ಕೊಟ್ಟಿದ್ದೇವೆ. ಜಿಲ್ಲೆಯ ಡೆಪ್ಯೂಟಿ ಕಮಿಷನರ್ ಅಲ್ಲಿ ಅಗತ್ಯ ಇದೆ ಎಂದು ಕಂಡುಬಂದರೆ ಸರ್ಕಾರಕ್ಕೆ ತಿಳಿಸುತ್ತಾರೆ ನಂತರ ಅವರ ಮುಖಾಂತರ ಸರ್ಕಾರ ಪರ್ಮಿಟ್ ಕೊಡುತ್ತದೆ.

**ಶ್ರೀ ಕೆ. ಜತ್ತಪ್ಪ ರೈ:** ಪರ್ಮಿಟ್ ಕೊಡುವುದಕ್ಕೆ ಡೆಪ್ಯೂಟಿ ಕಮಿಷನರ್ ರೆಕಮೆಂಡ್ ಮಾಡಿದ್ದಾರೋ ಅಥವಾ ನಿಮ್ಮ ಪಾರ್ಟಿ ಸದಸ್ಯರು ರೆಕಮೆಂಡ್ ಮಾಡಿದ್ದಾರೋ? ಕೇವಲ ಪಾರ್ಟಿ ಸದಸ್ಯರು ರೆಕಮೆಂಡ್ ಮಾಡಿದವರಿಗೆ ಸರ್ಕಾರದವರು ಪರ್ಮಿಟ್ ಕೊಟ್ಟಿದ್ದಾರೆ ಅದು ತಮಗೆ ಗೊತ್ತಿದೆಯೇ?

**ಶ್ರೀ ಎ.ಕೆ.ಸುಬ್ಬಯ್ಯ:** ಬ್ಲಾಕ್ ಮಾರ್ಕೆಟ್‌ನಲ್ಲಿ ಮಾರುವವರಿಗೆ ಪರ್ಮಿಟ್ ಕೊಟ್ಟಿದ್ದಾರೆ, ನಿಜವಾದ ವ್ಯಾಪಾರಸ್ಥರಿಗೆ ಪರ್ಮಿಟ್ ಕೊಟ್ಟಿಲ್ಲ.

**ಶ್ರೀ ಎಸ್.ಆರ್. ಬೊಮ್ಮಾಯಿ:** ವ್ಯಾಪಾರಸ್ಥರಿಗೆ ಪರ್ಮಿಟ್ ಕೊಡುವ ಅಗತ್ಯವೇ ಇರಲಿಲ್ಲ. ಸರ್ಕಾರದವರೇ ಓಪನ್ ಮಾರ್ಕೆಟ್‌ನಲ್ಲಿ ಖರೀದಿ ಮಾಡಿ ಅಭಾವ ಜಿಲ್ಲೆಗೆ ಕಳುಹಿಸಬಹುದಿತ್ತು. ವ್ಯಾಪಾರವನ್ನು ರಾಷ್ಟ್ರೀಕರಣ ಮಾಡತಕ್ಕ ಸರ್ಕಾರ ವ್ಯಾಪಾರಸ್ಥರಿಗೆ ಪರ್ಮಿಟ್ ಕೊಡಲಿಕ್ಕೆ ಕಾರಣವೇನು? ಒಂದು ಪರ್ಮಿಟ್‌ನಲ್ಲಿ ಅವರು ಎಷ್ಟು ಸಲ ಸಾಗಿಸುತ್ತಾರೆ ಗೊತ್ತೇ? ಒಂದು ಪರ್ಮಿಟ್‌ನಲ್ಲಿ 20–30 ಸಲ ಆಹಾರ ಧಾನ್ಯ ಸಾಗಿಸುತ್ತಾರೆ. ನಾನು ಇದನ್ನು ಟೀಕೆಮಾಡಬೇಕು ಎನ್ನುವ ದೃಷ್ಟಿಯಿಂದ ಹೇಳುತ್ತಾ ಇಲ್ಲ. ಸರಿಯಾಗಿ ಚೆಕ್ ಮಾಡಿದರೆ ಸಿಗುತ್ತದೆ. ವ್ಯಾಪಾರಸ್ಥರಿಗೆ ಪರ್ಮಿಟ್ ಕೊಡುವ ಕಾರಣ ಇರಲಿಲ್ಲ. ಸರ್ಕಾರದವರೇ ಖರೀದಿ ಮಾಡಿ ಹಂಚಬಹುದಿತ್ತು. ಸರ್ಕಾರದವರು ಸಗಟು ವ್ಯಾಪಾರವನ್ನು ರಾಷ್ಟ್ರೀಕರಣ ಮಾಡುತ್ತೇವೆಂದು ಪದೇ ಪದೇ ಹೇಳಿ, ಅದನ್ನು ಕೃತಿಗೆ ಇಳಿಸದಿರುವುದರಿಂದ ಬೆಲೆ ಏರಿದೆ.

**ಶ್ರೀಮತಿ ಇ.ಇ. ವಾಜ್:** ಫುಡ್ ಸೆಲ್ ಮತ್ತು ಪೊಲೀಸ್ ಇಲಾಖೆಯವರು ಒಂದು ಕೋಟಿ ರೂಪಾಯಿ ಬೆಲೆ ಬಾಳುವ 8000 ಕೆ.ಜಿ. ಆಹಾರ ಧಾನ್ಯವನ್ನು ಹಿಡಿದಿದ್ದಾರೆ, ಏನು ಮಾಡಿಲ್ಲ ಎಂದು ಟೀಕೆ ಮಾಡಿದರೆ ಹೇಗೆ?

**ಶ್ರೀ ಎಸ್.ಆರ್. ಬೊಮ್ಮಾಯಿ:** ನನ್ನ ಜೊತೆಗೆ ಬಂದರೆ ಗೋವಾ ಬಾರ್ಡರ್, ನಿಪ್ಪಾಣಿ ಬಾರ್ಡರ್. ಬಿಜಾಪುರ ಬಾರ್ಡರ್‌ನಿಂದ ಮಹಾರಾಷ್ಟ್ರಕ್ಕೆ ಯಾವ ರೀತಿ ಜೋಳ ಹೋಗುತ್ತಿದೆ ಎನ್ನುವುದನ್ನು ತೋರಿಸಿ ಕೊಡುತ್ತೇನೆ. ಈ ರೀತಿ ಜನರಿಗೆ ಬರೇ ಮಾತು ಕೊಟ್ಟು ಅದು ಕೃತಿಗೆ ಇಳಿಯದೇ ಇರುವುದರಿಂದ ರೊಚ್ಚಿಗೆದ್ದಿದ್ದಾರೆ. ಆಹಾರದ ಕೊರತೆಯಿಂದ ಬೆಲೆ ಏರಿಕೆಯಾಗಿದೆ. ಪ್ರತಿಯೊಬ್ಬರು ಜೀವನ ಹೇಗೆ ಸಾಗಿಸಬೇಕು ಎನ್ನುವ ಪರಿಸ್ಥಿತಿ ಬಂದಿದೆ. ಜನ ರೊಚ್ಚಿಗೆದ್ದು ಸ್ವಯಂಪ್ರೇರಿತರಾಗಿ ಚಳವಳಿ ಮಾಡುತ್ತಿದ್ದಾರೆ. ಯಾವ ರಾಜಕೀಯ ಪಕ್ಷವೂ ಚಳವಳಿಯಲ್ಲಿ ಮುಂದಾಳುತನ ವಹಿಸಲಿಲ್ಲ ಎಂದು ಈ ರೀತಿ ಪರಿಸ್ಥಿತಿಯನ್ನು ದುರುಪಯೋಗ ಮಾಡಿಕೊಂಡು ರಾಜಕೀಯ ಮಾಡುವುದು ಸರಿಯಲ್ಲ; ಎಷ್ಟೋ ವರ್ಷಗಳವರೆಗೆ ಜನರು ಬೆಂಬಲ ಕೊಡುತ್ತಾರೋ ಅಲ್ಲಿಯವರೆಗೆ ಅರಸುರವರ ಸರ್ಕಾರ ಆಳಲಿ ಆದರೆ ಜನಕ್ಕೆ ಸರಿಯಾದ ರೀತಿಯಲ್ಲಿ ಹೊಟ್ಟೆಬಟ್ಟೆ ದೊರೆಯುವ ರೀತಿಯಲ್ಲಿ ರಾಜ್ಯಭಾರ ಮಾಡಬೇಕು. ಆದರೆ ಈ ರೀತಿ ಪರಿಸ್ಥಿತಿ ಉಲ್ಬಣಗೊಂಡು ಕ್ರಾಂತಿಯಾದರೆ, ಅವ್ಯವಸ್ಥೆಯಾದರೆ ಅದಕ್ಕೆ ಹೊಣೆ ಅವರೇ ಎಂದು ಸ್ಪಷ್ಟವಾಗಿ ಹೇಳಬೇಕಾಗಿದೆ. ಚಳವಳಿ ಮಾಡಲಿಕ್ಕೆ ಹೇಳಿದವರು ಯಾರು? ಮೊಟ್ಟಮೊದಲಿಗೆ ಪ್ರಧಾನಮಂತ್ರಿಗಳು, ಎಲ್ಲೆಲ್ಲಿ ಕಳ್ಳಭಟ್ಟಿ ಖದೀಮರು ಇದ್ದಾರೆ, ಯಾರು ಅನ್ಯಾಯವಾಗಿ ಲಾಭ ಪಡೆಯುತ್ತಿದ್ದಾರೆ, ಅವರಿಗೆ ಸಾಮಾಜಿಕ ಬಹಿಷ್ಕಾರ ಹಾಕಬೇಕು ಎಂದು ಹೇಳಿದರು. ನಂತರ ನಮ್ಮ ಮುಖ್ಯಮಂತ್ರಿಗಳು ಹೇಳಿದರು, ಚಳವಳಿ ಮಾಡಿ, ನಾನು ಅದರ ಮುಂದಾಳುತನ ವಹಿಸುತ್ತೇನೆ ಎಂದು ನಿಮ್ಮ ಜೊತೆಗೆ ನಾನು ಬರುತ್ತೇನೆ ಎಂದು ಹೇಳಿದರು. ಇವತ್ತಿನ ದಿವಸ ರಾಜ್ಯದಲ್ಲಿ ಜನತೆಗೆ ಅನ್ಯಾಯವಾದಾಗ ಅದರ ಚಳವಳಿಯ ಮುಂದಾಳುತನ ಮುಖ್ಯಮಂತ್ರಿಗಳು ವಹಿಸುತ್ತಾರೆಂದು ಕೇಳಿ ನನಗಂತೂ ಬಹಳ ಸಂತೋಷವಾಯಿತು. ಒಂದು ರೀತಿಯಿಂದ ಆಶ್ಚರ್ಯವೂ ಆಯಿತು. ಕೈಯಲ್ಲಿ ಸಂಪೂರ್ಣ ಅಧಿಕಾರ ಇಟ್ಟುಕೊಂಡು ರಾಜ್ಯದ ಸೂತ್ರಗಳನ್ನು ಹಿಡಿದಂಥ ಮುಖ್ಯಮಂತ್ರಿ ಕಳ್ಳ ಖದೀಮರನ್ನು ಹಿಡಿಯಲಿಕ್ಕೆ ಸಮಾಜ ದ್ರೋಹಿಗಳನ್ನು ಹಿಡಿಯಲಿಕ್ಕೆ ಅಸಮರ್ಥರಾಗಿ ಬಹಿರಂಗವಾಗಿ ಸಮಾಜದಲ್ಲಿ ಯುವಕ ವಿದ್ಯಾರ್ಥಿಗಳಿಗೆ, ಕೂಲಿಗಾರರಿಗೆ ಪ್ರಚೋದನೆ ಮಾಡಿ, ಚಳವಳಿ ಮಾಡಿರಿ ಎಂದು ಹುರಿದುಂಬಿಸಿ, ಅದರ ಮುಂದಾಳುತನ ವಹಿಸುತ್ತೇನೆ ಎಂದು ಹೇಳುವುದರ ಅರ್ಥವೇನು? ಈ ಸರ್ಕಾರದವರಿಗೆ ಕಳ್ಳ ಖದೀಮರನ್ನು ಸಮಾಜ ದ್ರೋಹಿಗಳನ್ನು ಹಿಡಿಯಲಿಕ್ಕೆ ಸಾಧ್ಯವಾಗಿಲ್ಲ, ಪೊಲೀಸರು, ಅಧಿಕಾರಿಗಳು ಸಹ ಅಸಮರ್ಥರಾಗಿದ್ದಾರೆ. ನಮ್ಮ ಕೈಯಿಂದ ಆಗುವುದಿಲ್ಲ ಎಂದು ಚಳವಳಿ ಮಾಡಿ, ನಾವು ಅಧಿಕಾರ ಬಿಟ್ಟು ಮುಂದಾಳುತನ ವಹಿಸುತ್ತೇವೆ ಎಂದು ಹೇಳುತ್ತಾ ಇದ್ದಾರೆ. ಅದಕೋಸ್ಕರ ಅಧಿಕಾರ

ಬಿಟ್ಟುಬಿಡಿ ಎಂದು ಕೇಳುತ್ತಾ ಇದ್ದೇನೆ. ನಮ್ಮ ಕಡೆ ಬಂಧಿಸುವುದಕ್ಕೆ ಆಗುತ್ತಾ ಇಲ್ಲ, ದಂಡಿಸುವುದಕ್ಕೆ ಆಗುತ್ತಾ ಇಲ್ಲ ಎಂದು ಹುಡುಗರಿಗೆ ಪ್ರಚೋದನೆ ಮಾಡಿದ್ದಾರೆ. ಇವತ್ತು ಚಳವಳಿ ಮಾಡಿ ಎಂದು ಮುಖ್ಯಮಂತ್ರಿಗಳು ಹೇಳಿದ್ದಾರೆ. ಚಳವಳಿ ಯಾವುದೇ ದೇಶದಲ್ಲಿ ಇರಲಿ, ವಿದ್ಯಾರ್ಥಿಗಳು ರಾಜಕೀಯದಲ್ಲಿ ಭಾಗವಹಿಸಬಾರದು ಎಂದು ನಾನು ಹೇಳುತ್ತೇನೆ. ಕ್ರಾಂತಿ ಮಂಚೂಣಿಯಲ್ಲಿ ಇದ್ದಾಗ ಸಮಾಜದಲ್ಲಿ ಬದಲಾವಣೆ ಬರಬೇಕು ಎನ್ನುವ ಪರಿಸ್ಥಿತಿ ಬಂದಾಗ ವಿದ್ಯಾರ್ಥಿಗಳು ಮುಂದೆ ಬರಬೇಕು. ಇವತ್ತು ರಾಜ್ಯದಲ್ಲಿ ಅಂಥ ಪರಿಸ್ಥಿತಿ ವ್ಯಾಪಕವಾಗಿ ಪ್ರತಿ ಗ್ರಾಮದಲ್ಲಿ ಹರತಾಳ, ಸ್ಟ್ರೈಕ್ ನಡೆಯುತ್ತಾ ಇದೆ. ವಿದ್ಯಾರ್ಥಿಗಳು ಮೆರವಣಿಗೆ ಮಾಡುತ್ತಿದ್ದಾರೆ. ಅಂಗಡಿಗಳ ಹತ್ತಿರಹೋಗಿ ಜನಕ್ಕೆ ಸರಿಯಾದ ರೀತಿಯಲ್ಲಿ ಸರಿಯಾದ ಬೆಲೆಯಲ್ಲಿ ವ್ಯಾಪಾರ ಮಾಡಲಿಕ್ಕೆ ಒತ್ತಾಯ ಮಾಡುತ್ತಿದ್ದಾರೆ.

ಈ ರೀತಿ ಎಂದು ಆಗಿತ್ತು ಎಂದು ನಾನು ಕೇಳುತ್ತೇನೆ. ಮೇಲಾಗಿ ಚಳವಳಿಯು ಎಲ್ಲಾ ಕಡೆಯು ಶಾಂತಿಯಾಗಿ ಆಗಿತ್ತು ಎಂದು ಹೇಳುತ್ತೇನೆ. ವಿದ್ಯಾರ್ಥಿಗಳು ಈ ಬಗ್ಗೆ ಏನೂ.ಅನ್ಯಾಯ ಮಾಡಿಲ್ಲ, ಎಲ್ಲೆಲ್ಲಿ ಕಳ್ಳಖದೀಮರು ಇದ್ದಾರೆ, ಎಲ್ಲೆಲ್ಲಿ ಆಹಾರ ಪದಾರ್ಥಗಳನ್ನು ಸಂಗ್ರಹಮಾಡಿದ್ದಾರೆ ಅಲ್ಲಿ ಹೋಗಿ ಚಳವಳಿ ಮಾಡಿದ್ದಾರೆ ಅವರು ಬಂಗಾರದ ಅಂಗಡಿಗೆ ಆಗಲೀ ಬಟ್ಟೆ ಅಂಗಡಿಗೇ ಆಗಲೀ ಚಳವಳಿ ಮಾಡಲು ಹೋಗಿದ್ದಾರೆಯೇ ತಿಳಿಸಿ, ಸರ್ಕಾರ ಕಳ್ಳ ಖದೀಮರಿಗೆ ವ್ಯಾಪಾರಸ್ಥರಿಗೆ ಏನು ಅನುಕೂಲ ಮಾಡಿಕೊಟ್ಟಿದ್ದಾರೆ`ಅಲ್ಲಿ ಚಳವಳಿ ನಡೆಸುವುದಕ್ಕೆ ಹೋಗಿದ್ದಾರೆ. ಆ ಸಂದರ್ಭದಲ್ಲಿ ಸರ್ಕಾರ ಎಚ್ಚರಿಕೆ ವಹಿಸಬೇಕಾಗಿತ್ತು. ಎಲ್ಲೆಲ್ಲಿ ಧಾನ್ಯ ಸಂಗ್ರಹ ಮಾಡಿದ್ದಾರೆ ಅಲ್ಲಿ ರೇಡ್ ಮಾಡಿ ಜನರಿಗೆ ಹಂಚಬೇಕಾಗಿತ್ತು ಎಂದು ನಾನು ಹೇಳುತ್ತೇನೆ. ಅನೇಕ ವ್ಯಾಪಾರಸ್ಥರಿಗೆ ಅಧಿಕಾರಿಗಳು ನೋಟಿಸ್ ಕೊಟ್ಟಿದ್ದಾರೆ. ಆದರೆ ಯಾವ ವ್ಯಾಪಾರಸ್ಥರ ಮೇಲೂ ಕೂಡ ಸರಿಯಾದ ಕ್ರಮ ತೆಗೆದುಕೊಂಡಿಲ್ಲ. ಧಾರವಾಡದಲ್ಲಿರುವ ವ್ಯಾಪಾರಸ್ಥರ ಮೇಲೆ ಸಾವಿರಾರು ನೋಟಿಸ್‌ಗಳು ಹೋಗಿದ್ದರೂ ಸಹ ಯಾರ ಮೇಲೂ ಆಕ್ಷನ್ ತೆಗೆದುಕೊಂಡಿಲ್ಲ. ಏತಕ್ಕೆ ತೆಗೆದುಕೊಂಡಿಲ್ಲಾ? ಯಾವ ವ್ಯಾಪಾರಸ್ಥರಿಂದಲಾದರೂ ಒಂದು ಚೀಲ ಅಕ್ಕಿ ತೆಗೆದುಕೊಂಡಿದ್ದೀರಾ, ತಿಳಿಸಿ ಆಕ್ಷನ್ ತೆಗೆದುಕೊಳ್ಳುತ್ತೇವೆ ಎಂದು ಹೇಳುತ್ತೀರಾ? ಯಾವ ಆಕ್ಷನ್ ತೆಗೆದುಕೊಂಡಿದ್ದೀರಾ ತಿಳಿಸಿ. ಕಾಯಿದೆ ಪ್ರಕಾರ ಡಿಕ್ಲೇರ್ಡ್ ಸ್ಟಾಕ್ಸ್‌ನಲ್ಲಿ ಅರ್ಧದಷ್ಟು ಸರ್ಕಾರ ತೆಗೆದುಕೊಳ್ಳಬೇಕು? ಆ ರೀತಿ ಏನಾದರೂ ತೆಗೆದಿಕೊಂಡಿದ್ದೀರಾ? ಯಾವ ರೂಟ್‌ನಿಂದ ಎಷ್ಟು ವಸೂಲ್ಮಾಡಿದ್ದೀರಾ ಹೇಳಿ, ಹಳ್ಳಿಗಳಿಗೆ ಮತ್ತು ಷಹರ್‌ಗಳಿಗೆ ಬನ್ನಿ, ಅವರಲ್ಲಿ ಎಷ್ಟು ದಾಸ್ತಾನಿದೆ ಎನ್ನುವುದನ್ನು ನೋಡಿ. ನಿಮ್ಮ ಆಫೀಸರ್ ಕಾಯಿದೆ ಪ್ರಕಾರ ಅವರಿಗೆ ನೋಟಿಸ್ ಕೊಡುತ್ತಾರೆ.

ಆದರೆ ಆ ನೋಟಿಸನ್ನು ಪುನಃ ಹಿಂತೆಗೆದುಕೊಂಡು ಬಿಡುತ್ತಾರೆ. ಏತಕ್ಕೆಂದರೆ ರಾಜಕೀಯ ಮುಖಂಡರು ಸಹ ಭ್ರಷ್ಟಾಚಾರಕ್ಕೆ ಇಳಿದಿರುವುದರಿಂದ ಅವರ ಮೇಲೆ ಯಾವ ಕ್ರಮವನ್ನು ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗಿಲ್ಲ. ಆದ್ದರಿಂದಲೇನೇ ಜನ ರೊಚ್ಚಿಗೆದ್ದದ್ದು, ಈ ಚಳವಳಿಗೆ ಬೆಲೆ ಏರಿಕೆ ಒಂದೇ ಕಾರಣವಲ್ಲ ಎಂದು ಹೇಳುತ್ತೇನೆ.

ಇನ್ನು ಕೊನೆಯದಾಗಿ ಒಂದು ಮಾತನ್ನು ಹೇಳುತ್ತೇನೆ. ಅದೇನೆಂದರೆ ಸರ್ಕಾರಕ್ಕೆ ತನ್ನಲ್ಲಿ ನಂಬಿಕೆಹೋಗಿದೆ. ತಮ್ಮ ಅಧಿಕಾರವನ್ನು ಉಳಿಸಿಕೊಳ್ಳುವ ಸಲುವಾಗಿ ಏನು ಮಾಡುತ್ತಿದ್ದಾರೆ ಎಂದರೆ ಮಂತ್ರಿಗಳು ಮತ್ತು ಮುಖ್ಯಮಂತ್ರಿಗಳು ತಮ್ಮ ಪಕ್ಷದ ಶಾಸಕರ ಕೈಗೊಂಬೆಯಾಗಿ ಇದ್ದಾರೆ, ಅದರ ಪರಿಣಾಮವಾಗಿ ಕೃಷಿ ಕ್ಷೇತ್ರದಲ್ಲಿ ಶಾಸಕರು ಹೇಳಿದ ಹಾಗೆ ಸರ್ಕಾರ ನಡೆಯುತ್ತದೆ. ಯಾವ ಪೋಲೀಸಿನವರೇ ಇರಲಿ, ಯಾವ ತಹಶೀಲ್ದಾರರೇ ಇರಲಿ ಯಾವ ಅಸಿಸ್ಟೆಂಟ್ ಇಂಜಿನಿಯರೇ ಇರಲಿ ಯಾರೇ ಇರಲಿ ಶಾಸಕರು ಹೇಳಿದ ಹಾಗೆ ನಡೆದುಕೊಳ್ಳುತ್ತಿದ್ದಾರೆ. ಹಾಗೇ ಮಾಡದೇ ಹೋದರೆ ಮರುದಿವಸವೇ ಅವರಿಗೆ ಟ್ರಾನ್ಸ್‌ಫರ್ ಆಗುತ್ತದೆ.

**ಶ್ರೀ ಎನ್. ರಾಚಯ್ಯ:** ತಮ್ಮ ತಾಲ್ಲೂಕಿನಲ್ಲಿ ದೊಡ್ಡ ರೈತರು ಮತ್ತು ವರ್ತಕರು ಇಂದಿರಾಗಾಂಧಿ ಕಾಂಗ್ರೆಸ್‌ಗೆ ಓಟು ಕೊಡಬೇಡಿ ಎಂದು ಪ್ರಚಾರ ಮಾಡಿದವರೇ ಆಹಾರಧಾನ್ಯವನ್ನು ಬಚ್ಚಿಡಲಿಲ್ಲವೇ?

**ಶ್ರೀ ಎಸ್.ಆರ್. ಬೊಮ್ಮಾಯಿ:** ಆ ರೀತಿ ರೈತರಲ್ಲೂ ಇದ್ದಾರೆ, ವ್ಯಾಪಾರಸ್ಥರಲ್ಲೂ ಇದ್ದಾರೆ, ಎಲ್ಲಾ ಪಕ್ಷದಲ್ಲೂ ಇದ್ದಾರೆ, ಇಲ್ಲ ಎಂದು ಹೇಳುವುದಿಲ್ಲ. ಆದರೆ ಸರ್ಕಾರ ನಡೆಸತಕ್ಕಂಥವರು ತಮ್ಮಲ್ಲಿ ನಂಬಿಕೆಯನ್ನು ಕಳೆದುಕೊಂಡು ತಮ್ಮ ಅಧಿಕಾರವನ್ನು ಉಳಿಸಿಕೊಳ್ಳುವ ಸಲುವಾಗಿ ಶಾಸಕರು ಹೇಳಿದ ಹಾಗೆ ಕೇಳುತ್ತಿದ್ದಾರೆ. ಇಂತಹ ಪರಿಸ್ಥಿತಿಗೆ ಬಂದಿದೆ ಕಳ್ಳ ವ್ಯಾಪಾರಸ್ಥರ ಜೊತೆ ಕಳ್ಳ ಸಂಗ್ರಹಕಾರರ ಜೊತೆ ಪೋಲೀಸರ ಜೊತೆ, ಅಧಿಕಾರಸ್ಥರ ಜೊತೆಗೆ ಶಾಸಕರು ಕೆಲವರು ಭ್ರಷ್ಟಾಚಾರಕ್ಕೆ ಇಳಿದ್ದಿದ್ದಾರೆ. ಅದಕ್ಕೆ ಜನರು ರೊಚ್ಚಿಗೆದ್ದದು. ನಾನು ಶ್ರೀಮಾನ್ ರಾಚಯ್ಯನವರಿಗೆ ಹೇಳುತ್ತೇನೆ. ನೀವು ಇಲ್ಲಿ ಶಾಸಕರಾಗಿದ್ದೀರಿ. ನೀವು ವ್ಯಾಪಾರಸ್ಥರನ್ನೂ ಕಾಳಸಂತೆಕೋರರನ್ನು ಕರೆದು ಈವೊತ್ತಿನ ದಿವಸ ನಮ್ಮ ರಾಜ್ಯದಲ್ಲಿ ಇಂತಹ ಪರಿಸ್ಥಿತಿ ಬಂದಿದೆ ಎಂದು ಸರಿಯಾದ ರೀತಿಯಲ್ಲಿ ಅವರಿಗೆ ತಿಳಿವಳಿಕೆ ಹೇಳಿ, ಅವರಲ್ಲಿ ಕಳಕಳಿಯಿಂದ ಮನವಿ ಮಾಡಿಕೊಂಡಿದ್ದರೆ ಅದಕ್ಕೆ ಖಂಡಿತವಾಗಿ ಸಾರ್ವಜನಿಕರು ಸಹಕಾರ ಮಾಡುತ್ತಾರೆ. ಆ ರೀತಿ ನೋಡಿದ್ದೀರಾ, ನಾವು ಧಾರವಾಡದಲ್ಲಿ ಈ ರೀತಿ ಮಾಡಿದ್ದೇವೆ. ಹುಬ್ಬಳ್ಳಿಯಲ್ಲಿ ಮಾಡಿದ್ದೇವೆ. ಆ ರೀತಿ ಮಾಡಿದರೆ ಫೇರ್‌ಪ್ರೈಸ್ ಷಾಪುಗಳನ್ನು ಚೆನ್ನಾಗಿ ನಡೆಸಬಹುದು. ನಿಮ್ಮ ಪಕ್ಷದಲ್ಲಿ



W.D. 1347 - 5

ಯಾರೇ ಆಗಲೀ ನಿಮ್ಮ ಮತ ಕ್ಷೇತ್ರದಲ್ಲಿ ಈ ರೀತಿ ಮಾಡದಿದ್ದರೆ, ಅದು ಮಂತ್ರಿಗಳ ಮೋಸ ಎಂದು ಹೇಳುತ್ತೇನೆ. ಏತಕ್ಕೆಂದರೆ ಕಳೆದ 6 ತಿಂಗಳುಗಳಿಂದ ಅವರು ಯಾವ ಸಾರ್ವಜನಿಕರ ಸಭೆಯನ್ನು ಮಾಡಿಲ್ಲ. ಹುಬ್ಬಳ್ಳಿ ಧಾರವಾಡದಲ್ಲಿ ಏನು ಚಾಲೆಂಜ್ ಮಾಡಿದ್ದೀರಿ ಹೇಳಿ. ಕಮಿಟಿ ಮೀಟಿಂಗ್ ಕರೆದರೆ ಅವರು ಬರೋದಿಲ್ಲಾ ಏತಕ್ಕೆಂದರೆ ಅವರಿಗೆ ಧೈರ್ಯ ಇಲ್ಲ, ನೈತಿಕ ಬಲ ಕಳೆದುಕೊಂಡಿದ್ದಾರೆ. ಅದಕ್ಕಾಗಿ ನಾನು ತಮ್ಮನ್ನು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ. ಈವೊತ್ತು ರಾಜಕೀಯ ಬೇಡ. ಜನ ಉಳಿಯಬೇಕು. ಜನತಂತ್ರ ಉಳಿಯಬೇಕಾದರೆ ಶಾಂತಿ ಮತ್ತು ಕಾನೂನು ಪಾಲನೆಯಾಗಬೇಕು. ಶಾಂತಿ ಮತ್ತು ಕಾನೂನುಪಾಲನೆಯಾದರೆ ಈ ಪ್ರಜಾಪ್ರಭುತ್ವ ಉಳಿಯುತ್ತದೆ. ಅದಕೋಸ್ಕರ ಲಾ ಅಂಡ್ ಆರ್ಡರ್ ಮೇನ್‌ಟೈನ್ ಮಾಡಬೇಕು. ಆಡಳಿತದಲ್ಲಿ ಅವರೇ ಇರಲಿ, ಯಾರೇ ಇರಲಿ ಸರಿಯಾದ ರೀತಿಯಲ್ಲಿ ಕಾನೂನು ಪಾಲನೆ ಇಲ್ಲದೇ ಹೋದರೆ ಒಂದು ಘಟನಾ ಬದ್ಧವಾದ ಸರ್ಕಾರ ಉಳಿಯುವುದಿಲ್ಲ. ಕ್ರಾಂತಿಯಾಗುತ್ತದೆ, ಉಲ್ಬಣ ಪರಿಸ್ಥಿತಿ ಬರುತ್ತದೆ. ಮುಂದೆ ಬರತಕ್ಕಂತ ಸರ್ಕಾರ ನಮ್ಮ ಕೈಯಲ್ಲಿ ಇರುವುದಿಲ್ಲ. ಆದುದರಿಂದ ನಾನು ಕಳಕಳಿಯಿಂದ ಅಧಿಕಾರಿಗಳಿಗೆ ಮನವಿ ಮಾಡಿಕೊಳ್ಳುತ್ತೇನೆ. ಏನೆಂದರೆ ಶಾಸಕರು ಹೇಳಿದ ಹಾಗೆ ನಡೆದರೆ ಟ್ರಾನ್ಸ್‌ಫರ್ ಮಾಡುವುದಿಲ್ಲ ಎಂದು ಅವರು ಹೇಳಿದಂತೆ ನಡೆಯುವುದು ಸರಿಯಲ್ಲ, ಮುಖ್ಯವಾಗಿ ಸರ್ಕಾರದವರು ಆಡಳಿತದಲ್ಲಿ ಒಂದು ಬಿಗಿ ತೆಗೆದುಕೊಂಡು ಬರಬೇಕು. ಅಧಿಕಾರಿಗಳು ನಿಷ್ಪಕ್ಷಪಾತವಾಗಿ ವರ್ತಿಸುವಂತೆ ಮಾಡಬೇಕು ಎಂದು ಇಷ್ಟು ಮಾತ್ರ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

******

# ರೈತರ ಬಗ್ಗೆ ಬೇರು ಮಟ್ಟದ ಆಲೋಚನೆ

ದಿನಾಂಕ: 20.03.1978

**ತಮ್ಮ ಅನಾರೋಗ್ಯವನ್ನೂ ಲೆಕ್ಕಿಸದೇ ಬೊಮ್ಮಾಯಿಯವರು ರಾಜ್ಯಪಾಲರ ಭಾಷಣದ ಮೇಲಿನ ವಂದನಾ ನಿರ್ಣಯದ ಮೇಲಿನ ಚರ್ಚೆಯಲ್ಲಿ ಪಾಲ್ಗೊಂಡು ಮಾತನಾಡಿದರು. ಜಯಪ್ರಕಾಶ್ ನಾರಾಯಣರ ಜನಾಂದೋಲನದ ಫಲವಾಗಿ ತುರ್ತುಪರಿಸ್ಥಿತಿ ಕೊನೆಗೊಂಡ ಹಿನ್ನೆಲೆಯಲ್ಲಿ ಬೊಮ್ಮಾಯಿಯವರ ಮಾತುಗಳು ಮಹತ್ವವನ್ನು ಪಡೆದುಕೊಳ್ಳುತ್ತದೆ. ಟೆನೆನ್ಸಿ ಆಕ್ಟ್‌ನ ಲೋಪಗಳ ಬಗ್ಗೆ ಗಮನ ಸೆಳೆಯುತ್ತಾರೆ. ರೈತರ ಸ್ಥಿತಿಗತಿಗಳ ಬಗ್ಗೆ ಬೊಮ್ಮಾಯಿಯವರಿಗಿದ್ದ ಬೇರು ಮಟ್ಟದ ತಿಳಿವಳಿಕೆ ಬೆರಗುಗೊಳಿಸುವಂತಿದೆ.**

**ಶ್ರೀ ಎಸ್.ಆರ್. ಬೊಮ್ಮಾಯಿ (ಹುಬ್ಬಳ್ಳಿ):** ಮಾನ್ಯ ಅಧ್ಯಕ್ಷರೆ, ಮೊದಲನೆಯದಾಗಿ ಈ ಸಭೆಯ ಕ್ಷಮೆಯನ್ನು ಕೋರುತ್ತಿದ್ದೇನೆ. ಕಾರಣ ನನ್ನ ಆರೋಗ್ಯ ಚೆನ್ನಾಗಿಲ್ಲ ನಾನು ಹೆಚ್ಚು ಮಾತನಾಡುವುದಿಲ್ಲ ಹಾಗೂ ಹೆಚ್ಚು ಕಾಲ ನಿಂತು ಮಾತನಾಡುವುದಕ್ಕೆ ತೊಂದರೆಯಾಗಿದೆ. ಕುಳಿತೇ ಮಾತನಾಡುವುದಕ್ಕೆ ಅಪ್ಪಣೆ ಕೊಟ್ಟರೆ ಕುಳಿತೇ ಮಾತನಾಡುತ್ತೇನೆ. ಆದರೆ ನಾನು ಸ್ವಲ್ಪ ಮಾತನಾಡುವುದರಿಂದ ನಿಂತೇ ಮಾತನಾಡುವುದಕ್ಕೆ ಪ್ರಯತ್ನ ಮಾಡುತ್ತೇನೆ. ದಯಮಾಡಿ ಕ್ಷಮಿಸಬೇಕು. ನನ್ನ ಆರೋಗ್ಯ ಸರಿಯಾಗಿಲ್ಲದಿದ್ದುದರಿಂದ ನಾನು ಹೆಚ್ಚು ಸಮಯದವರೆಗೆ ಮಾತನಾಡಬಯಸುವುದಿಲ್ಲ. ಪ್ರಥಮದಲ್ಲಿ ನಾನು ರಾಜ್ಯಪಾಲರ ಭಾಷಣದ ಮೇಲೆ ಮಾತನಾಡುವಾಗ ಭಾರತದ ಜನತೆಗೆ ವಂದನೆಗಳನ್ನು ಸಲ್ಲಿಸುತ್ತೇನೆ. ಹಿಂದೆ ರಾಜ್ಯಪಾಲರು ಈ ಸಭೆಯಲ್ಲಿ ಏನೊಂದು ಭಾಷಣ ಮಾಡಿದರು, ಅದರ ಬಗ್ಗೆ ಈ ಸಭೆಯಲ್ಲಿ ನಡೆದಂತಹ ಕಾರ್ಯಕಲಾಪಗಳು ಪತ್ರಿಕೆಯಲ್ಲಿ ಬರಲಿಲ್ಲ. ಆ ಸಮಯದಲ್ಲಿ ಆ ಕಡೆಯವರು ಈ ಕಡೆಯವರು ರಾಜ್ಯಪಾಲರ ಭಾಷಣದ ಮೇಲೆ ಏನು ಮಾತನಾಡಿದರು ಅದನ್ನು ಪತ್ರಿಕೆಗಳಲ್ಲಿ ಪ್ರಸಿದ್ಧಿ ಮಾಡತಕ್ಕಂತ ಸ್ವಾತಂತ್ರ್ಯ ಇರಲಿಲ್ಲ. ಆದ್ದರಿಂದ ಜನತಾ ಪ್ರತಿನಿಧಿಗಳಾದ ನಾವು ಏನು ಇಲ್ಲಿ ಕಾರ್ಯಕಲಾಪಗಳನ್ನು ಮಾಡುತ್ತಿದ್ದೇವೆ. ಅದು ಜನತೆಗೆ ತಿಳಿಯದ ರೀತಿಯಲ್ಲಿ ಇರತಕ್ಕಂಥ ಒಂದು ಪರಿಸ್ಥಿತಿ ಇತ್ತು ಆದರೆ ಇದು ಇವತ್ತು

ಇಲ್ಲ, ಅದಕ್ಕಾಗಿ ನನ್ನ ಮಟ್ಟಿಗೆ ಹೇಳುವುದಾದರೆ ಲೋಕ ನಾಯಕರಾದ ಮಾನ್ಯ ಶ್ರೀ ಜಯಪ್ರಕಾಶ್ ನಾರಾಯಣ್‌ರವರಿಗೆ ಹಾಗೂ ಭಾರತದ ಜನತೆಗೆ ವಂದಿಸುತ್ತೇನೆ. ಇವತ್ತು ಪತ್ರಿಕಾ ಸ್ವಾತಂತ್ರ್ಯ ಬಂದಿದೆ. ಜನತೆ ಈ ಸಭೆಯಲ್ಲಿ ನಡೆಯತಕ್ಕಂಥ ಎಲ್ಲಾ ವಿಷಯಗಳನ್ನು ತಿಳಿಯತಕ್ಕಂಥ ಒಂದು ಹಕ್ಕು ಬಂದಿದೆ.

**ಶ್ರೀ ಎಸ್. ವಿ. ನಾಯಕ್:** ಉತ್ತರ ಭಾರತದಲ್ಲಿ ಏನು ನಡೆಯುತ್ತಿದೆ ಎಂಬುದು ಪತ್ರಿಕೆಯಲ್ಲಿ ಈಗ ಬರುತ್ತಿದೆಯೇ? ಬಿಹಾರದಲ್ಲಿ ಏನು ನಡೆಯುತ್ತಿದೆ ಎಂಬುದು ಈ ಪತ್ರಿಕೆಯಲ್ಲಿ ಬರುತ್ತಿದೆಯೇ ?.

**ಶ್ರೀ ಎಸ್.ಆರ್. ಬೊಮ್ಮಾಯಿ:** ನಾನು ಹೇಳತಕ್ಕಂತ ವಿಷಯಗಳನ್ನು ಮಾನ್ಯ ಸದಸ್ಯರು ಶಾಂತ ರೀತಿಯಿಂದ ಕೇಳಬೇಕೆಂದು ತಮ್ಮ ಮೂಲಕ ಅವರನ್ನು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ. ಈ ರಾಷ್ಟ್ರದಲ್ಲಿ ನಡೆದಂತಹ ಘಟನೆಗಳನ್ನು ಯಾರೂ ಮುಚ್ಚಿಡುವುದಕ್ಕೆ ಆಗುವುದಿಲ್ಲ. ಮತ್ತು ಅದನ್ನು ಯಾರೂ ಮರೆಯುವುದಕ್ಕಾಗುವುದಿಲ್ಲ. ಒಂದು ಶಾಂತಿಮಯವಾದ ಕ್ರಾಂತಿ ಈ ರಾಷ್ಟ್ರದಲ್ಲಿ ನಡೆದಿದೆ ಜನತೆ ಅದಕ್ಕೆ ಬೆಲೆ ಕೊಟ್ಟಿದೆ. ಭಾರತದ ಬಗ್ಗೆ ಒಂದು ಅಭಿಮಾನ ಮೂಡತಕ್ಕಂಥ ಒಂದು ಸಂದರ್ಭ ಕಳೆದ ಮಾರ್ಚ್ ತಿಂಗಳಿನಲ್ಲಿ ನಡೆದಿದ್ದರಿಂದಲೇ ಇವತ್ತು ನಾವು ಇಲ್ಲಿ ಸ್ವತಂತ್ರವಾಗಿ ಮಾತನಾಡುತ್ತಿದ್ದೇವೆ. ಮಾರ್ಚ್ ತಿಂಗಳ ಹಿಂದೆ ಈ ರೀತಿಯ ಸ್ವಾತಂತ್ರ್ಯ ಇರಲಿಲ್ಲ. ಭಾರತದ ಪ್ರತಿಯೊಬ್ಬ ನಾಗರಿಕನು ಪ್ರತಿಯೊಂದು ಪಕ್ಷದವರೂ ಸ್ವತಂತ್ರವಾಗಿ ಮಾತನಾಡುವ ಹಕ್ಕು ಶ್ರೇಯಸ್ಸು ಭಾರತದ ಜನತೆಗೆ ಸಿಕ್ಕಿದೆ ಎನ್ನುವಂತಹ ಮಾತನ್ನು ಹೇಳುತ್ತಿದ್ದೇನೆ. ಕಳೆದ ಮಾರ್ಚಿ ತಿಂಗಳವರೆಗೂ ವ್ಯಕ್ತಿ ಸ್ವಾತಂತ್ರ್ಯ ನ್ಯಾಯಾಂಗ ಸ್ವಾತಂತ್ರ್ಯ ವಾಕ್ ಸ್ವಾತಂತ್ರ್ಯ ಸಭೆಯ ಸ್ವಾತಂತ್ರ್ಯ ಹಾಗೂ ಪತ್ರಿಕಾ ಸ್ವಾತಂತ್ರ್ಯ ಇರುವುದು ಹಾನಿಯಾಗಿತ್ತು. ಏನೂ ಅಪರಾಧವಿಲ್ಲದೆ ಅನೇಕ ನಾಯಕರನ್ನು ಯಾವ ಒಂದು ವಿಧವಾದ ಕಾರಣವನ್ನು ಕೇಳದೆ ಜೈಲಿಗೆ ಹಾಕಿದರು. ಜೈಲಿನಲ್ಲಿದ್ದಂತಹವರು ಇದರ ವಿರುದ್ಧ ನ್ಯಾಯಾಲಯಕ್ಕೆ ಹೋಗತಕ್ಕಂಥ ಹಕ್ಕನ್ನು ಕಸಿದುಕೊಂಡಿದ್ದಂತಹ ಒಂದು ಸನ್ನಿವೇಶ ಆಗ ಇತ್ತು. ಅದು ಈಗ ಸಂಪೂರ್ಣವಾಗಿ ನಿರ್ಮೂಲನವಾಗಿದೆ ಎಂಬುದಾಗಿ ತಿಳಿಸತಕ್ಕಂತ ಅವಕಾಶ ನನಗೆ ಈಗ ಸಿಕ್ಕಿದಕ್ಕಾಗಿ ಸಭೆಯ ಮೂಲಕ ಜನತೆಗೆ ವಂದನೆಗಳನ್ನು ಸಲ್ಲಿಸುತ್ತಿದ್ದೇನೆ. ನಾನು ಆ ಬಗ್ಗೆ ಇನ್ನು ಹೆಚ್ಚು ಮಾತನಾಡತಕ್ಕಂಥ ಅವಶ್ಯಕತೆ ಇಲ್ಲ. ಇದು ಒಂದು ಐತಿಹಾಸಿಕವಾದ ಘಟನೆ ಈ ಬಗ್ಗೆ ನಾವು ಚರ್ಚೆ ಮಾಡುವುದಕ್ಕಾಗಿ ಹೆಚ್ಚು ಅವಕಾಶ ಈ ಸಭೆಯಲ್ಲಿ ಇಲ್ಲ ಎಂಬುದನ್ನು ನಾನು ಒಪ್ಪುತ್ತೇನೆ.

ಇನ್ನು ರಾಜ್ಯಪಾಲರ ಭಾಷಣದ ಬಗ್ಗೆ ಒಂದೆರೆಡು ವಿಚಾರಗಳನ್ನು ಇಲ್ಲಿ ನಾನು ಹೇಳಬಯಸುತ್ತಿದ್ದೇನೆ. 1973ನೇ ಇಸವಿಯಿಂದ 1978ನೇ ಇಸವಿಯವರೆಗೆ ಈ ಸಭೆಯಲ್ಲಿ ರಾಜ್ಯಪಾಲರು ಮಾಡಿದಂತಹ ಭಾಷಣಗಳ ಪ್ರತಿಗಳು ನನ್ನ ಹತ್ತಿರ ಇವೆ. 1972 ರಲ್ಲೂ ಅದೇ ಭಾಷಣ. 1978 ರಲ್ಲೂ ಅದೇ ಭಾಷಣ. ರಾಜ್ಯಪಾಲರು ಸರ್ಕಾರದ ಧೋರಣೆಯನ್ನು ಪ್ರತಿಬಿಂಬಿಸತಕ್ಕಂತ ಒಂದು ಗ್ರಾಮಫೋನಿನ ರೆಕಾರ್ಡಾಗಿದೆ. ರಾಜ್ಯಪಾಲರ ಪ್ರತಿ ವರ್ಷದ ಭಾಷಣ ಗ್ರಾಮಫೋನಿನ ರೆಕಾರ್ಡಾಗಿದ್ದು 1972 ರಲ್ಲಿ ಏನು ಹೇಳಿದ್ದಾರೆ ಅದೇ ಮಾತುಗಳನ್ನು 1978 ರಲ್ಲೂ ಹೇಳಿದ್ದಾರೆ.

**ಶ್ರೀ ಸಿ.ಎ. ಚಂದ್ರೇಗೌಡ:** ಅಂಕಿ ಅಂಶಗಳು ಬದಲಾಗಿವೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ತಾವು ಸಹ ಅಂಕಿ ಅಂಶಗಳು ಬದಲಾಗಿರುವುದನ್ನು ನೋಡಬಹುದು. ಅಂಕಿ ಅಂಶಗಳು ಬದಲಾಗಿರುವುದನ್ನು ನಾನು ನೋಡುತ್ತಿದ್ದೇನೆ. ಇದನ್ನು ಹೇಳುವಾಗ ಜವಾಬ್ದಾರಿಯಿಂದ ಹೇಳುತ್ತಿದ್ದೇನೆ. ಒಂದೊಂದು ವಿಚಾರವನ್ನು ಹೇಳುತ್ತಿದ್ದೇನೆ. ತಾವು ದಯಮಾಡಿ ಶಾಂತ ರೀತಿಯಿಂದ ನಾನು ಹೇಳತಕ್ಕಂಥ ವಿಷಯಗಳನ್ನು ಕೇಳಬೇಕೆಂಬುದು ನನ್ನ ಕಳಕಳಿಯ ಮನವಿ.

ಮೊಟ್ಟಮೊದಲನೆಯದಾಗಿ, ಕಳೆದ ಬಾರಿಯ ಕಾಂಗ್ರೆಸ್ ಪಕ್ಷದ ಚುನಾವಣಾ ಪ್ರಣಾಳಿಕೆಯಲ್ಲಿ ಮನೆ ಇಲ್ಲದವರಿಗೆ ಮನೆ, ಹೊಲ ಇಲ್ಲದವರಿಗೆ ಹೊಲ, ಕೆಲಸ ಇಲ್ಲದವರಿಗೆ ಕೆಲಸ ಕೊಡುತ್ತೇವೆಂದು ನಮೂದಿಸಿ ಅದನ್ನು ಜನತೆಯ ಮುಂದಿಟ್ಟು ಜಯಗಳಿಸಿದರು. ಜನ ಸರ್ಕಾರವನ್ನು ನಡೆಸುವುದಕ್ಕೆ 5 ವರ್ಷಗಳ ಕಾಲ ಅವಕಾಶ ಕೊಟ್ಟರೂ ಅದನ್ನು 6 ವರ್ಷಗಳವರೆಗೆ ಬೆಳೆಸಿಕೊಂಡರು, ಈ 6 ವರ್ಷಗಳಲ್ಲಿ ಕೊಟ್ಟ ಮಾತಿನಂತೆ ನಡೆದಿದ್ದಾರೆಯೆ? ಎಷ್ಟರ ಮಟ್ಟಿಗೆ ಚುನಾವಣಾ ಪ್ರಣಾಳಿಕೆಯ ಪ್ರಕಾರ ಸಾಧನೆಗಳನ್ನು ಮಾಡಿದ್ದಾರೆ. ಇದನ್ನು ಇವತ್ತು ಅಳತೆ ಮಾಡಿನೋಡಬೇಕಾಗಿದೆ. ಈ 6 ವರ್ಷಗಳಲ್ಲಿ ಕೊಟ್ಟಮಾತಿನಂತೆ ನಡೆದಿದ್ದಾರೆಯೇ? ಎಷ್ಟರ ಮಟ್ಟಿಗೆ ಚುನಾವಣಾ ಪ್ರಣಾಳಿಕೆಯ ಪ್ರಕಾರ ಸಾಧನೆಗಳನ್ನು ಮಾಡಿದ್ದಾರೆ? ಇದನ್ನು ಇವತ್ತು ಅಳತೆ ಮಾಡಿ ನೋಡಬೇಕಾಗಿದೆ. ಈ 6 ವರ್ಷಗಳಲ್ಲಿ ಕರ್ನಾಟಕದ ಮಟ್ಟಿಗೆ ಏನಾದರೂ ಅಭಿವೃದ್ಧಿಯಾಗಿದ್ದರೆ, ಸರ್ಕಾರ ತಾನು ಕೊಟ್ಟ ವಚನಗಳನ್ನು ಪಾಲಿಸಿದ್ದರೆ ಮುಂದೆಯೂ ಕೂಡ ಪಾಲಿಸುತ್ತಾರೆಂಬ ಭರವಸೆ ನಮಗೆ ಉಂಟಾಗುತ್ತದೆ. ಇವತ್ತಿನ ದಿವಸ ಲ್ಯಾಂಡ್ ರಿಫಾರಮ್ಸ್ ಆಕ್ಟ್‌ನ್ನು ತಂದು ಅದು ನಮ್ಮ ರಾಜ್ಯದಲ್ಲಿ

ಅನುಷ್ಠಾನಕ್ಕೆ ತಂದಿದ್ದೇವೆಂದೂ ಇದಕ್ಕಿಂತ ಪ್ರಗತಿ ಪರವಾದ ಕಾಯಿದೆ ಇಲ್ಲವೆಂಬ ಮಾತನ್ನು ಕಾಂಗ್ರೆಸ್ ಪಕ್ಷದ ನಾಯಕರಿಂದ ಹಾಗೂ ಮಂತ್ರಿಗಳಿಂದ ಕೇಳುತ್ತಿದ್ದೇವೆ. ಇದು ಒಂದು ದುರ್ದೈವದ ಶಾಸನ. ಇದರಿಂದ ನಮ್ಮ ಮುಂಬೈ ಕರ್ನಾಟಕದ ರೈತರಿಗೆ ಆದಂತಹ ಅನ್ಯಾಯವನ್ನು ಮರೆಯಲಾಗದು. ಆ ಒಂದು ಕಾಯಿದೆಯಿಂದ 1856 ರಿಂದ ರೈತ ಒಡೆಯನಾಗತಕ್ಕ ಒಂದು ಅವಕಾಶವನ್ನು ಕಳೆದುಕೊಂಡ. ಇವತ್ತು 1978ರಲ್ಲಿದ್ದೇವೆ. ಆಗ ಈಗಿನ ಪ್ರಧಾನ ಮಂತ್ರಿಗಳು ಮುಖ್ಯಮಂತ್ರಿಗಳಾಗಿದ್ದರು, ಶ್ರೀಮಾನ್ ಹಿರೇ ಅವರೇ ಕಂದಾಯ ಮಂತ್ರಿಗಳಾಗಿದ್ದರು.

**ಶ್ರೀ ಕೆ.ಹೆಚ್. ರಂಗನಾಥ್:** ಅದಕ್ಕೆ ಯಾರು ಜವಾಬ್ದಾರರು? ಇಂಟಿಗ್ರೇಷನ್ ಆದ ಮೇಲೆ ಬಂದಂತಹ ಸರ್ಕಾರದವರು ಜವಾಬ್ದಾರರೇ ಹೊರತು ಬೇರೆ ಯಾರೂ ಅಲ್ಲ. ಅವರು ಮಾಡದೇ ಇದ್ದುದರಿಂದ ಈಗಿರತಕ್ಕ ಕಾನೂನು ಜಾರಿಗೆ ಬಂದದ್ದು. ಮಾನ್ಯ ವಿರೋಧ ಪಕ್ಷದ ನಾಯಕರು ಏನು ಹೇಳುತ್ತಾರೆ. ಆ ಒಂದು ಹಕ್ಕು 1–11–56 ರಿಂದ ಅಂದ್ರೆ ಇಂಟಿಗ್ರೇಷನ್ ಆದ ಮೇಲೆ ಬಾಂಬೆ ಕರ್ನಾಟಕದ ರೈತರಿಗೆ ದೊರೆಯುತ್ತಿತ್ತು. ಆ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಆದರೆ ಅದನ್ನು ನಿಲ್ಲಿಸಿದಂತಹ ಸರ್ಕಾರ ಯಾವುದೇ ಅಂದಿದ್ದ ಮುಖ್ಯಮಂತ್ರಿಗಳು ಯಾರೂ ಅದನ್ನು ನಮ್ಮ ತಲೆ ಮೇಲೆ ಏಕೆ ಹಾಕುತ್ತೀರಿ. ಆದುದರಿಂದ ಆ ಕಾನೂನಿಗೆ ತಿದ್ದುಪಡಿ ತಂದು ಇವತ್ತು ಇರತಕ್ಕ ಕಾನೂನನ್ನು ಮಾಡಿದ್ದೇವೆ.

(ಈ ಸಂದರ್ಭದಲ್ಲಿ ಆಡಳಿತ ಪಕ್ಷದವರೆಲ್ಲ ಒಟ್ಟಿಗೆ ಷೇಮ್ ಷೇಮ್ ಎಂದು ಕೂಗಿಕೊಂಡರು)

**ಶ್ರೀಮತಿ ಎಸ್. ಪ್ರಮೀಳ:** ಈ ಸಭೆಯಲ್ಲಿ ಷೇಮ್ ಷೇಮ್ ಅನ್ನತಕ್ಕ ಪದಗಳನ್ನು ಉಪಯೋಗಿಸಬಹುದೆ?

(34 ಮಂದಿ ಸದಸ್ಯರು ಒಟ್ಟಿಗೆ ಎದ್ದು ನಿಂತುಕೊಂಡು ಕ್ರಿಯಾಲೋಪ ಎತ್ತುತ್ತೇವೆಂದರು)

**ಅಧ್ಯಕ್ಷರು:** ಮಾನ್ಯ ವಿರೋಧಪಕ್ಷದ ನಾಯಕರು ಮಾತನಾಡುವಾಗ ಹೀಗೆ 34 ಮಂದಿ ಒಟ್ಟೊಟ್ಟಿಗೆ ಎದ್ದು ನಿಂತುಕೊಂಡರೆ ಪ್ರೊಸೀಡಿಂಗ್ಸ್ ಅನ್ನು ಕಂಡಕ್ಟ್ ಮಾಡುವುದು ಹೇಗೆ? ಮಾನ್ಯ ಸದಸ್ಯರು ಮೊಟ್ಟ ಮೊದಲು ಈ ಸಭೆಯ ನಿಯಮಾವಳಿಗಳನ್ನು ಪಾಲಿಸತಕ್ಕದ್ದನ್ನು ಕಲಿತುಕೊಳ್ಳಬೇಕು.

**ಶ್ರೀ ಮಳ್ಳೂರು ಆನಂದರಾವ್:** ನನ್ನ ಪ್ರಾರ್ಥನೆ ಏನೆಂದರೆ ಇದು ಸಾರ್ವಜನಿಕ ಸಭೆಯೋ ಅಥವಾ ವಿಧಾನ ಸಭೆಯೋ ಈ ಸಭೆಯಲ್ಲಿ ಷೇಮ್ ಷೇಮ್ ಎಂದು

ಕೂಗುವುದು ಸರಿಯೇ? ಇದಕ್ಕೆ ತಾವು ರೂಲಿಂಗ್ ಕೊಡಬೇಕು. ಇಲ್ಲದಿದ್ದರೆ ನಾವು ಅವರ 10ರಷ್ಟು ಕೂಗಾಟ ಮಾಡುತ್ತೇವೆ.

**ಅಧ್ಯಕ್ಷರು:** ತಮ್ಮ ಈ ಗಲಾಟೆಯನ್ನು ತಮಗೆ ಓಟು ಕೊಟ್ಟಂತಹ ಜನರು ಗಮನಿಸುತ್ತಿದ್ದಾರೆ. ಜೊತೆಗೆ ಪತ್ರಿಕಾ ಪ್ರತಿನಿಧಿಗಳು ಇದ್ದಾರೆ. ಯಾರು ಯಾರು ನಿಂತುಕೊಂಡರು, ಏನೇನು ಮಾಡಿದರು ಎಂಬುದನ್ನು ಪತ್ರಿಕೆಗಳಲ್ಲಿ ವರದಿ ಮಾಡುತ್ತಾರೆ ಇಂಥ ಸಂದರ್ಭದಲ್ಲಿ ತಾವು ಹೇಗೆ ನಡೆದುಕೊಳ್ಳಬೇಕೆಂಬುದು ಬಹಳ ಪ್ರಾಮುಖ್ಯವಾದ ವಿಚಾರ. ಆದ ಕಾರಣ, ದಯವಿಟ್ಟು ಸಭೆಯ ಘನತೆ ಗೌರವಗಳನ್ನು ಕಾಪಾಡಿಕೊಂಡು ರೂಲ್ಸ್ ಪ್ರಕಾರ ಮಾತನಾಡಬೇಕೆಂಬುದು ನನ್ನ ಕೋರಿಕೆ. ನನಗೆ ಎರಡು ಕಡೆಯವರೂ ಒಂದೇ. ಈ ಸಭೆಯ ಗೌರವ ಕಾಪಾಡಬೇಕೆಂಬುದೇ ನನ್ನ ಉದ್ದೇಶ. ಆದ್ದರಿಂದ ಇನ್ನು ಮುಂದೆ ಯಾರೂ ಷೇಮ್ ಷೇಮ್ ಅನ್ನತಕ್ಕಂತಹ ಪದಗಳನ್ನು ಉಪಯೋಗಿಸಕೂಡದು ಮತ್ತು ಗುಂಪು ಗುಂಪಾಗಿ ನಿಂತುಕೊಳ್ಳಕೂಡದು.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಾನ್ಯ ಸಂಸದೀಯ ವ್ಯವಹಾರ ಮಂತ್ರಿಗಳಾದ ರಂಗನಾಥರವರು ಇದಕ್ಕೆ ಯಾರು ಜವಾಬ್ದಾರರು ಎಂಬ ಒಂದು ಮಾತನ್ನು ಹೇಳಿದರು. ಇದಕ್ಕೆ ಕಾಂಗ್ರೆಸ್ ಸರ್ಕಾರವೇ ಜವಾಬ್ದಾರಿ ಎಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ. ಮಾನ್ಯ ಜವಹರಲಾಲ್ ನೆಹರೂರವರಿಂದ ನಿಜಲಿಂಗಪ್ಪನವರು, ಜತ್ತಿಯವರು, ದೇವರಾಜ ಅರಸುರವರೂ ಜವಾಬ್ದಾರರು. ಇವತ್ತಿನ ದಿವಸ ಚುನಾವಣಾ ಕಾಲದಲ್ಲಿ ಅಧಿಕಾರ ಪಡೆಯುವುದಕ್ಕಾಗಿ ರೈತನ ಪರವಾಗಿ ಮಾತನಾಡುವವರು ಬಹಳ ಜನರಿದ್ದಾರೆ ಆದರೆ ನಂತರ ಅವರ ರೀತಿ ಬದಲಾಗುತ್ತದೆ. ಮಾನ್ಯ ದೇವರಾಜ ಅರಸುರವರು ಇದೇ ಸಭೆಯಲ್ಲಿ 2 ಗಂಟೆಗಳ ಕಾಲ ರೈತರಿಗೆ ವಿರೋಧವಾಗಿ ಮಾತನಾಡಿದ್ದಾರೆ. ಆ ಬಗ್ಗೆ ಸೆಲೆಕ್ಟ್ ಕಮಿಟಿಯ ರಿಪೋರ್ಟಿನಲ್ಲಿಯೂ ಸಹ ವರದಿಯಾಗಿದೆ.

**ಒಬ್ಬ ಸದಸ್ಯರು:** ಅವರು ಸತ್ಯಕ್ಕೆ ದೂರವಾದುದನ್ನು ಹೇಳುತ್ತಾರೆ.

**ಅಧ್ಯಕ್ಷರು:** ಮಾನ್ಯ ವಿರೋಧ ಪಕ್ಷದ ನಾಯಕರು ಮಾತನಾಡುತ್ತಿರುವಾಗ ಮಧ್ಯೆ ಸ್ವಿಚ್ ಹಾಕಿಕೊಂಡು ಮಾತನಾಡುವುದು ಕಾನೂನಿಗೆ ವಿರೋಧವಾಗುತ್ತದೆ. ಆದುದರಿಂದ ತಾವು ಒಂದೆರಡು ಸೆಷನ್ ನಡೆಯುವುದನ್ನು ವಾಚ್ ಮಾಡಿ ನಂತರ ಮಾತನಾಡಿ.

**ಶ್ರೀ ಎಸ್.ಆರ್.ಬೊಮ್ಮಾಯಿ:** ನಾನು ವಿರೋಧ ಪಕ್ಷದ ನಾಯಕನಾಗಿ ಜವಾಬ್ದಾರಿಯಿಂದ ಮಾತನಾಡುತ್ತಿರುವಾಗ ಅವರು ಈ ರೀತಿ ಮಾತನಾಡುವುದು ಸರಿಯಲ್ಲ. ತಮಗೆ ಬೇಕಾದರೆ ಲೈಬ್ರರಿಯಿಂದ ಆ ಪ್ರೊಸೀಡಿಂಗ್ ಅನ್ನು ಮತ್ತು ಸೆಲೆಕ್ಟ್ ಕಮಿಟಿಯ ರಿಪೋರ್ಟ್‌ನ್ನು ತಂದು ಕೊಡುತ್ತೇನೆ. ಇಲ್ಲದಿದ್ದರೆ ತಾವೇ ಹೋಗಿ ನೋಡಬಹುದು, ತಾರೀಖು ಮತ್ತು ಪುಟದ ಸಂಖ್ಯೆಯನ್ನು ಕೊಡುತ್ತೇನೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ತಾವು ಆ ಕಾಲದಲ್ಲಿ ಹೇಳಿದುದನ್ನು ಹೇಳುತ್ತೇನೆ.

**ಶ್ರೀ ಕೆ.ಹೆಚ್.ರಂಗನಾಥ್:** ಪ್ರೊಸೀಡಿಂಗ್ಸ್‌ನಲ್ಲಿ ಆ ಕಾಲದಲ್ಲಿ ಆ ರೀತಿ ಹೇಳಿದ್ದರೆ ಅದರಲ್ಲಿರುವುದನ್ನು ಯಾರು ಅಳಿಸಲಿಕ್ಕೆ ಸಾಧ್ಯ ಇಲ್ಲ. ಶ್ರೀಮಾನ್ ದೇವರಾಜ ಅರಸ್‌ರವರು ಮುಖ್ಯಮಂತ್ರಿಗಳಾದ ಕಾಲದಲ್ಲಿ ಈ ಭೂ ಶಾಸನಕ್ಕೆ ಒಂದು ತಿದ್ದುಪಡಿಯನ್ನು ಜಾರಿಗೆ ತಂದರು. ಅದನ್ನು ತಾವು ಮರೆಯಬಾರದು. ಬಾಂಬೆ ಕರ್ನಾಟಕ ಏರಿಯಾದಲ್ಲಿರತಕ್ಕಂಥಾ ಗೇಣಿದಾರರಿಗೆ ಶ್ರೀಮಾನ್ ದೇವರಾಜ ಅರಸ್‌ರವರ ಮಂತ್ರಿ ಮಂಡಲ ಬಂದ ಮೇಲೆ ಹಿಂದೆ ಅವರಿಗೆ ಹೋಗಿರತಕ್ಕಂಥಾ ಹಕ್ಕನ್ನು ಪುನಃ ದೊರಕಿಸಿಕೊಟ್ಟರು. 1958 ರಿಂದಲೇ ಅವರಿಗೆ ಹಕ್ಕು ಬರುವಂತೆ ದೊರಕಿಸಿಕೊಟ್ಟವರು ಶ್ರೀಮಾನ್ ದೇವರಾಜ ಅರಸ್‌ರವರು ಎಂದು ನಾನು ಹೇಳುತ್ತೇನೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಇವೆಲ್ಲದಕ್ಕೆ ಜವಾಬ್ದಾರಿ ಹಿಂದಿನ ಕಾಂಗ್ರೆಸ್ ಸರ್ಕಾರ ಎಂದು ಹೇಳುತ್ತೇನೆ. ಆಗ ಪಂಡಿತ್ ಜವಹರಲಾಲ್ ನೆಹರೂರವರು ಪ್ರಧಾನಮಂತ್ರಿಗಳಾಗಿದ್ದರು. ಇನ್ನು ಅನೇಕ ಜನ ಮುಖ್ಯಮಂತ್ರಿಗಳಾಗಿ ಹೋಗಿದ್ದಾರೆ. ಆಮೇಲೆ ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನ ಮಂತ್ರಿಗಳಾಗಿದ್ದರು. ಆಗ ಶ್ರೀಮಾನ್ ದೇವರಾಜ ಅರಸ್‌ರವರು ಮುಖ್ಯಮಂತ್ರಿಗಳಾಗಿದ್ದರು. ಆದುದರಿಂದ ಅದಕ್ಕೆ ಜವಾಬ್ದಾರಿ ಕಾಂಗ್ರೆಸ್ ಪಕ್ಷ ಮತ್ತು ಆ ಸರ್ಕಾರ ಎನ್ನುವುದನ್ನು ನಾನು ಈಗ ಹೇಳುತ್ತಿದ್ದೇನೆ. ಆಗ ಇದರಲ್ಲಿ ಮಂತ್ರಿಗಳು ಯಾರೇ ಆಗಿರಬಹುದು. ಇದನ್ನು ಮುಂದೂಡಲಿಕ್ಕೆ ಅವರೇ ಕಾರಣರು ಎಂದು ನಾನು ಹೇಳುತ್ತೇನೆ. 1965ರಲ್ಲಿ ಈ ಕಾಯಿದೆ ತಿದ್ದುಪಡಿ ಆಯಿತು. ನಂತರ ಅಕ್ಟೋಬರ್ 2ನೇ ತಾರೀಖು ಈ ಹೊಸ ಕಾಯಿದೆಗೆ ತಿದ್ದುಪಡಿ ಆದ ನಂತರ ಯಾರು ವಿಧವೆಯಾಗಿರುತ್ತಾರೋ ಯಾರು ಅತಿ ಬಡವರಾಗಿರುತ್ತಾರೋ ಯಾರು ಅಂಗವಿಕಲರಾಗಿರುತ್ತಾರೋ ಯಾರು ಮಿಲಿಟರಿ ಸರ್ವಿಸ್ ನಲ್ಲಿರುತ್ತಾರೋ ಯಾರು 1,200 ರೂಪಾಯಿಗಿಂತ ಕಡಿಮೆ ವರಮಾನದಲ್ಲಿರುತ್ತಾರೋ ಅಂಥವರು ರೈತನಿಂದ ಜಮೀನು ಬಿಡಿಸಿಕೊಳ್ಳತಕ್ಕಂಥಾ ಹಕ್ಕು ಇತ್ತು. ಅದರಂತೆ ಟ್ರಿಬ್ಯೂನಲ್ಸ್‌ಗಳನ್ನು ರಚನೆ ಮಾಡಿದರು. ಸಾವಿರಾರು

ಜನ ಭೂ ಮಾಲೀಕರು ತಮ್ಮ ಜಮೀನನ್ನು ಬಿಡಿಸಿಕೊಳ್ಳುವುದಕ್ಕೆ ಅರ್ಜಿಗಳನ್ನು ಹಾಕಿದರು. ಈ ಬಗ್ಗೆ ಮುನ್ಸೀಫ್ ಕೋರ್ಟಿಗೆಲ್ಲಾ ಅಧಿಕಾರ ಕೊಟ್ಟರು. ಟ್ರಿಬ್ಯೂನಲ್ಸ್‌ಗಳಿಗೆ ಹೆಚ್ಚಿನ ಮುನ್ಸೀಫ್‌ಗಳನ್ನು ನೇಮಕ ಮಾಡಿದರು. ಅದರಲ್ಲಿ 100ಕ್ಕೆ 98 ರಷ್ಟು ಅರ್ಜಿಗಳು ರೈತರ ಪರವಾಗಿ ಅಂದರೆ ಗೇಣಿದಾರರ ಪರವಾಗಿ ನಿರ್ಣಯಗಳು ಆಯಿತು. ಭೂ ಮಾಲೀಕರ ಅರ್ಜಿಗಳೆಲ್ಲಾ ಕಿತ್ತು ಹಾಕಲ್ಪಟ್ಟವು. 1965ರ ಕಾನೂನಿನ ಮೇರೆಗೆ ಭೂಮಾಲೀಕರ ಅರ್ಜಿಗಳ ವಾಯಿದೆ ಮುಗಿದ ಮೇಲೆ ಗೇಣಿದಾರರ ಭೂ ಮಾಲೀಕತ್ವ ಆಗುವುದಕ್ಕೆ ಸರ್ಕಾರದ ಕ್ರಮ ಕೈಗೊಳ್ಳಬೇಕಾಗಿತ್ತು. ಅಷ್ಟರಲ್ಲೇ ಆವೊತ್ತಿನ ದಿವಸ ರಾಜಕೀಯ ಬದಲಾವಣೆ ಆಯಿತು. ನಂತರ 1972ರಲ್ಲಿ ಚುನಾವಣೆ ಆಯಿತು. ಶ್ರೀಮಾನ್ ದೇವರಾಜ್ ಅರಸ್‌ರವರ ಸರ್ಕಾರ ಬಂತು. ಮಾನ್ಯ ಕೆ.ಹೆಚ್. ರಂಗನಾಥ್‌ರವರೇ ಆಗಲೀ ಶ್ರೀಮಾನ್ ದೇವರಾಜ ಅರಸುರವರೇ ಆಗಲಿ ಅವರ ಮಂತ್ರಿಮಂಡಲ ಈ ಗೇಣಿದಾರರ ಬಗ್ಗೆ ಪ್ರಗತಿಪರವಾದ ಕಾನೂನು ಮಾಡಿದ್ದರೂ ಕೂಡ ಆ ಗೇಣಿದಾರರಿಗೆ ಈ ಭೂ ಮಾಲೀಕತ್ವವನ್ನು ಕೊಟ್ಟಿದ್ದಾರೆಯೇ ಎಂದು ನಾನು ಕೇಳುತ್ತೇನೆ. ನಾನು ಈ ಬಗ್ಗೆ ಒಂದು ಪುಸ್ತಕವನ್ನು ತಂದಿದ್ದೇನೆ. ಅದನ್ನು ನೋಡಿದರೆ ಸಾಕು ಗೊತ್ತಾಗುತ್ತದೆ. ನಾನು ಒಬ್ಬ ಸಾದಾ ವಕೀಲ ನಾನು ಆ ಜಾಯಿಂಟ್ ಸೆಲೆಕ್ಟ್ ಕಮಿಟಿಯಲ್ಲಿ ಇದ್ದ 14–1–1974 ರಿಂದ ಗೇಣಿದಾರರು ಸಾಗು ಮಾಡತಕ್ಕಂಥಾ ಜಮೀನೆಲ್ಲಾ ಸರ್ಕಾರದ ಒಡೆತನದಲ್ಲಿದೆ. ಸೆಕ್ಷನ್ 44ರ ಪ್ರಕಾರ ರೈತ ಸರ್ಕಾರಕ್ಕೆ ಗೇಣಿ ಕೊಡಬೇಕು. ಭೂ ಒಡೆಯರಿಗೆ ಗೇಣಿ ಇಲ್ಲ. ಅವರಿಗೆ ಕೊಡಬೇಕಾದ ಕಾಂಪೆನ್‌ಸೇಷನ್ ಅನ್ನು ಸರ್ಕಾರ ಕೊಟ್ಟಾಗ ತೆಗೆದುಕೊಳ್ಳಬೇಕು. ಈ ಕಾಯಿದೆ ಬಂದು 3 ವರ್ಷ ಮೇಲಾಯಿತು. ಇದರಿಂದ ಈವೊತ್ತಿನ ದಿವಸ ಭೂ ಒಡೆಯರಿಗೆ ಗೇಣಿ ಇಲ್ಲದಂತಾಗಿದೆ. ಈ ಮಾತನ್ನು ಹೇಳಿದ ಮಾತ್ರಕ್ಕೆ ನಾನು ಭೂ ಒಡೆಯರ ಪರವಾಗಿ ಮಾತನಾಡುತ್ತಾ ಇಲ್ಲ. ಸಾವಿರಾರು ಎಕರೆ ನೂರಾರು ಎಕರೆ ಜಮೀನು ಇರತಕ್ಕಂಥ ಭೂ ಮಾಲೀಕರ ಪರವಾಗಿ ಹೇಳುತ್ತಾ ಇಲ್ಲ. ಅನೇಕ ಜನ ಸಣ್ಣ ಭೂ ಮಾಲೀಕರು ಬಹಳ ತೊಂದರೆಗಳಿಗೆ ಒಳಗಾಗಿದ್ದಾರೆ. 4 ಎಕರೆ 10 ಎಕರೆ 15 ಎಕರೆ ಇಟ್ಟುಕೊಂಡಿರತಕ್ಕಂಥಾ ಕಡು ಬಡವರು, ಸಿಪಾಯಿ ವರ್ಗಕ್ಕೆ ಸೇರಿದವರು ಇದರಿಂದ ಬಹಳ ತೊಂದರೆಗೆ ಒಳಗಾಗಿದ್ದಾರೆ. ಉದಾಹರಣೆಗೆ ತಮಗೆ ಹೇಳಬೇಕಾದರೆ ನಮ್ಮ ತಾಲ್ಲೂಕಿನಲ್ಲಿ 5 ಎಕರೆ 10 ಎಕರೆ ಇಟ್ಟುಕೊಂಡಿರತಕ್ಕಂಥಾ ಹರಿಜನರು ತಮ್ಮ ಗೃಹಕೃತ್ಯದ ತೊಂದರೆಗಾಗಿ ದೊಡ್ಡ ದೊಡ್ಡ ಜಮೀನ್ದಾರರಿಗೆ ಸಾಗುವಳಿ ಮಾಡಲಿಕ್ಕೆ ಕೊಟ್ಟಿದ್ದಾರೆ. ಈ ವಿಚಾರವನ್ನು ನಾನು ಆಗಿನ ಕಂದಾಯ ಮಂತ್ರಿಗಳಿಗೆ ಹೇಳಿದ್ದೆ. ದೊಡ್ಡ ದೊಡ್ಡ ಜಮೀನ್ದಾರರು ಯಾವ ಹರಿಜನರಿಂದ 45 ಎಕರೆ

ಭೂಮಿಯನ್ನು ತೆಗೆದುಕೊಂಡು ಸಾಗುವಳಿ ಮಾಡುತ್ತಿದ್ದಾರೋ ಅವರು ಆತನ ಜಮೀನನ್ನು ಬಿಡಲಿಕ್ಕೆ ತಯಾರಾಗಿದ್ದಾರೆ. ಅವರು ಆ ರೈತನಿಗೆ ಆ ಜಮೀನನ್ನು ಬಿಡಲಿಕ್ಕೆ ಒಪ್ಪಿದ್ದಾರೆ. ಅದಕ್ಕೆ ಒಂದು ಅಮೆಂಡ್‌ಮೆಂಟ್ ತನ್ನಿ ಎಂದು ಆಗಿನ ಕಂದಾಯ ಮಂತ್ರಿಗಳಿಗೆ ಹೇಳಿದರೂ ಕೂಡ ಅದಕ್ಕೆ ಸರ್ಕಾರ ಯಾವ ಒಂದು ಅಮೆಂಡ್‌ಮೆಂಟನ್ನು ತರಲಿಲ್ಲ. ಆ ಕಾಯಿದೆಯ ಉದ್ದೇಶ ಏನಾಗಿದೆ ಎಂದರೆ ಯಾರು ಚಿಕ್ಕ ಚಿಕ್ಕ ಭೂಮಿಯನ್ನು ಹೊಂದಿದ್ದರೋ ಅವರಿಗೆ ಭೂಮಿ ಇಲ್ಲದಂತೆ ಮಾಡಿದ್ದೀರಿ ಇದು ಮೊದಲನೆಯದು.

ಇನ್ನು ಎರಡನೆಯದಾಗಿ ಈ ಕಾನೂನಿನಿಂದ ಯಾರು ಗೇಣಿ ಒಡೆಯನಾಗಲಿಲ್ಲಾ. ನಾನು ಈ ಬಗ್ಗೆ ಈಗಾಗಲೇ ಹೇಳಿದ ಹಾಗೆ ಈ ಭೂಮಿಯ ಒಡೆಯ ಯಾರು ಎಂದರೆ ಸರ್ಕಾರವೇ. ಈತ ಗೇಣಿಯನ್ನು ಸರ್ಕಾರಕ್ಕೆ ಕೊಡಬೇಕು. ಈವೊತ್ತು ನಾನು ಈ ಮಾತನ್ನು ಏತಕ್ಕೆ ಹೇಳುತ್ತಿದ್ದೇನೆ ಎಂದರೆ ಎಲ್ಲಾ ಜಮೀನ್ದಾರರನ್ನು ಕೊಲೆ ಮಾಡಿ ಆ ಸ್ಥಾನದಲ್ಲಿ ಸರ್ಕಾರ ಬಂದಿದೆ. ಆ ಸ್ಥಾನದಲ್ಲಿ ಕುಳಿತಿದೆ. ಏಕೆಂದರೆ 44ನೇ ಸೆಕ್ಷನ್ ಪ್ರಕಾರ ರೆಂಟ್ ಅದಕ್ಕೆ ಇಷ್ಟು ಅಂತ ಒಂದು ರೇಟ್ ಇಟ್ಟಿದ್ದಾರೆ. ಅದಕ್ಕೆ ಒಂದು ಅಮೆಂಡ್‌ಮೆಂಟ್ ತನ್ನಿ ಎಂದರೆ ಇದುವರೆಗೂ ತರಲಿಲ್ಲ. ಆದುದರಿಂದ ಗೇಣಿದಾರರು ಇದುವರೆಗೆ ಒಡೆಯನಾಗುವುದಕ್ಕೆ ಆಗಲಿಲ್ಲಾ. ಮತ್ತು ರೆಕಾರ್ಡ್ ಆಫ್ ರೈಟ್ಸ್‌ನಲ್ಲಿ ಹೆಸರು ಯಾರದ್ದು ಇದೆ ಎಂದರೆ ಸರ್ಕಾರದ್ದು ಇದೆ. ರೈತನದ್ದು ಇಲ್ಲ ಹೀಗಿದ್ದರೆ ರೈತ ಹೇಗೆ ಒಡೆಯನಾಗುತ್ತಾನೆ. ಇದು ಒಂದು ಅಸ್ಪೆಕ್ಟ್. ಇದು ಲ್ಯಾಂಡ್ ಟ್ರಿಬ್ಯೂನಲ್‌ನ ಕಾಯಿದೆಗೆ ಅನುಗುಣವಾಗಿ ಬಂತೇ? ಯಾವ ರಾಜ್ಯದಲ್ಲೂ ಈ ರೀತಿ ಇಲ್ಲ.

**ಶ್ರೀ ಕೆ.ಹೆಚ್. ರಂಗನಾಥ್** ವೆಸ್ಟ್ ಆಗಬೇಕು ಎನ್ನುವುದು ಸರಿಯಾದ ಕಾನೂನು ಹೌದೆ ಅಲ್ಲವೇ?

**ಶ್ರೀ ಎಸ್.ಆರ್. ಬೊಮ್ಮಾಯಿ:** ಅದು ಟೆನೆಂಟ್ಸ್‌ನಲ್ಲಿ ವೆಸ್ಟ್ ಆಗಬೇಕಾಗಿತ್ತು. ಅದು ಪ್ರಗತಿಪರವಾದ ವಿಚಾರ. ಸರ್ಕಾರದಲ್ಲಿ ಅಲ್ಲ ಇವತ್ತು ಸರ್ಕಾರ ಒಡೆಯ ಆಗಿದೆ. ರೈತ ಒಡೆಯನಾಗಿಲ್ಲ. ಗೇಣಿದಾರ ಒಡೆಯನಾಗಿಲ್ಲ. ಇದು ಪ್ರಗತಿಪರವಾದ ವಿಚಾರವಲ್ಲ. ಪ್ರಗತಿಗೆ ವಿರೋಧವಾದುದು. ಮಾನ್ಯ ಮಂತ್ರಿಗಳಲ್ಲಿ ಒಂದು ಮಾತು ಹೇಳುತ್ತೇನೆ. ತಮ್ಮಲ್ಲಿ ಮನಸ್ಸು ಇದ್ದರೆ ಕೂಡಲೇ ಈ ಕಾನೂನಿಗೆ ತಿದ್ದುಪಡಿ ತೆಗೆದುಕೊಂಡು ಬನ್ನಿ, ಗೇಣಿದಾರರು ಒಡೆಯರಾಗಬೇಕೆಂದು ಸಂಪೂರ್ಣವಾದ ಬೆಂಬಲವನ್ನು ಕೊಡುತ್ತೇನೆ. ಸ್ವಾಮಿ ಭೂ ನ್ಯಾಯ ಮಂಡಳಿಗಳ ಬಗ್ಗೆ ಈ ಸಭೆಯಲ್ಲಿ ಬಹಳ ಸಾರಿ ಚರ್ಚೆ ಮಾಡಿದ್ದೇವೆ. ಮಾನ್ಯ ದೇವೇಗೌಡರು ಕೂಡ

ಚರ್ಚೆ ಮಾಡಿದ್ದಾರೆ. ಭೂ ನ್ಯಾಯ ಮಂಡಳಿಗಳು ನಡೆಸತಕ್ಕ ವಿಚಾರಣೆ ಬಗ್ಗೆ ಭ್ರಷ್ಟಾಚಾರದ ಬಗ್ಗೆ ಕೆಳಮನೆಯಲ್ಲಿ ಇಲ್ಲಿ ಚರ್ಚೆ ಮಾಡಿದ್ದೇವೆ. ಈ ಸರ್ಕಾರ ಹಿಂದೆ ಭರವಸೆಕೊಟ್ಟಿದೆ. ಟ್ರಿಬ್ಯೂನಲ್ಲಿರತಕ್ಕ ಭ್ರಷ್ಟಾಚಾರದ ಬಗ್ಗೆ ವಿಚಾರಣೆ ಮಾಡಲು ಲ್ಯಾಂಡ್ ಕಮಿಷನರ್ ಆಗಿದ್ದ ಬಾಲಸುಬ್ರಮಣ್ಯಂ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಿಸುತ್ತೇವೆಂದು ಆಶ್ವಾಸನೆ ಕೊಟ್ಟರು. ಆಶ್ವಾಸನೆ ಆಶ್ವಾಸನೆಯಾಗಿಯೇ ಉಳಿದಿದೆ. ರಾಜ್ಯಪಾಲರ ಭಾಷಣದಲ್ಲಿ ಅಂಕಿ ಸಂಖ್ಯೆಗಳನ್ನು ಒದಗಿಸಿದ್ದಾರೆ. ನಾಲ್ಕನೇ ಒಂದು ಭಾಗ ಅರ್ಜಿಗಳು ಇನ್ನೂ ತೀರ್ಮಾನವಾಗಿಲ್ಲ. ಏಕೆ ಸರ್ಕಾರ ಈ ರೀತಿ ಮುಂದಕ್ಕೆ ಹಾಕುತ್ತಿದೆ? ಈ ಸದನಕ್ಕೆ ಕೈ ಮುಗಿದು ಕೇಳಿಕೊಳ್ಳುತ್ತೇನೆ. ಆ ಕಡೆಯವರು ಈ ಕಡೆಯವರು ಇತರಕ್ಕ ಈ ಸದನದಲ್ಲಿ ಒಂದು ಸಮಿತಿಯನ್ನು ಮಾಡಿ ಯಾವುದಾದರೂ ಒಂದು ಹಳ್ಳಿಗೆ ಸರ್‌ಪ್ರೈಸ್ ಭೇಟಿ ಕೊಟ್ಟು 100 ಜನ ಗೇಣಿದಾರರನ್ನು ಕೇಳೋಣ, ಭೂನ್ಯಾಯ ಮಂಡಲಿಗಳಿಗೆ ಓಡಾಡಿ ಅವನಿಗೆ ಎಷ್ಟು ಖರ್ಚು ಬಂದಿದೆ. ಗೇಣಿದಾರರ ಪರವಾಗಿ ಎಷ್ಟು ನಿರ್ಣಯಗಳು ಆಗಿವೆ, ವಿರುದ್ಧವಾಗಿ ಎಷ್ಟು ಖರ್ಚು ಬಂದಿದೆ. ಗೇಣಿದಾರರಿಗೂ ಭೂ ಮಾಲೀಕರಿಗೂ ಒಪ್ಪಿಗೆ ಇರುವ ಕಡೆ ಹೋಗೋದು ಬೇಡ. ನಮ್ಮ ಭಾಗದಲ್ಲಿ ರೆಕಾರ್ಡ್ಸ್ ಆಫ್ ರೈಟ್ಸ್ ಕ್ಲಿಯರ್ ಆಗಿದೆ. 100 ವರ್ಷದಿಂದಲಾದರೂ ಯಾವ ಗೇಣಿದಾರ ಏನು ಎಂದು ಇದೆ. ಡಿಸ್‌ಪ್ಯೂಟೆಡ್ ಕೇಸಸ್ ಎಷ್ಟು ಗೇಣಿದಾರರ ಪರವಾಗಿ ಆಗಿವೆ. ಭೂಮಾಲೀಕರ ಪರವಾಗಿ ಎಷ್ಟು ತೀರ್ಮಾನವಾಗಿವೆ, ಭೋಗಸ್ ಎಷ್ಟು ಆಗಿವೆ ಎನ್ನುವುದನ್ನು ತಿಳಿದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ, ಒಂದು ಸಮಿತಿ ಮಾಡಿ. ನನ್ನ ಜಿಲ್ಲೆ ಮಟ್ಟಿಗೆ ಅಂಕಿಸಂಖ್ಯೆಗಳನ್ನು ಕಲೆಕ್ಟ್ ಮಾಡಿದ್ದೇನೆ. ಹೆಚ್ಚಿನ ಕೇಸುಗಳು ಭೂಒಡೆಯರ ಪರವಾಗಿ ಆಗಿವೆ. ನಾನೇ ಒಂದು ವಿಷಯವನ್ನು ಕೌನ್ಸಿಲ್‌ನಲ್ಲಿ ಮಾನ್ಯ ಕಂದಾಯ ಮಂತ್ರಿಗಳೊಂದಿಗೆ ಪ್ರಸ್ತಾಪ ಮಾಡಿದ್ದೆ. ಸಾವಿರಾರು ಎಕರೆ ಇರತಕ್ಕ ಭೂ ಮಾಲೀಕ 100 ಎಕರೆ ಜಮೀನನ್ನು ಪರ್ಸನಲ್ ಕಲ್ಟಿವೇಶನ್ ಎಂದು ಬೋಗಸ್ ಟೆನೆಂಟ್ಸ್ ಎಂದು ಸೃಷ್ಟಿ ಮಾಡಿ ಭೂ ನ್ಯಾಯ ಮಂಡಳಿಯಲ್ಲಿ ತೀರ್ಮಾನವಾಗಿದೆ. ಅವರು ಡೆಪ್ಯೂಟಿ ಕಮಿಷನರ್‌ರವರಿಗೆ ಅರ್ಜಿ ಮಾಡಿದ್ದಾರೆ. ಅದರ ಮೇಲೆ ಡೆಪ್ಯುಟಿ ಕಮಿಷನರ್‌ರವರು ಸ್ಪೆಷಲ್ ರಿಪೋರ್ಟ್ ಮಾಡಿದ್ದಾರೆ. ಈ ಬಗ್ಗೆ ಸರ್ಕಾರ ಕೂಡಾ ರಿಟ್ ಹೋಗಿತ್ತು. ಸರ್ಕಾರದ ರಿಟ್ ಗ್ರೌಂಡ್ಸ್ ನೋಡಿದ್ದೇನೆ, ಅದು ಅಡ್ಮಿಟ್ ಆಗಿಲ್ಲ. ಡೆಪ್ಯುಟಿ ಕಮಿಷನರ್‌ರವರು 57ರಲ್ಲಿ ಡಿಕ್ಲೇರೇಷನ್ ಕೊಟ್ಟಿದ್ದಾರೆ. 197374ರವರೆಗೆ ಎಂಟ್ರಿ ಸರಿಯಾಗಿದೆ. ಆ ಮೇಲೆ ಎಂಟ್ರಿ ಚೇಂಜ್ ಆಗಿದೆ. ನಾನು ಇದನ್ನು ಉದಾಹರಣೆಯಾಗಿ ಕೊಡುತ್ತಿದ್ದೇನೆ.

ನಾನು ಮನಸ್ಸು ನೊಂದು ಹೇಳುತ್ತಿದ್ದೇನೆ. 100 ಎಕರೆ ಜಮೀನು ಕನಿಷ್ಠ 10 ಲಕ್ಷ ರೂಪಾಯಿ ಬೆಲೆ ಬಾಳುತ್ತದೆ, ಇದು ಹರಿಜನರಿಗೆ ಸಲ್ಲತಕ್ಕ ಜಮೀನು. ನಾನು ವೈಯಕ್ತಿಕವಾಗಿ ಟೀಕೆ ಮಾಡುವುದಿಲ್ಲ, ಭೂ ನ್ಯಾಯ ಮಂಡಳಿಗಳಲ್ಲಿ ಒಳ್ಳೆಯವರು ಇದ್ದಾರೆ. ಭೂ ನ್ಯಾಯ ಮಂಡಳಿಗಳಿಗೆ ರೈತ ಓಡಾಡಿ ಕಂಗಾಲಾಗಿ ಹಣ ಕಳೆದುಕೊಂಡು ಅವನು ಜಮೀನು ಕೊಂಡಿದ್ದಕ್ಕಿಂತ ಹೆಚ್ಚಿನ ದುಡ್ಡು ಖರ್ಚು ಮಾಡಿದ್ದಾನೆ. ಭೂ ನ್ಯಾಯ ಮಂಡಳಿಗಳಿಂದ ರೈತನಿಗೆ ಒಳ್ಳೆಯದಾಗಿಲ್ಲ ನಾನು ಈ ಪಕ್ಷದ ದೃಷ್ಟಿಯಿಂದ ಹೇಳುತ್ತಿಲ್ಲ, ರೈತನ ಪರವಾಗಿ ಹೇಳುತ್ತಿದ್ದೇನೆ. ಸುಪ್ರೀಂಕೋರ್ಟ್‌ವರೆಗೆ ರೈತನ ಕೇಸುಗಳನ್ನು ಹಣ ತೆಗೆದುಕೊಳ್ಳದೆ ತೆಗೆದುಕೊಂಡು ಹೋಗಿದ್ದೇನೆ. ಇದೇ ರೀತಿ ಹೋದರೆ ಟ್ರಿಬ್ಯೂನಲ್‌ನಲ್ಲಿ ಬೇಗ ನಿರ್ಣಯಗಳು ಆಗುವುದಿಲ್ಲ. ಶಾಸಕರು ಅನುಕೂಲವಾದಾಗ ಭೂ ನ್ಯಾಯ ಮಂಡಳಿಗಳಲ್ಲಿ ಭಾಗಿಯಾಗುತ್ತಾರೆ ಇಲ್ಲದೆ ಹೋದರೆ ಆಬ್‌ಸೆಂಟ್. ಒಂದೊಂದು ಪ್ರಕರಣಗಳಿಗೂ ಎಷ್ಟೆಷ್ಟು ಹಣ ತೆಗೆದುಕೊಂಡಿದ್ದಾರೆಂಬುದನ್ನು ಆಲೋಚನೆ ಮಾಡಿ ಕೊಟ್ಟ ವಚನದ ಪ್ರಕಾರ ವಿಚಾರಣೆ ಮಾಡಿಸಿ. ಒಂದೇ ಮಾತಿನಲ್ಲಿ ಹೇಳುವುದಾದರೆ ಭೂ ಹಿಡುವಳಿ ಟೆನೆಂಟ್ಸ್ ಆಕ್ಟ್ ಏನು ಇದೆ ಇದು ಪ್ರಗತಿಪರವಾಗಿಲ್ಲ, ಇದರಿಂದ ರೈತನಿಗೆ ಸಹಾಯಕವಾಗುವ ಬದಲಿಗೆ ಕಷ್ಟವಾಗಿದೆ. ರೈತ ಒಡೆಯನಾಗುವುದನ್ನು ಸರ್ಕಾರದವರು ಮುಂದೂಡಿದ್ದಾರೆ. ಇವತ್ತು ಗೇಣಿದಾರ ಹಾಗೂ ರೈತ ಹಣವನ್ನು ಕಳೆದುಕೊಂಡಿದ್ದಾರೆ. ಬಹುತೇಕ ಜನ ಭ್ರಷ್ಟಾಚಾರಿಗಳು ಈ ಟ್ರಿಬ್ಯೂನಲ್‌ಗಳಲ್ಲಿ ಇದ್ದಾರೆ. ನಾನು ಸರ್ಕಾರಕ್ಕೆ ಕೇಳಿಕೊಳ್ಳುವುದೇನೆಂದರೆ, ಹೊಸದಾಗಿ ಭೂ ನ್ಯಾಯಮಂಡಳಿಗಳನ್ನು ರಚನೆ ಮಾಡುವಾಗ ಒಳ್ಳೆಯ ಜನರನ್ನು ನೇಮಿಸಿ. ಹೊಸದಾಗಿ ರಚನೆ ಮಾಡುವುದಕ್ಕೆ ನನ್ನ ವಿರೋಧವಿಲ್ಲ. ಆದರೆ ಒಳ್ಳೆಯ ಚಾರಿತ್ರ್ಯವಂತರನ್ನು, ರೈತನ ಬಗ್ಗೆ ಒಳ್ಳೆಯ ಅಭಿಮಾನ ಇರುವವರನ್ನು ನೀತಿವಂತರನ್ನು ನೇಮಿಸಿ. ಎಂ.ಎಲ್.ಎ. ಆದವರು ಹೇಳಿದರೆಂದು ಯಾರು ಯಾರನ್ನೂ ನೇಮಿಸಬೇಡಿ, ನಾವು ಸಹ ಈ ಬಗ್ಗೆ ಎಚ್ಚರಿಕೆಯಿಂದ ಕೆಲಸ ಮಾಡಬೇಕಾಗಿದೆ. ರೈತರ ಪರವಾಗಿ ಹೋರಾಟ ಮಾಡುವವರ ಹೆಸರನ್ನು ನಾವು ಹೇಳಬೇಕಾಗಿದೆ. ಅದನ್ನು ಬಿಟ್ಟು ಯಾರೋ ನಮಗೆ ಚುನಾವಣೆಯ ಸಮಯದಲ್ಲಿ ನಮಗೆ ಧಕ್ಕೆ ಬರುತ್ತದೆಂದುಕೊಂಡು ಅಂತಹವರ ಹೆಸರನ್ನೆಲ್ಲಾ ಕೊಡುವುದು ಮತ್ತು ಅವರುಗಳನ್ನು ನೇಮಕ ಮಾಡುವುದು ಸರಿಯಲ್ಲ. ಈ ಬಗ್ಗೆ ಸರ್ಕಾರಕ್ಕೆ ಸಹಾಯ ಮಾಡುವಂತಹ ಜವಾಬ್ದಾರಿ ನಮ್ಮ ಮೇಲೆ ಸಹ ಇದೆ. ಒಟ್ಟಿನಲ್ಲಿ ನಾನು ಹೇಳುವುದಿಷ್ಟೆ, ಈಗಿರುವಂತಹ ಅರ್ಜಿಗಳನ್ನೆಲ್ಲಾ ಮುಂದಿನ ವರ್ಷದಲ್ಲಿ ಅಂದರೆ ಇನ್ನು ಒಂದು ವರ್ಷದಲ್ಲಿ ಇತ್ಯರ್ಥ ಮಾಡಿ ಎಲ್ಲಾ ಗೇಣಿದಾರರೂ ಭೂ ಒಡೆಯರಾಗುವಂತೆ ವ್ಯವಸ್ಥೆ ಮಾಡಿ. ಈ ಭೂ ನ್ಯಾಯ ಮಂಡಲಿಗಳಲ್ಲಿ ಕೆಲಸ ಮಾಡಲು ಶಾಸಕರಿಗೆ ಸಾಧ್ಯವಾಗದಿದ್ದರೆ

ಬೇರೆ ಒಳ್ಳೆಯ ಜನರನ್ನು ನೇಮಕ ಮಾಡಿ. ಈ ಗೇಣಿದಾರರ ಬಗ್ಗೆ ಹಿತಚಿಂತನೆ ನಿಮಗೆ ಎಷ್ಟು ಕಳಕಳಿ ಇದೆಯೋ ಅಷ್ಟೇ ಒಂದು ಕಳಕಳಿ ನಮಗೂ ಸಹ ಇದೆ.

**ಶ್ರೀ ಕೆ.ಎಚ್. ರಂಗನಾಥ್:** ಶಾಸಕರು ಸಭೆಗೆ ಹೋಗದಿದ್ದರೆ ಸಭೆಯನ್ನು ಮುಂದಕ್ಕೆ ಹಾಕುತ್ತೇನೆಂಬುದಾಗಿ ಶಾಸನದಲ್ಲಿ ಎಲ್ಲಿಯೂ ಹೇಳಿಲ್ಲ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಕೋರಂ ಇಲ್ಲದಿದ್ದರೆ ಸಭೆಯನ್ನು ಮುಂದಕ್ಕೆ ಹಾಕಬೇಕಾಗುತ್ತದೆ.

**ಶ್ರೀ ಕೆ.ಎಚ್. ರಂಗನಾಥ್:** ಎಲ್ಲರೂ ಆ ರೀತಿ ಮಾಡುತ್ತಾರೆಯೇ?

**ಶ್ರೀ ಎಸ್.ಆರ್. ಬೊಮ್ಮಾಯಿ:** ಎಲ್ಲರೂ ಎಂದು ನಾನು ಹೇಳುವುದಿಲ್ಲ. ಕೆಲವು ಕಡೆಗಳಲ್ಲಿ ಆ ರೀತಿ ನಡೆದಿದೆ. ತಾವು ವಿವರಗಳನ್ನು ತರಿಸಿ ನೋಡಿದರೆ ತಿಳಿಯುತ್ತದೆ. ಒಟ್ಟಿನಲ್ಲಿ ನಾನು ಹೇಳುವುದಿಷ್ಟೆ, ಇನ್ನು ವರ್ಷದೊಳಗಾಗಿ ಈ ಗೇಣಿದಾರರೆಲ್ಲರೂ ಭೂ ಒಡೆಯರಾಗುವಂತೆ ವ್ಯವಸ್ಥೆ ಮಾಡಿ. ಅದಕ್ಕೂ ಮೊದಲು ಈ ಗೇಣಿದಾರರೆಲ್ಲರೂ ಭೂ ಒಡೆಯರೆಂದು ಒಂದು ಕಾಯಿದೆ ಮಾಡಿ. ಇನ್ನು ಈ ಭೂ ಮಾಲೀಕರಿಗೆ ಪರಿಹಾರ ಕೊಡುವಂತಹ ಹಣದ ಮೊತ್ತ 30 ಕೋಟಿ ರೂ. ಗಳಾಗಬಹುದು. ಇಷ್ಟು ಹಣವನ್ನು ಸರ್ಕಾರದವರೇ ಏತಕ್ಕೆ ಕೊಡಬಾರದು? ಎನ್.ಜಿ.ಓ. ಗಳಿಗೆ ಇಂಕ್ರಿಮೆಂಟ್ ಕೊಡುವಾಗ ಹಿಂದೂ ಮುಂದೂ ನೋಡದೆ ಕೊಡುತ್ತೀರಿ. ಅದರಂತೆ ಇವರಿಗೂ ಸಹ ಏತಕ್ಕೆ ಕೊಡಬಾರದು?

**ಶ್ರೀ ಕೆ.ಎಚ್. ರಂಗನಾಥ್:** ಒಂಭತ್ತು ಸಲ ಸರ್ಕಾರದ ನೌಕರರ ಡಿ.ಎ.ಜಾಸ್ತಿ ಮಾಡಿದ್ದು ಮತ್ತು ನಾರಾಯಣ ಪೈ ಕಮಿಷನ್ ರಿಪೋರ್ಟನ್ನು ಜಾರಿಗೆ ತಂದಿದ್ದರಿಂದ ಸರ್ಕಾರಕ್ಕೆ 70 ಕೋಟಿ ರೂಪಾಯಿಗಳಷ್ಟು ಖರ್ಚು ಬಂದಿದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಆದ ಕಾರಣ ಈ 30 ಕೋಟಿ ರೂಪಾಯಿಗಳು ಅಷ್ಟೇನು ದೊಡ್ಡ ಮೊತ್ತವಲ್ಲ. ಇಷ್ಟು ಹಣವನ್ನು ಮೊದಲು ಸರ್ಕಾರದಿಂದ ಕೊಟ್ಟು ನಂತರ ರೈತರಿಂದ ಹಂತ ಹಂತವಾಗಿ ವಸೂಲಿ ಮಾಡೋಣ. ಈ ರೀತಿ ಮಾಡದಿದ್ದರೆ, ರೈತನಾದವನು ಮೊದಲು ಲ್ಯಾಂಡ್ ಡೆವಲಪ್‌ಮೆಂಟ್ ಆಗುತ್ತದೆ. ತಾವು ಈ ಮೊದಲು ಸಹಕಾರ ಮಂತ್ರಿಗಳಾಗಿದ್ದರಿಂದ ಇದು ತಮಗೂ ಸಹ ಗೊತ್ತಿದೆ.

**ಶ್ರೀ ಕೆ.ಎಚ್. ರಂಗನಾಥ್:** ಸರ್ಕಾರದ ಬೊಕ್ಕಸದಿಂದ ತಾವು ಕೇಳುತ್ತೀರಾ?

**ಶ್ರೀ ಎಸ್.ಆರ್. ಬೊಮ್ಮಾಯಿ:** ಹೌದು, ಸರ್ಕಾರದ ಬೊಕ್ಕಸದಿಂದ ಕೊಟ್ಟ ನಂತರ ಅವರಿಂದ ಹಂತ ಹಂತವಾಗಿ ವಸೂಲಿ ಮಾಡಬೇಕು. ನಮ್ಮ ದೇಶದ

ಜನರಿಗೆ ಆಹಾರ ಧಾನ್ಯ ಬೆಳೆಯತಕ್ಕಂತ ರೈತರ ವಿಚಾರದಲ್ಲಿ ಈ 30 ಕೋಟಿ ರೂಪಾಯಿಗಳನ್ನು ಕೊಡಲು ಹಿಂದೆ ಮುಂದೆ ನೋಡಬಾರದು. ಇದೊಂದು ದೊಡ್ಡ ಉಪಕಾರವಲ್ಲವೇ? ಈ ಚಿಕ್ಕ ಭೂ ಮಾಲೀಕರಿಗೆ ಜಾಗ್ರತೆ ಪರಿಹಾರ ಕೊಡಿ, ಶ್ರೀಮಂತರಿಗೆ ಬೇಕಾದರೆ ತಡವಾಗಿ ಕೊಡಿ. ಇದನ್ನು ಬಿಟ್ಟು ರೈತರು ಸಾಲಮಾಡುವುದಕ್ಕೆ ವ್ಯವಸ್ಥೆ ಮಾಡಿದರೆ, ಅವರು ಆ ಭೂಮಿಯನ್ನು ಯಾವಾಗ ಸುಧಾರಣೆ ಮಾಡಬೇಕು? ಈಗಿನ ಕಾಯಿದೆಯಲ್ಲಿ ಒಂದೇ ಕಂತಿನಲ್ಲಿ ಹಣ ಕೊಡುವುದಕ್ಕೆ ಅವಕಾಶವಿಲ್ಲ. ಅದಕ್ಕೂ ಸಹ ಅವಕಾಶ ಮಾಡಿಕೊಟ್ಟು ರೈತನನ್ನು ಭೂ ಒಡೆಯನನ್ನಾಗಿ ಮಾಡಿ. ಈ 25–30 ಕೋಟಿ ರೂಪಾಯಿಗಳು ಸರ್ಕಾರಕ್ಕೆ ದೊಡ್ಡ ಮೊತ್ತವೇನಲ್ಲ? ದೊಡ್ಡ ದೊಡ್ಡ ಡ್ಯಾಮ್‌ಗಳನ್ನು ಕಟ್ಟಿಸುವಾಗ ಎಷ್ಟೋ ಹಣ ಸೋರಿಹೋಗುತ್ತಿರುತ್ತದೆ. ಅದನ್ನು ನಿಲ್ಲಿಸಿದರೆ ಮತ್ತು ಎಕ್ಸೈಜ್ ಬಾಬಿನಿಂದ ಸರ್ಕಾರಕ್ಕೆ ಸರಿಯಾಗಿ ಹಣ ಬರದೆ ಸೋರಿ ಹೋಗುತ್ತಿರುವುದನ್ನು ನಿಲ್ಲಿಸಿದರೆ ಸಾಕು. ಆಗ ಈ ಜಾಬಿಗೆ 25–30 ಕೋಟಿ ರೂಪಾಯಿಗಳನ್ನು ಒದಗಿಸುವುದೇನೂ ದೊಡ್ಡ ಕೆಲಸವಾಗುವುದಿಲ್ಲ. ಈಗಿನದ್ದು ಪ್ರಗತಿಪರವಾದಂಥ ಆಕ್ಟ್ ಅಲ್ಲ. ಇದು ಒಂದು ಪ್ರಗತಿಪರವಾದಂಥ ಆಕ್ಟ್ ಆಗಬೇಕಾದರೆ ಮೊದಲು ಈ ಗೇಣಿದಾರರನ್ನು ಭೂ ಒಡೆಯರನ್ನಾಗಿ ಮಾಡಿ. ಮತ್ತು ಸರ್ಕಾರದ ಬೊಕ್ಕಸದಿಂದ ಹಣ ಕೊಡಿ, ಜೊತೆಗೆ ಜಮೀನನ್ನು ಸುಧಾರಣೆ ಮಾಡಲು ಸಹಾಯ ಮಾಡಿ. ಮತ್ತೊಂದು ಮುಖ್ಯವಾದ ಅಂಶವೆಂದರೆ, ಗೇಣಿದಾರರ ಪೈಕಿ ಯಾರು ಹರಿಜನ ಮತ್ತು ಗಿರಿಜನರಿದ್ದಾರೆ, ಯಾರು ಕಡುಬಡವರಿದ್ದಾರೆ ಅಂತಹವರಿಗೆ ದೊಡ್ಡ ದೊಡ್ಡ ಜಮೀನುದಾರರು ತಮ್ಮಲ್ಲಿರುವ ಹೆಚ್ಚುವರಿ ಜಮೀನನ್ನು ಸರೆಂಡರ್ ಮಾಡಲು ಇಷ್ಟಪಟ್ಟರೆ ಅದಕ್ಕೂ ಅವಕಾಶ ಮಾಡಿಕೊಡಿ.

**ಶ್ರೀ ಕೆ.ಎಚ್. ರಂಗನಾಥ್:** ಆಗ ಅದು ದುರುಪಯೋಗವಾದರೆ? ಏಕೆಂದರೆ, ಮುಂಬೈ ಕರ್ನಾಟಕದ ಆಕ್ಟ್‌ನಲ್ಲಿ ಈ ಒಂದು ಅವಕಾಶವಿತ್ತು. ಜೊತೆಗೆ ಸ್ವಂತ ಉಪಯೋಗಕ್ಕೆಂದು ಸೆಕ್ಷನ್ 14ರ ಕೆಳಗೆ ಭೂಮಿ ಇಟ್ಟುಕೊಳ್ಳಲು ಅವಕಾಶವಿತ್ತು. ಆಗ ಅಲ್ಲೆಲ್ಲಾ ಮಿಸ್‌ಯೂಸ್ ಆಗಲಿಲ್ಲವೇ?

**ಶ್ರೀ ಎಸ್.ಆರ್. ಬೊಮ್ಮಾಯಿ:** ಇಂತಹ ಸಂದರ್ಭದಲ್ಲಿ ಜಮೀನು ಪಡೆದವರು ಬೇರೆಯವರಿಗೆ 12 ವರ್ಷಗಳ ಆ ಲೀಸ್ ಆಗಲೀ ಮಾರಾಟವಾಗಲೀ ಮಾಡದಂತೆ ಒಂದು ಕಂಡೀಷನ್ ಹಾಕಿ. ಇದನ್ನು ನಾನು ಏತಕ್ಕೆ ಹೇಳುತ್ತಿದ್ದೇನೆಂದರೆ, ಕೆಲವು ಜಮೀನುದಾರರ ಮನೆಗಳಲ್ಲಿ ಈ ಗೇಣಿದಾರರು ಏನು ವಾಸವಾಗಿರುತ್ತಾರೆ, ಅಂತಹ ಗೇಣಿದಾರರಿಗೆ ಆ ಜಮೀನುದಾರರು ತಮ್ಮಲ್ಲಿರುವ ಹೆಚ್ಚುವರಿ ಜಮೀನನ್ನು ಬಿಟ್ಟುಕೊಡಲು ತಯಾರಿರುತ್ತಾರೆ. ಆದ ಕಾರಣ ಇದಕ್ಕೆ ತಾವು ಏತಕ್ಕೆ ಅವಕಾಶ

ಮಾಡಿಕೊಡಬಾರದು? ಈ ಬಗ್ಗೆ ಈಗಿನ ಆಕ್ಟನ್ನು ಬದಲಾವಣೆ ಇರುವ ತೊಂದರೆಯಾದರೂ ಏನು? ಹರಿಜನ ಮತ್ತು ಗಿರಿಜನ ಹಾಗೂ ಕಡುಬಡವರ ಬಗ್ಗೆ ಮಾತ್ರ ನಾನು ಹೇಳುತ್ತಿರುವುದು. ಕೆಲವರು 45 ಎಕರೆಯವರೆಗೆ ಬಿಟ್ಟುಕೊಡಲು ಸಿದ್ಧರಿದ್ದಾರೆ. ಇಂಥಾದ್ದಕ್ಕೆ ಅವಕಾಶ ಮಾಡಿಕೊಡಬೇಕು. ಇಡೀ ರಾಜ್ಯದಿಂದ ಸರ್ಕಾರಕ್ಕೆ ಒಂದು ಲಕ್ಷದಷ್ಟು ಎಕರೆ ಹೆಚ್ಚುವರಿ ಭೂಮಿ ಸಿಗಬಹುದು. ಅದನ್ನು ರಾಜ್ಯದಲ್ಲಿರುವ ಎಲ್ಲ ಭೂರಹಿತರಿಗೂ ಹಂಚಲು ಎಲ್ಲಿ ಸಾಧ್ಯವಾಗುತ್ತದೆ? ಈ ಮೊದಲು ಶ್ರೀಮಾನ್ ವೀರೇಂದ್ರ ಪಾಟೀಲರ ಸರ್ಕಾರ ಇದ್ದಾಗ ಸುಮಾರು 5 ಲಕ್ಷ ಎಕರೆಗಳಷ್ಟು ಫಾರೆಸ್ಟ್ ಲ್ಯಾಂಡ್ ಮತ್ತು ಗೌರ್ನಮೆಂಟ್ ಲ್ಯಾಂಡನ್ನು ಹರಿಜನ ಮತ್ತು ಗಿರಿಜನರಿಗೆ ಹಾಗೂ ಕಡುಬಡವರಿಗೆ ಹಂಚಲಾಯಿತು. ಅದೇ ನಿಮ್ಮ 6 ವರ್ಷಗಳ ಒಂದು ಆಡಳಿತದಲ್ಲಿ ಎಷ್ಟು ಜನ ಹರಿಜನರಿಗೆ ಎಂಟು ಎಕರೆ ಜಮೀನು ಹಂಚಿದ್ದೀರಿ ಎಂಬ ಬಗ್ಗೆ ನಮಗೆ ಲೆಕ್ಕಾಚಾರ ಕೊಡಿ ಹೊಲ ಇಲ್ಲದವರಿಗೆ ಹೊಲ ಕೊಡುತ್ತೇವೆಂದು ತಾವು ಹೇಳುವಾಗ ಎಷ್ಟು ಜನರಿಗೆ ಎಷ್ಟು ಎಕರೆ ಹಂಚಿದ್ದೀರಿ, ಯಾರು ಯಾರಿಗೆ ಹಂಚಿದ್ದೀರಿ ಎಂಬ ಬಗ್ಗೆ ಲೆಕ್ಕ ಕೊಡಿ, ಇದಕ್ಕೆ ತಮ್ಮಿಂದ ಉತ್ತರವಿಲ್ಲ ಎಂಬುದು ನನಗೆ ಗೊತ್ತು.

ಅಧ್ಯಕ್ಷರೆ, ಇದಕ್ಕಿಂಥ ಹೆಚ್ಚಿನ ಪ್ರಗತಿಪರವಾದ ಆಕ್ಟ್ ಕೇರಳದಲ್ಲಿ ಇದೆ. ಕೇರಳದಲ್ಲಿ ಲ್ಯಾಂಡ್ ಟ್ರಿಬ್ಯುನಲ್ ಮಾಡಲಿಲ್ಲ ಇವೊತ್ತಿನ ದಿವಸ ಟೆನೆಂಟ್‌ಗಳಿಗೆ ಒಡೆತನ ಕೊಡುವುದನ್ನು ಸಂಪೂರ್ಣವಾಗಿ ಮುಗಿಸಲಿಕ್ಕೆ ಬಂದಿದ್ದಾರೆ. ಕೇರಳದಲ್ಲಿ ಸಾಮಾನ್ಯವಾಗಿ ಗೇಣಿದಾರ ಒಡೆಯನಾಗತಕ್ಕ ಕಾಲವನ್ನು ಮುಗಿಸುತ್ತಾ ಇದ್ದಾರೆ. ತಮಗೆ ಈ ಸಮಯದಲ್ಲಿ ಹೇಳಬೇಕು ಎಂದರೆ ತಾವುಗಳು ತಮ್ಮ ಅಧಿಕಾರಗಳಲ್ಲಿ ನಂಬಿಕೆ ಇಡಬೇಕು. ಇವೊತ್ತು ಏನಾಗಿದೆ ಎಂದರೆ ಲ್ಯಾಂಡ್ ಟ್ರಿಬ್ಯುನಲ್ಸ್ ಮಾಡಿದ್ದರಿಂದ ತೀರ್ಮಾನಗಳನ್ನು ಮುಂದೂಡುತ್ತಿದ್ದಾರೆ. ಇದರಿಂದ ಗೇಣಿದಾರನಿಗೆ ಲಾಭವಾಗಿಲ್ಲ ಎಂದು ನನಗನಿಸುತ್ತಿದೆ. ಈ ರೀತಿಯಲ್ಲಿ ಮುಂದುವರೆದರೆ ಗೇಣಿದಾರ ರೈತ ಇನ್ನು ಹತ್ತು ವರ್ಷಗಳಾದರೂ ಕೂಡ ಅವನು ಭೂಮಿಯ ಒಡೆಯನಾಗುವ ರೀತಿ ಕಾಣುವುದಿಲ್ಲ. ಇದು ಹೇಗೆ ಆಗಿದೆ ಎಂದರೆ ಮೂಗಿನ ತುದಿಗೆ ತುಪ್ಪ ಹಚ್ಚಿ ಅವನು ಬರಿ ವಾಸನೆಯನ್ನು ಮಾತ್ರ ಕಾಣುತ್ತಾ ಇರಬೇಕು. ಅಷ್ಟು ಮಾತ್ರ ಮಾಡಿದ್ದಾರೆ. ಇದು ಸರಿಯಾದಂಥ ಮಾರ್ಗವಲ್ಲ ಇದಕ್ಕೆ ಪ್ರಗತಿಪರವಾದಂಥ ಒಂದು ಅಮೆಂಡ್ ಮೆಂಟ್ ತೆಗೆದುಕೊಂಡು ಬನ್ನಿ ಈಗ ನಾವು ಅದಕ್ಕೆ ಒಮ್ಮತದಿಂದ ಒಪ್ಪಿಗೆ ಕೊಡುತ್ತೇವೆ.

**ಶ್ರೀ ಕೆ.ಹೆಚ್. ರಂಗನಾಥ್:** ಈಗ ಇರತಕ್ಕ ಆಕ್ಟ್ ಈ ಮನೆಯಲ್ಲಿಯೇ ಒಮ್ಮತದಿಂದ ಆಗಿದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಈ ವಿಚಾರದ ಬಗ್ಗೆ ಹೈಕೋರ್ಟಿನಲ್ಲಿ ಬೇಕಾದಷ್ಟು ಕಾಂಟ್ರವರ್ಸಿ ಇದೆ. ನಾನು ಈಗ ಆ ಕಾಂಟ್ರವರ್ಸಿಯಲ್ ಪಾಯಿಂಟ್‌ಗೆ ಹೋಗುವುದಿಲ್ಲ. ಒಂದು ವರ್ಷದಲ್ಲಿ ಗೇಣಿದಾರನನ್ನು ಒಡೆಯನನ್ನಾಗಿ ಮಾಡಬೇಕು ಎಂದು ಅಷ್ಟು ಮಾತ್ರ ಹೇಳುವುದಕ್ಕೆ ಇಷ್ಟಪಡುತ್ತೇನೆ. ಇನ್ನು ರಾಜ್ಯಪಾಲರ ಭಾಷಣದಲ್ಲಿ ಬಹಳ ವಿಚಾರಗಳನ್ನು ಹೇಳಿದ್ದಾರೆ. ಅದರಲ್ಲಿ ಇರಿಗೇಷನ್ ಬಡ್ಜೆಟ್ ಬಗ್ಗೆ ಹೇಳುವುದಾದರೆ ಕಳೆದ ಐದಾರು ವರ್ಷದಿಂದ ನಡೆಯತಕ್ಕದ್ದೇ ಇದೆ. ಅಂಕಿಸಂಖ್ಯೆಗಳನ್ನು ಹೇಳಬೇಕಾದರೆ ಆರು ವರ್ಷಗಳಲ್ಲಿ ಪರ್ಸೆಂಟೇಜ್ ಹೆಚ್ಚಾಗಿದೆ. ಹಿಂದೆ 1962ರಲ್ಲಿ ಇದ್ದುದಕ್ಕಿಂತ 1967ರಲ್ಲಿ ಜಾಸ್ತಿಯಾಗಿದೆ. 1967ರಲ್ಲಿ ಇದ್ದುದಕ್ಕಿಂತ 1972ರಲ್ಲಿ ಜಾಸ್ತಿಯಾಗಿದೆ. 1972ರಲ್ಲಿ ಇದ್ದುದಕ್ಕಿಂತ 1977ರಲ್ಲಿ ಜಾಸ್ತಿಯಾಗಿದೆ. ಆ ಬಗ್ಗೆ ನಾನು ಅಂಕಿ ಸಂಖ್ಯೆ ಜಾಸ್ತಿ ಆಗಿಲ್ಲ ಎಂದು ಹೇಳುವುದಿಲ್ಲ. ಈ ರೀತಿ ಅಂಕಿ ಅಂಶಗಳನ್ನು ನೋಡುವಾಗ ಒಂದೇ ಆಂಗಲ್‌ನಿಂದ ನೋಡುವುದಕ್ಕಾಗುವುದಿಲ್ಲ. ನಮ್ಮ ರಾಜ್ಯದ ಉತ್ಪತ್ತಿ ಎಷ್ಟು ಹೆಚ್ಚಾಗಿದೆ ಅದಕ್ಕೆ ಸರಿಯಾದ ಪ್ರಪೋರ್ಷನ್ ಅಂಕಿ ಸಂಖ್ಯೆಗಳಲ್ಲಿ ಹೆಚ್ಚಾಗಿದೆಯೇ ಹಾಗೆ ನಮ್ಮ ರಾಜ್ಯದ ಉತ್ಪಾದನೆ ಖರ್ಚು ಎಲ್ಲವನ್ನು ಕೂಡ ನೋಡಬೇಕಾಗುತ್ತದೆ. ಇನ್ನು ಕಾವೇರಿ, ಕೃಷ್ಣ, ಗೋದಾವರಿ ಬೇಸಿನ್ನಿನಲ್ಲಿ ಇರತಕ್ಕ ಯೋಜನೆಗಳು ಏನು ಇವೆ. ಅದರ ಬಗ್ಗೆ ಕೇಂದ್ರ ಸರ್ಕಾರದಿಂದ ಒಪ್ಪಿಗೆ ಪಡೆಯತಕ್ಕ ಆಶ್ವಾಸನೆಯನ್ನು ತಮ್ಮ ಸರ್ಕಾರ ಕೊಟ್ಟಿತ್ತು ಅದು ಆಗಲಿಲ್ಲ.

**ಶ್ರೀ ಕೆ.ಹೆಚ್. ರಂಗನಾಥ್:** ಕ್ಲಿಯರೆನ್ಸ್ ಪಡೆದುಕೊಂಡೇ ಕೆಲಸ ಮಾಡಬೇಕಾಗಿತ್ತೇ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಕ್ಲಿಯರೆನ್ಸ್ ಇಲ್ಲದೆ ಹಿಂದೆ ನಿಜಲಿಂಗಪ್ಪನವರ ಸರ್ಕಾರದಲ್ಲೇ ಪ್ರಾರಂಭ ಮಾಡಿದೆ.

**ಶ್ರೀ ಎಂ.ಸಿ. ಬಸಪ್ಪ:** ಸರ್ಕಾರದವರು ಕೇಂದ್ರ ಸರ್ಕಾರದವರಿಂದ ಕ್ಲಿಯರೆನ್ಸ್ ತಂದಿದ್ದರೆ ಚೆನ್ನಾಗಿರುತ್ತಿತ್ತು.

**ಶ್ರೀ ಕೆ.ಹೆಚ್. ರಂಗನಾಥ್:** ಹಿಂದೆ ಏನು ಕೆಲಸ ನಡೆದಿತ್ತೋ ಅದಕ್ಕಿಂತ ಇನ್ನು ಹೆಚ್ಚು ಕೆಲಸ ಆಗಿದೆಯೋ ಇಲ್ಲವೋ? ಕೆಲಸ ಏನು ನಿಂತಿಲ್ಲವಲ್ಲ?

**ಶ್ರೀ ಎಂ.ಸಿ. ಬಸಪ್ಪ:** ಕ್ಲಿಯರೆನ್ಸ್ ತಂದಿದ್ದರೆ ಇನ್ನಷ್ಟು ಪ್ರಾಜೆಕ್ಟ್ ಕಟ್ಟಬಹುದಿತ್ತು.

**ಶ್ರೀ ಕೆ.ಹೆಚ್. ರಂಗನಾಥ್:** ಕಾವೇರಿ ಬೇಸಿನ್‌ಗೆ ಕ್ಲಿಯರೆನ್ಸ್ ಕಾಯ್ದುಕೊಂಡಿದ್ದಾರೆ. 1957 ರಿಂದ 1962 ರವರೆಗೆ ಏನಾಗಿದೆ ಅಲ್ಲಿಗೆ ಉಳಿಯುತ್ತಿತ್ತು ಈಗ ಅಲ್ಲಿ ಏನಾಗಿದೆ ಅದಕ್ಕೆ ಉತ್ತರ ಮಾನ್ಯ ಸದಸ್ಯರಾದ ಬಸವಪ್ಪನವರೇ ಹೇಳಬೇಕು.

**ಶ್ರೀ ಎಸ್.ಆರ್. ಬೊಮ್ಮಾಯಿ:** ಇವೊತ್ತು ನಾನು 1972ನೇ ಇಸವಿಯ ಭಾಷಣದಲ್ಲಿ ಹೇಳಿದ್ದನ್ನು ತಿಳಿಸುತ್ತಿದ್ದೇನೆ. ಕಾಳಿ ಪ್ರಾಜೆಕ್ಟ್, ಅಪ್ಪರ್ ಕೃಷ್ಣಾ ಇವುಗಳ ಬಗ್ಗೆ ಕ್ಲಿಯರೆನ್ಸ್ ತರುತ್ತೇನೆ ಎಂದು ಮಾತನಾಡಿದ್ದು ಇದುವರೆಗೂ ಪ್ರಗತಿಯಾಗಿಲ್ಲ ಎಂದು ಹೇಳುವುದಕ್ಕೆ ಇಷ್ಟಪಡುತ್ತೇನೆ.

**ಶ್ರೀ ಕೆ.ಹೆಚ್. ರಂಗನಾಥ್:** ಅಧ್ಯಕ್ಷರೇ, ಒಂದು ಕಡೆ ಪ್ಲಾನಿಂಗ್ ಕಮಿಷನ್ ಪರ್ಮಿಷನ್ ತೆಗೆದುಕೊಂಡು ಪ್ರಾರಂಭ ಮಾಡಿ ಎಂದು ಹೇಳುತ್ತಾರೆ. ಮತ್ತೊಂದುಕಡೆ ಅಪ್ಪರ್ ಕೃಷ್ಣಾದಲ್ಲಿ ಏನು ಕೆಲಸ ಆಗಿಲ್ಲ ಎಂದು ಹೇಳುತ್ತಾರೆ. ಕಾವೇರಿ ಬೇಸಿನ್ ನಲ್ಲಿ 1972ರಿಂದ ಏನು ಪ್ರಗತಿಯಾಗಿದೆ ಅದನ್ನು ನೋಡಲಿಕ್ಕೆ ಮನಸ್ಸು ಮಾಡುವುದಿಲ್ಲ ಹೀಗಾದರೆ ಹೇಗೆ?

**ಶ್ರೀ ಎಸ್.ಆರ್. ಬೊಮ್ಮಾಯಿ:** ಪ್ಲಾನಿಂಗ್ ಕಮಿಷನ್ ಕ್ಲಿಯರೆನ್ಸ್ ಇಲ್ಲದೆ ಕೆಲಸ ಮಾಡಬಾರದು ಎಂದು ನಾನು ಹೇಳುವುದಿಲ್ಲ ಈ ಸರ್ಕಾರ ಮಾಡಿರುವುದು ಸರಿಯೇ ಹಾಗೆಯೇ ಹಿಂದಿನ ಸರ್ಕಾರ ಮಾಡಿದ್ದು ಸರಿಯೇ.

1972ನೇ ಇಸವಿಯಲ್ಲಿ ಹೇಳಿದ ಪ್ರಕಾರ ತಮ್ಮ ಪ್ರಭಾವವನ್ನು ಕೇಂದ್ರ ಸರ್ಕಾರದ ಮೇಲೆ ಬೀರಿ ಕ್ಲಿಯರೆನ್ಸ್ ದೊರಕಿಸಿದ್ದರೆ, ತಾವು ಕೊಟ್ಟಮಾತಿನಂತೆ ನಡೆದುಕೊಂಡು ಹಾಗೆ ಆಗುತ್ತಿತ್ತು. ತಾವು ಈಗ ಏನು ಪ್ರಗತಿ ಕೆಲಸ ಮಾಡಿಸಿದ್ದೀರಿ. ಅದರ ಬಗ್ಗೆ ನಾನು ಈಗ ಚರ್ಚೆ ಮಾಡುವುದಕ್ಕೆ ಹೋಗುವುದಿಲ್ಲ. ಇರಿಗೇಷನ್ ಬಗ್ಗೆ ವಿಚಾರ ಬಂದಾಗ ಮಾತನಾಡುತ್ತೇನೆ. ಕಬಿನಿಯಲ್ಲಿ ಎಷ್ಟು ಕೆಲಸಮಾಡಿದ್ದಾರೆ ಕೃಷ್ಣಾದಲ್ಲಿ ಎಷ್ಟು ಕೆಲಸಮಾಡಿದ್ದಾರೆ, ಹಿಂದೆ ವ್ಯಾಲುಯೇಷನ್ ಎಷ್ಟಿತ್ತು ಆಗ ರಾಜ್ಯದ ಉತ್ಪಾದನೆ ಎಷ್ಟು ಇತ್ತು. ಟ್ಯಾಕ್ಸ್ ಎಷ್ಟು ಹಾಕುತ್ತಿದ್ದರು, ಈಗ ಎಷ್ಟು ಹಾಕುತ್ತಿದ್ದಾರೆ. ಅದರ ಬಗ್ಗೆ ನಾನು ಈಗ ಮಾತನಾಡುವುದಿಲ್ಲ.

ಸ್ವಾಮಿ ಈ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳುವುದಾದರೆ ವಿಜಯನಗರ ಉಕ್ಕಿನ ಕಾರ್ಖಾನೆಯಾಗಲಿ, ಕಾಳೀನದಿ ಯೋಜನೆಯಾಗಲೀ ಅಥವಾ ಬೇರೆ ಯಾವುದೇ ನೀರಾವರಿ ಯೋಜನೆಯಾಗಲೀ ರಾಜ್ಯದ ಹಿತದೃಷ್ಟಿಯಿಂದ 5 ವರ್ಷಗಳಲ್ಲಿ ಏನು ಪ್ರಗತಿ ಆಗಬೇಕಾಗಿತ್ತೋ ಅದು ಆಗಿಲ್ಲ. ಇದಕ್ಕೆ ಕೇಂದ್ರ ಸರ್ಕಾರದ ಯಾವುದೇ ಸಹಾಯವೂ ದೊರೆತಿಲ್ಲ ಎನ್ನುವ ಮಾತನ್ನು ಹೇಳಬಯಸುತ್ತೇನೆ.

ಇನ್ನು ನಿರುದ್ಯೋಗ ಸಮಸ್ಯೆ ಬಗ್ಗೆ ಹೇಳುವುದಾದರೆ 1972ರಲ್ಲಿ ರಾಜ ಏನು ನಿರುದ್ಯೋಗದ ಸಮಸ್ಯೆ ಇತ್ತೋ ಇವತ್ತು ಅದರ 3 ಪಟ್ಟು ನಿರುದ ಸಮಸ್ಯೆ ಜಾಸ್ತಿಯಾಗಿದೆ. ತಾವು ಕೆಲಸ ಇಲ್ಲದವರಿಗೆ ಕೆಲಸ ಕೊಡುತ್ತ ನಿರುದ್ಯೋಗಗಳನ್ನು ನಿವಾರಣೆ ಮಾಡುತ್ತೇವೆ ಎಂದು ಏನು ಘೋಷಣೆ ಮಾಡಿದಿ ಅದು ಕಡಿಮೆಯಾಗುವುದಕ್ಕೆ ಬದಲು ಇನ್ನೂ ಜಾಸ್ತಿಯಾಯಿತು. ಇದರ ಜೊತೆಗೆ ಹಳ್ಳಿಗಳ ಕಡೆ ವ್ಯವಸಾಯ ಕೂಲಿಗಾರರ ನಿರುದ್ಯೋಗ ಸಮಸ್ಯೆ ಕೂಡ ಜಾಸ್ತಿಯಾಗಿದೆ. ಇದಕ್ಕೆ ಕಾರಣವಾದರೂ ಏನು? ನನಗೆ ಹೆಚ್ಚು ಕಾಲಾವಕಾಶ ಇದ್ದಿದ್ದರೆ ತಮಗೆ ಅಂಕಿ ಅಂಶಗಳನ್ನು ಕೊಡುತ್ತಿದ್ದೆ.

ಇನ್ನು ಹರಿಜನ ಗಿರಿಜನರಿಗೋಸ್ಕರ ಹಿಂದುಳಿದವರಿಗೋಸ್ಕರ ಮನೆಗಳನ್ನು ಕಟ್ಟಿಸಿಕೊಟ್ಟಿದ್ದೇವೆ. ಸೈಟುಗಳನ್ನು ಕೊಟ್ಟಿದ್ದೇವೆ ಎಂದು ಹೇಳಿದ್ದೀರಿ ಇದರ ಬಗ್ಗೆ ತಾವು ಏನೇನೂ ಮಾಡಿಲ್ಲವೆಂದು ನಾನು ಹೇಳುತ್ತೇನೆ. ಇವರಿಗೋಸ್ಕರ ಖರ್ಚು ಮಾಡಿದ್ದರೆ ಸುಮಾರು 10 ಕೋಟಿ ರೂಪಾಯಿಗಳನ್ನು ಖರ್ಚು ಮಾಡಿರಬಹುದು ಅಷ್ಟೆ. ತಾವು ಕಳೆದ 6 ವರ್ಷಗಳಿಂದಲೂ ಹರಿಜನರಿಗೆ ಮನೆಗಳನ್ನು ಕಟ್ಟಿ ಕೊಟ್ಟಿದ್ದರೆ ಬಹಳಷ್ಟು ಜನ ಸ್ವಂತ ಮನೆಗಳನ್ನು ಹೊಂದಿರುತ್ತಿದ್ದರು. ಅದರಿಂದ ತಾವು ಕೂಡ ಶಹಭಾಸ್‌ಗಿರಿ ಪಡೆಯುತ್ತಿದ್ದೀರಿ. ಆಗ ಅದನ್ನು ನಾನು ಕೂಡ ಒಪ್ಪಿಕೊಳ್ಳುತ್ತಿದ್ದೆ. ತಾವು ಹರಿಜನರಿಗೆ ಬಡವರಿಗೆ ಮನೆಗಳನ್ನು ಕಟ್ಟಿಸಿಕೊಟ್ಟಿರುವ ಬಗ್ಗೆ ಸೈಟುಗಳನ್ನು ಹಂಚಿರುವ ಬಗ್ಗೆ ಏನು ವರ್ಣನೆ ಮಾಡಿದ್ದಿರಿ ಅದು ಬೇಕಾಗಿಲ್ಲ. ಅದರಲ್ಲಿ ಹೇಳಿಕೊಳ್ಳುವುದು ಏನು ಇಲ್ಲ. ಈ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳಬೇಕೆಂದರೆ ಇಲ್ಲಿ ಬಹಳಷ್ಟು ಜನ ನಮಗೆ ಹಿಂದುಳಿದವರ, ಹರಿಜನರ ಬೆಂಬಲ ಇದೆ ಎಂಬುದಾಗಿ ಹೇಳಿಕೊಳ್ಳುತ್ತಿರುತ್ತಾರೆ. ಇದರ ಬಗ್ಗೆ ನಾನು ಪದೇ ಪದೇ ಹೇಳುತ್ತಲೇ ಬರುತ್ತಿರುತ್ತೇನೆ. ಈ ರಾಜ್ಯದಲ್ಲಿ ಹಿಂದೆ ಮಾನ್ಯ ನಿಜಲಿಂಗಪ್ಪನವರು, ಮಾನ್ಯ ಬಿ.ಡಿ.ಜತ್ತಿಯವರು, ಮಾನ್ಯ ಹನುಮಂತಯ್ಯನವರು, ಮಾನ್ಯ ವೀರೇಂದ್ರ ಪಾಟೀಲರು ಮುಖ್ಯಮಂತ್ರಿಗಳಾಗಿದ್ದರು. ಅವರಿಂದ ಒಕ್ಕಲಿಗರ ಲಿಂಗಾಯಿತರ ಉದ್ದಾರ ಏನು ಆಗಿಲ್ಲ. ಲಿಂಗಾಯಿತರಲ್ಲಿ ಬಹಳ ಕಡುಬಡವರಿದ್ದಾರೆ. ರಾಷ್ಟ್ರಪತಿಗಳಾಗಿ ಫಕೃದ್ದೀನ್ ಅಲಿ ಅಹ್ಮದ್‌ರವರು ಇದ್ದರು ಜಾಕೀರ್ ಹುಸೇನ್‌ರವರು ಇದ್ದರು. ಆದರೆ ಮುಸಲ್ಮಾನರ ಬಡತನ ಏನು ಹೋಗಿಲ್ಲ. ಅವರಲ್ಲಿ ಬಹಳಷ್ಟು ಕಡುಬಡವರಿದ್ದಾರೆ. ತಾವು ಇಲ್ಲಿ ಸಭಾಪತಿಗಳಾಗಿದ್ದೀರಿ. ಆದರೆ ಹರಿಜನರ ಬಡತನ ಹೋಗಿಲ್ಲ. ಇವತ್ತು ಯಾವ ಜಾತಿಯ ರಾಷ್ಟ್ರಪತಿಗಳು ಬರಲಿ, ಮುಖ್ಯಮಂತ್ರಿಗಳು ಬರಲಿ, ಶಾಸಕರು ಬರಲಿ ಅಧಿಕಾರಿಗಳು ಬರಲಿ ಅವರಿಂದ

ಈ ಜನಾಂಗದ ಉದ್ಧಾರ ಏನು ಆಗುವುದಿಲ್ಲ. ಆದರೆ ಸರ್ಕಾರದವರು ತಮ್ಮ ಕಾರ್ಯಕ್ರಮವನ್ನು ಹಾಕಿಕೊಳ್ಳುವಾಗ ಬಡವರ ಬಡತನವನ್ನು ಹೋಗಲಾಡಿಸುವುದಕ್ಕೆ ತಕ್ಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು ಅಷ್ಟೆ. ಆದರೆ ನಮ್ಮ ಮಾನ್ಯ ರಾಜ್ಯಪಾಲರು ಮಾಡಿರತಕ್ಕ ಭಾಷಣದಲ್ಲಿ ಇದಾವುದೂ ಕಾಣುತ್ತಿಲ್ಲ. ಇನ್ನು ಮುಂಬರುವ 5 ವರ್ಷಗಳಲ್ಲಿ ಸರ್ಕಾರ ಏನು ಮಾಡುತ್ತದೆ ಎಂಬುದು ಇದರಲ್ಲಿ ಕಂಡುಬರುತ್ತಿಲ್ಲ. ನಮಗೆ ಸ್ವಾತಂತ್ರ್ಯ ಬಂದು 30 ವರ್ಷಗಳು ಕಳೆದುಹೋದವು, ಬರೀ ಭಾಷಣಗಳಿಂದಲೇ ನಮ್ಮ ರಾಜ್ಯದ ಜನತೆಗೆ ಏನೂ ಉಪಯೋಗವಾಗುವುದಿಲ್ಲ. ಆದುದರಿಂದ ನಾನು ಕೇಳಿಕೊಳ್ಳುವುದೇನೆಂದರೆ ಮುಂದಿನ ಬಜ್ಜೆಟ್‌ನಲ್ಲಾದರೂ ಸರ್ಕಾರ ಏನು ಉದ್ದೇಶ ಇಟ್ಟುಕೊಂಡಿದೆ ಎಂಬ ಬಗ್ಗೆ ಒಂದು ಸೂಚನೆ, ಒಂದು ಸ್ಪಷ್ಟ ಚಿತ್ರವನ್ನು ನೀಡಬೇಕು.

ಇನ್ನು ಕುಡಿಯುವ ನೀರಿನ ಯೋಜನೆ ಬಗ್ಗೆ ಹೇಳಿದ್ದೀರಿ. ಸ್ವಾಮಿ, ಈ ಸಂದರ್ಭದಲ್ಲಿ ಒಂದು ಮಾತನ್ನು ತಮ್ಮ ಗಮನಕ್ಕೆ ತರುತ್ತೇನೆ. ನಮ್ಮ ರಾಜ್ಯದಲ್ಲಿ ಕುಡಿಯುವ ನೀರಿನ ಯೋಜನೆಗೆ ತಗಲಬಹುದಾದ ವೆಚ್ಚವನ್ನು ಸಂಪೂರ್ಣವಾಗಿ ಕೇಂದ್ರ ಸರ್ಕಾರದವರೇ ಕೊಡುತ್ತಾರೆ.

**ಶ್ರೀ ಕೆ.ಹೆಚ್. ರಂಗನಾಥ್**: ನ್ಯಾಷನಲ್ ವಾಟರ್ ಸಪ್ಲೈ ಸ್ಕೀಂ ಕೈ ಬಿಟ್ಟಿದೆ. ಕಳೆದ ವರ್ಷ ಕೇಂದ್ರ ಸರ್ಕಾರದಿಂದ ನಮಗೆ ಬರಬೇಕಾಗಿದ್ದ ಹಣ ಬರಲಿಲ್ಲ. ಅದು ಬಿಟ್ಟು ಹೋಯಿತು.

**ಶ್ರೀ ಎಸ್.ಆರ್. ಬೊಮ್ಮಾಯಿ:** ಇನ್ನು ಮಕ್ಕಳಿಗೆ ಕೊಡುವ ಪೌಷ್ಟಿಕ ಆಹಾರಕ್ಕೆ ಸಂಬಂಧಪಟ್ಟಂತೆ ಕೂಡ ಸಂಪೂರ್ಣ ಖರ್ಚನ್ನು ಕೇಂದ್ರ ಸರ್ಕಾರದವರೇ ವಹಿಸಿಕೊಳ್ಳುತ್ತಾರೆ. ಸ್ವಾಮಿ, ಇದರ ಜೊತೆಗೆ ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್‌ನವರಿಗೆ ಕೊಡುವ ಸ್ಕಾಲರ್‌ಷಿಪ್‌ನಲ್ಲಿ ಕೇಂದ್ರ ಸರ್ಕಾರದ ಪಾಲು ಎಷ್ಟು? ಎಂಬುದು ಮಾನ್ಯ ರಾಜ್ಯಪಾಲರ ಭಾಷಣದಲ್ಲಿ ಬರಬೇಕಾಗಿತ್ತು. ಇವತ್ತು ಒಬ್ಬ ಹರಿಜನ ವಿದ್ಯಾರ್ಥಿಗೆ 120 ರೂಪಾಯಿ ಸ್ಕಾಲರ್‌ಶಿಪ್ ಸಿಕ್ಕಿದರೆ ಅದರಲ್ಲಿ 100 ರೂಪಾಯಿ ಕೇಂದ್ರದಿಂದ ಬರುತ್ತದೆ. ಉಳಿದ 20 ರೂಪಾಯಿ ರಾಜ್ಯ ಸರ್ಕಾರದವರು ಕೊಡಬೇಕಾಗುತ್ತದೆ.

**ಶ್ರೀ ಕೆ.ಹೆಚ್. ರಂಗನಾಥ್:** ಒಬ್ಬ ಪೋಸ್ಟ್ ಗ್ರಾಜುಯೇಟ್ ವಿದ್ಯಾರ್ಥಿಗೆ ಐಟಿ ವಗೈರೆಗೆ ಇಂತಿಷ್ಟು ದುಡ್ಡು ಎಂದು ಕೊಡುತ್ತೇವೆ ಅದರ ಮೇಲೆ ಖರ್ಚು ಬಂದರೆ ಅದನ್ನು ಕೇಂದ್ರದವರು ಕೊಡುತ್ತಾರೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಈವತ್ತು ಜನತೆ ತೀರ್ಪನ್ನು ಕೊಟ್ಟಿದೆ. ಆದರೂ ನೀವು ಸರ್ಕಾರವನ್ನು ನಡೆಸುತ್ತಿದ್ದೀರಿ. ನಾನು ಹೇಳುವುದೇನೆಂದರೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಇವೆರಡರ ನಡುವೆಯೂ ಒಂದು ಸಹಕಾರವಿರಬೇಕು. ಹಿಂದಿನ ರಾಜ್ಯಪಾಲರ ಭಾಷಣದಲ್ಲಿ ಒಂದು ಮಾತನ್ನು ಉಲ್ಲೇಖಿಸಿದ್ದೀರಿ. ಆದರೆ ಈಗಿನ ರಾಜ್ಯಪಾಲರ ಭಾಷಣದಲ್ಲಿ ಆ ವಿಷಯವನ್ನು ಪ್ರಸ್ತಾಪಿಸಿದ್ದು ಕಂಡುಬರಲಿಲ್ಲ. ರಾಜ್ಯದ ಅಭಿವೃದ್ಧಿ ಕಾರ್ಯಗಳು ನಡೆಯಬೇಕಾದರೆ ಸಹಕಾರದ ಆ ಒಂದು ಮಾತನ್ನು ಹೇಳುವುದು ಅವಶ್ಯಕವಾಗಿತ್ತು ಎನ್ನುವ ಮಾತನ್ನು ಮನವರಿಕೆ ಮಾಡಿಕೊಳ್ಳುತ್ತಿದ್ದೇನೆ. ಫೆಡರೆಲ್ ಸಿಸ್ಟಮ್ ಎಂದರೆ ಕೇಂದ್ರದಲ್ಲಿ ಒಂದು ಸರ್ಕಾರವಿದ್ದರೆ ರಾಜ್ಯದಲ್ಲಿ ಮತ್ತೊಂದು ಸರ್ಕಾರವಿರಬಹುದು. ಹೇಗೆ ಬೇರೆ ಬೇರೆ ಸರ್ಕಾರಗಳಿದ್ದರೂ ಇವರೆಡೂ ಸರ್ಕಾರಗಳು ಹೊಂದಿಕೊಂಡು ಹೋಗಬೇಕು ಎನ್ನುವ ಅಂಶವನ್ನು ಸರ್ಕಾರದ ಗಮನಕ್ಕೆ ತರಬಯಸುತ್ತೇನೆ. ರಾಜ್ಯದಲ್ಲಿ ಯಾವುದೇ ಸರ್ಕಾರವಿರಲಿ ಪ್ರಗತಿಪರವಾದ ಸಾಮಾನ್ಯ ಜನರ ಹಿತದೃಷ್ಟಿಯಿಂದ ಯಾವುದೇ ಕಾರ್ಯಕ್ರಮವನ್ನು ಈ ಸಭೆಯಲ್ಲಿ ತಂದರೂ ಕೂಡ ಅದಕ್ಕೆ ಸಂಪೂರ್ಣವಾದ ಸಹಕಾರ ನನ್ನದು ಮತ್ತು ನಮ್ಮ ಪಕ್ಷದ್ದು ಇದ್ದೇ ಇದೆ ಎಂದು ಸ್ಪಷ್ಟವಾಗಿ ಈ ಸಭೆಯಲ್ಲಿ ಹೇಳಬಯಸುತ್ತೇನೆ. ಅದರ ಜೊತೆಗೆ ತಮಗೊಂದು ಎಚ್ಚರಿಕೆಯನ್ನೂ ಸಹ ಕೊಡಬಯಸುತ್ತೇನೆ. ಅದೇನೆಂದರೆ ನಾವು ಚುನಾವಣೆಯಲ್ಲಿ ಬಹುಮತವನ್ನು ಪಡೆದು ಅಧಿಕಾರಕ್ಕೆ ಬಂದಿರುತ್ತೇವೆಂದು ಇರಬಹುದು. ಆದರೆ ತಮಗೆ 56 ಪರ್ಸೆಂಟ್‌ನಷ್ಟು ಜನತೆ ತಮ್ಮ ವಿರುದ್ಧವಾಗಿ ಮತವನ್ನು ಕೊಟ್ಟಿದ್ದಾರೆಂದು ಅದು ತಮ್ಮ ಗಮನದಲ್ಲಿರಲೆಂದು ಹೇಳುತ್ತೇನೆ.

**ಶ್ರೀ ಕೆ.ಎಚ್. ರಂಗನಾಥ್:** ನಮಗೆ ಚುನಾವಣೆಯಲ್ಲಿ 46 ಪರ್ಸೆಂಟ್ ಮತಗಳನ್ನು ಜನತೆಯು ಕೊಟ್ಟಿದ್ದಾರೆ. ಆದರೆ ತಮಗೆ 43 ಪರ್ಸೆಂಟ್ ಬಂದಿರುವುದನ್ನು ತಾವು ಗಮನದಲ್ಲಿರಿಸಿಕೊಳ್ಳಬೇಕು.

**ಶ್ರೀ ಎಸ್.ಆರ್. ಬೊಮ್ಮಾಯಿ:** ಸರ್ಕಾರದವರು ಯಾವುದೇ ಕಾರ್ಯಕ್ರಮವನ್ನು ನಡೆಸುವ ಸಲುವಾಗಿ ವಿರೋಧಪಕ್ಷದ ಸಹಕಾರವನ್ನು ತೆಗೆದುಕೊಳ್ಳುವುದು ಬಹಳ ಅವಶ್ಯಕವಾಗಿರುತ್ತದೆ. ಎನ್ನುವ ಮಾತನ್ನು ಹೇಳತಕ್ಕಂಥ ಸಂದರ್ಭದಲ್ಲಿ ಇಂದು ಲ್ಯಾಂಡ್ ಟ್ರಿಬ್ಯುನಲ್‌ಗಳನ್ನು ಮಾಡುವಾಗ ಆಗಲಿ, ಡಿಪಾರ್ಟ್‌ಮೆಂಟ್ ರಿಕ್ರೂಟ್‌ಮೆಂಟ್ ಕಮಿಟಿಗಳನ್ನು ಮಾಡುವ ಸಂದರ್ಭದಲ್ಲಿಯಾಗಲಿ, ಬೇರೆ ಬೇರೆ ಸಮಿತಿಗಳನ್ನು ರಚನೆ ಮಾಡುವಾಗ ಆಗಲಿ, ವಿರೋಧ ಪಕ್ಷದ ಸದಸ್ಯರಿಗೆ ಸಾಕಷ್ಟು ಪ್ರಾಧಾನ್ಯತೆಯನ್ನು ಕೊಡಬೇಕೆಂದು ಹೇಳುತ್ತೇನೆ.

**ಶ್ರೀ ಕೆ.ಎಚ್. ರಂಗನಾಥ್:** ಅದನ್ನು ನಾವು ಎಕ್ಸ್‌ಟೆಂಡ್ ಮಾಡಿದರೂ ಕೇಂದ್ರ ಕೈಗಾರಿಕಾ ನೀತಿ ಏನು ಇದೆ ಎಂದರೆ ಮಲ್ಟಿನ್ಯಾಷನಲ್ ಕಾರ್ಪೋರೇಷನ್‌ಗಳಿಗೆ

ಧಾನ್ಯತೆಯನ್ನು ಕೊಡಬಾರದು ಎಂದು ಹೇಳಿದರೆ ಅದನ್ನು ನಾವು ಪ್ಪಿಕೊಳ್ಳುವುದಕ್ಕೆ ಸಾಧ್ಯವೇ? ನಾವು ಮಾಡಿದ ಸಮಿತಿಗಳಿಗೆಲ್ಲ ಪ್ರಾಧಾನ್ಯತೆಯನ್ನು ೂಡಿ ಎಂದರೆ ಹೇಗೆ ಸಾಧ್ಯ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಸಾರ್ವಜನಿಕ ಹಿತದೃಷ್ಟಿಯಿಂದ ಸೌಲಭ್ಯ ಪೂರ್ವಕವಾಗಿ ಹೇಳುತ್ತಿದ್ದೇನೆ, ಪ್ರಜಾಪ್ರಭುತ್ವದಲ್ಲಿ ಅನ್ಯಾಯ, ಭ್ರಷ್ಟಾಚಾರ ಎಲ್ಲಿ ನಡೆಯುತ್ತಿರುತ್ತದೋ ಅದನ್ನು ಖಂಡತುಂಡವಾಗಿ ಖಂಡಿಸುವುದು, ವಿರೋಧಪಕ್ಷದ ಪರವಾಗಿ ಹೇಳುತ್ತಿದ್ದೇನೆ. ಅದು ಅವರ ಕರ್ತವ್ಯವಾಗಿರುತ್ತದೆ. ಅದರ ಬಗ್ಗೆ ಕೂಡಲೇ ಸೂಕ್ತ ಕ್ರಮವನ್ನು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ಎಲ್ಲಿ ಭ್ರಷ್ಟಾಚಾರ ನಡೆಯುತ್ತಿದೆ, ಎಲ್ಲಿ ಹಣದ ಅಪವ್ಯಯವಾಗುತ್ತಿದೆ ಅದು ಸಹಕಾರಿ ಸಂಘಗಳಲ್ಲಿಯೇ ಆಗಲಿ, ಹಾಸ್ಟೆಲ್‌ಗಳಲ್ಲಿಯೇ ಆಗಲಿ, ಸರ್ಕಾರದಲ್ಲಿ ಅಧಿಕಾರಿಗಳೇ ಮಾಡುತ್ತಿರಲಿ ಅದನ್ನು ಗಮನಕ್ಕೆ ತಂದಾಗ ಸರ್ಕಾರ ಸೂಕ್ತ ತಿದ್ದುಪಡಿಯನ್ನು ಮಾಡದಿದ್ದರೆ ಈ ಮನೆಯ ಒಳಗೂ ಮತ್ತು ಹೊರಗೂ ಚಳವಳಿಯನ್ನು ಮಾಡಬೇಕಾಗುತ್ತದೆಂದು ಸರ್ಕಾರವನ್ನು ಎಚ್ಚರಿಸುತ್ತಿದ್ದೇನೆ.

**ಶ್ರೀ ಕೆ.ಎಚ್. ರಂಗನಾಥ್:** ಪ್ರಜಾಪ್ರಭುತ್ವದಲ್ಲಿ ಸರ್ಕಾರ ವ್ಯವಸ್ಥಿತವಾಗಿ ಸುಭದ್ರವಾದ ತಳಹದಿಯ ಮೇಲೆ ನಡೆಯಬೇಕಾದರೆ ಈವತ್ತಿನ ದಿವಸ ವಿರೋಧಪಕ್ಷದವರೂ ಸಹ ಆಡಳಿತ ಪಕ್ಷದೊಂದಿಗೆ ಹೊಂದಿಕೊಂಡು ಹೋಗುವುದು ಅಷ್ಟೇ ಅಗತ್ಯವಾಗಿರುತ್ತದೆ.

**ಶ್ರೀ ಎಸ್.ಆರ್.ಬೊಮ್ಮಾಯಿ:** ಚಳವಳಿ ಮಾಡುತ್ತೇವೆಂದರೆ ಕಾನೂನಿಗೆ ಒಳಪಟ್ಟು ಸಭಾಪತಿಯವರ ಅನುಮತಿಗೆ ಒಳಪಟ್ಟು ಇರುತ್ತೇವೆಂದು ಹೇಳುತ್ತೇವೆ. ಉತ್ತರ ಪ್ರದೇಶದಲ್ಲಿ ಚಳವಳಿಮಾಡಿದ ರೀತಿಯಲ್ಲಿ ಮಾಡುವುದಕ್ಕೆ ಹೋಗುವುದಿಲ್ಲ. ಸಮಾಜದಲ್ಲಿ ಹೊರಗೆ ಅಲ್ಲೋಲ ಕಲ್ಲೋಲವಾದರೆ ಈ ಮನೆಯ ಒಳಗೂ ಕೂಡ ಅಲ್ಲೋಲ ಕಲ್ಲೋಲವಾಗಬಹುದೆಂದು ಸರ್ಕಾರಕ್ಕೆ ಒತ್ತಿ ಹೇಳುತ್ತೇನೆ. ಭ್ರಷ್ಟಾಚಾರ, ದುರಾಡಳಿತವನ್ನು ತಡೆಗಟ್ಟಲು ಎಚ್ಚರಿಕೆಯನ್ನು ವಹಿಸಬೇಕೆಂದು ಹೇಳುವಾಗ ಹಿಂದೆ ಹೇಳಿದಂಥ ಮಾತನ್ನು ಸರ್ಕಾರದ ನೆನಪಿಗೆ ತರುತ್ತೇನೆ. ಸರ್ಕಾರದವರು ಕೊಟ್ಟಂಥ ವಾಗ್ದಾನಗಳನ್ನು ತಪ್ಪದಂತೆ ನೆರವೇರಿಸುವತ್ತ ನಮ್ಮ ಸಹಕಾರವಿದೆ ಎಂದು ಹೇಳುತ್ತಾ ನನ್ನ ಆರೋಗ್ಯವು ಚೆನ್ನಾಗಿಲ್ಲದ ಕಾರಣ ಹೆಚ್ಚಿಗೆ ವಿಚಾರಗಳನ್ನು ಹೇಳುವುದಕ್ಕೆ ಆಗಲಿಲ್ಲವಾದ ಕಾರಣ ಮುಂದೆ ಅವಕಾಶ ಸಿಕ್ಕಿದಾಗ ಉಳಿದ ವಿಷಯಗಳನ್ನು ಹೇಳುತ್ತೇನೆ. ಈಗ ತಮ್ಮ ಅಪ್ಪಣೆ ಪಡೆದುಕೊಂಡು ನನ್ನ ಮಾತುಗಳನ್ನು ಮುಗಿಸುತ್ತೇನೆ.

****

# ಬಜೆಟ್ ಮೇಲಿನ ಚರ್ಚೆ

ದಿನಾಂಕ: 14.06.1978

**ರೈತರ ಬಗ್ಗೆ ಕೇವಲ ಭಾಷಣದ ಮೂಲಕ ಕಾಳಜಿ ವ್ಯಕ್ತಪಡಿಸುವುದನ್ನು ಕಟುವಾಗಿ ಟೀಕಿಸುವ ರಾಯಿಸ್ಟ್ ಬೊಮ್ಮಾಯಿ ಅವರು ರೈತರ ಉತ್ಪನ್ನಗಳಿಗೆ ಉತ್ತಮ ಬೆಲೆ ನಿಗದಿಪಡಿಸಬೇಕು ಎಂದು ವಾದಿಸುತ್ತಿದ್ದರು. ರೈತರ ಸಮಸ್ಯೆಗೆ ಕೇವಲ ಕಾರಣ ಹುಡುಕದೆ ಅದಕ್ಕೆ ಪರಿಹಾರವನ್ನು ವೈಜ್ಞಾನಿಕ ದೃಷ್ಟಿಯಲ್ಲಿ ಹುಡುಕುವ ಜಾಣ್ಮೆ ಬೊಮ್ಮಾಯಿ ಅವರಿಗಿತ್ತು.**

**ಶ್ರೀ ಎಸ್.ಆರ್. ಬೊಮ್ಮಾಯಿ:** ಬಡ್ಜೆಟ್‌ನಲ್ಲಿ ಮುಖ್ಯವಾಗಿ ಕೇವಲ ಕೆಲವು ವಿಚಾರಗಳ ಬಗ್ಗೆ ಮಾತ್ರ ಹೇಳುತ್ತೇನೆ. ಪ್ರೈಸ್ ರೈಸ್ ಬಗ್ಗೆ ಒಂದು ವಿಚಾರ ಹೇಳಬೇಕು. ಪ್ರತಿಯೊಬ್ಬ ನಾಗರಿಕನ ಜೀವನಾವಶ್ಯಕ ವಸ್ತುಗಳ ಬಗ್ಗೆ ಬೆಲೆ ಹೇಗಿದೆ ಎನ್ನುವುದನ್ನು ನಾವು ವಿಚಾರ ಮಾಡಬೇಕು. ಇದೇ ಸಮಯದಲ್ಲಿ ರೈತನ ಒಕ್ಕಲುತನದ ಉತ್ಪಾದನೆಯ ಬಗ್ಗೆ ಹೇಳಬೇಕು ಎಂದರೆ ಅವನ ಸ್ಥಿತಿ ಗಂಡಾಂತರ ಸ್ಥಿತಿಯಲ್ಲಿದೆ ರೈತ ಕಷ್ಟಪಟ್ಟು ಉತ್ತಮ ಬೀಜಗಳನ್ನು ತೆಗೆದುಕೊಂಡು ಬಂದು ಸಾಲ ಮಾಡಿ ಗೊಬ್ಬರ ತೆಗೆದುಕೊಂಡು ಬಂದು ಹೊಸ ಹೊಸ ವಿಧಾನಗಳನ್ನು ಅಳವಡಿಸಿಕೊಂಡು ಹೆಚ್ಚು ಬೆಳೆಯನ್ನು ರೈತ ತೆಗೆಯುತ್ತಿದ್ದಾನೆ. ನಮ್ಮ ರಾಜ್ಯ ಮುಖ್ಯವಾಗಿ ಒಕ್ಕಲುತನ ಪ್ರಧಾನವಾಗಿರತಕ್ಕ ರಾಜ್ಯ ವ್ಯವಸಾಯ ರ್‍ಯಾಷನಲೈಸ್ ಮಾಡರನೈಸ್ ಮತ್ತು ಮೆಕಾನೈಸ್ ಆಗಬೇಕು. ಇದರ ನವೀಕರಣ ಅತ್ಯಾವಶ್ಯಕ ಇಲ್ಲದೇ ಹೋದರೆ ನಮ್ಮ ರಾಷ್ಟ್ರದ ಉದ್ಧಾರವೇ ಇಲ್ಲ ಕಸುಬನ್ನು ಅವಲಂಬಿಸಿರತಕ್ಕ ಜನರಿಗೆ ಇದರಲ್ಲಿ ಹೆಚ್ಚಿನ ಉತ್ಪಾದನೆ ಬರತಕ್ಕ ವ್ಯವಸ್ಥೆಯನ್ನು ಮಾಡಬೇಕು. ಆದರೆ ಅವರು ಬೆಳೆದಂಥ ವಸ್ತುಗಳನ್ನು ಮಾರ್ಕೆಟ್ಟಿನಲ್ಲಿ ಕೊಂಡುಕೊಳ್ಳುವವರೆ ಇಲ್ಲವಾಗಿದೆ. ಹೊಲದಲ್ಲಿ ಕೆಲಸ ಮಾಡತಕ್ಕ ಕಾರ್ಮಿಕರಿಗೆ ಕೆಲಸ ಇಲ್ಲ. ಅವರು ಸರಿಯಾಗಿ ಕೆಲಸ ಮಾಡತಕ್ಕ ಒಂದು ನೀತಿಯನ್ನು ಸರ್ಕಾರದವರು ಹಾಕಿಕೊಳ್ಳಬೇಕು. ಈ ಮಾತನ್ನು ಸರ್ಕಾರಕ್ಕೆ ರೈತನ ಕಷ್ಟ ಗೊತ್ತಾಗಲಿ ಎನ್ನುವ ದೃಷ್ಟಿಯಿಂದ ಹೇಳುತ್ತಿದ್ದೇನೆ. ಭತ್ತದ ಬೆಳೆ ಹೋದ ವರ್ಷಕ್ಕಿಂತ ಈ ವರ್ಷ 40 ಪರ್ಸೆಂಟ್ ಕಡಿಮೆಯಾಗಿದೆ. ಜೋಳದ ಬೆಳೆ ಹತ್ತಿಯ ಬೆಳೆ ರಾಗಿ ಬೆಳೆ ಕಡಿಮೆಯಾಗಿದೆ. ಹತ್ತಿಯನ್ನು ಯಾರೂ ಕೊಂಡುಕೊಳ್ಳುವವರಿಲ್ಲ. ಹೀಗಾಗಿ ರೈತ ವರ್ತಕರ ಬಂದಿಯಾಗಬೇಕಾಗಿದೆ. ಲೆವಿ ಕೊಡಬೇಕಾದ ಭತ್ತವನ್ನು ತೆಗೆದುಕೊಂಡು ಹೋಗಿ ತಹಸೀಲ್ದಾರ್‌ರವರ ಆಫೀಸಿನಲ್ಲಿ 8 ದಿವಸಗಳವರೆಗೆ ಕಾದು ಹಣ ಕೊಡುವವರು ಇಲ್ಲದೆ ತೊಂದರೆಗೊಳಗಾದ ಸನ್ನಿವೇಶಗಳು ಇವೆ. ಲೆವಿ ಕೊಡತಕ್ಕ

ಭತ್ತಕ್ಕೆ ಹಣ ಕೊಡುವ ವ್ಯವಸ್ಥೆಯಿಲ್ಲ. ಮಾರ್ಕೆಟ್ಟಿನಲ್ಲಿ ಹೋದರೆ ಕೊಳ್ಳುವವರು ಇಲ್ಲ. ಕಬ್ಬನ್ನು ಕಾರ್ಖಾನೆಯವರು ಕೊಂಡುಕೊಳ್ಳುತ್ತಿಲ್ಲ. ಕಬ್ಬಿನ ಬೆಲೆಯು ಕಡಿಮೆಯಾಗಿದೆ. ಇದರ ಬಗ್ಗೆ ಸರ್ಕಾರದವರು ಏನಾದರೂ ಆಲೋಚನೆ ಮಾಡಬೇಕು. ಒಟ್ಟಿನಲ್ಲಿ ರೈತನು ಬೆಳೆಯತಕ್ಕ ಬೆಳೆಗಳ ಬೆಲೆ ಸುಮಾರು 40 ಪರ್ಸೆಂಟಿನಷ್ಟು ಕಡಿಮೆಯಾಗಿದೆಯೆಂದು ನಾನು ತಿಳಿದುಕೊಂಡಿದ್ದೇನೆ. ಈ ರೀತಿಯಾದರೆ ರೈತ ಎಂದು ಹಾಡಿ ಹಾಡಿ ಹೊಗಳಿದರೆ ಸಾಲದು ಕೂಡಲೇ ಇದರ ಬಗ್ಗೆ ಏನಾದರೂ ಒಂದು ವ್ಯವಸ್ಥೆ ಮಾಡಬೇಕು. ಮಹಾರಾಷ್ಟ್ರದಲ್ಲಿ ಹತ್ತಿಕೊಳ್ಳುವ ಬಗ್ಗೆ ಒಂದು ವ್ಯವಸ್ಥೆ ಇದೆ. ಕಾಟನ್ ಕಾರ್ಪೋರೇಷನ್ ಆಫ್ ಇಂಡಿಯಾದವರು ಇಲ್ಲಿಯೂ ಹತ್ತಿಯನ್ನು ಕೊಳ್ಳುವಂತಹ ಒಂದು ವ್ಯವಸ್ಥೆಯನ್ನು ರಾಜ್ಯ ಸರ್ಕಾರದವರು ಮಾಡಬೇಕು.

**ಶ್ರೀ ಮಳ್ಳೂರು ಆನಂದರಾವ್:** ನಮ್ಮ ವಿರೋಧ ಪಕ್ಷದ ನಾಯಕರ ಭಾಷಣವನ್ನು ಯಾರೂ ಬರೆದುಕೊಳ್ಳುತ್ತಿಲ್ಲ. ಮಂತ್ರಿಗಳು ಅವರವರಲ್ಲಿಯೇ ಚರ್ಚೆಯಲ್ಲಿ ತೊಡಗಿಸಿದ್ದಾರೆ. ಅಂದರೆ ನೀವು ಏನಾದರೂ ಮಾತನಾಡಿಕೊಂಡು ಹೋಗಿ ಎಂದು ಅರ್ಥವೆ ?

**ಶ್ರೀ ಆರ್. ಗುಂಡೂರಾವ್:** ನಾವು ಮಾತನಾಡಿಕೊಂಡರೆ ನಿಮಗೆ ಹೊಟ್ಟೆಯುರಿ?

**ಶ್ರೀ ಮಳ್ಳೂರು ಆನಂದರಾವ್:** ವರದಿಗಾರರು ಮಾತ್ರ ಬರೆದುಕೊಳ್ಳುತ್ತಿದ್ದಾರೆ. ಮಂತ್ರಿಗಳು ಯಾರೂ ಬರೆದುಕೊಳ್ಳುತ್ತಿಲ್ಲ. ಮಾನ್ಯ ಆರ್ಥಿಕ ಮಂತ್ರಿಗಳು ನಿದ್ದೆ ಮಾಡುತ್ತಿರುವಂತೆ ಕಾಣುತ್ತಿದೆ.

**ಶ್ರೀ ಎಸ್.ಎಂ. ಯಾಹ್ಯಾ:** ವಿರೋಧ ಪಕ್ಷದ ನಾಯಕರು ಪ್ರಸ್ತಾಪ ಮಾಡುವ ಎಲ್ಲ ವಿಚಾರಗಳಿಗೂ ನಾನು ಉತ್ತರ ಕೊಡುತ್ತೇನೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಂತ್ರಿಗಳು ಒಬ್ಬರಿಗೊಬ್ಬರು ಮಾತನಾಡುವುದಿದ್ದರೆ ಅವರ ಛೇಂಬರಿನಲ್ಲಿ ಹೋಗಿ ಮಾತನಾಡಿಕೊಳ್ಳಲಿ, ಇಲ್ಲಿ ಬೇಡ.

ರೈತನ ಕಷ್ಟವನ್ನು ಸರ್ಕಾರದವರು ಕೂಡಲೇ ಪರಿಹಾರ ಮಾಡಬೇಕು. ಇಲ್ಲದಿದ್ದರೆ ರೈತ ಮುಳುಗಿ ಹೋಗುತ್ತಾನೆ. ನಮ್ಮ ರಾಜ್ಯದ ಕೆಲವು ಕಡೆಗಳಲ್ಲಿ ಕಳೆದ ಎರಡು ವರ್ಷಗಳಿಂದ ಬೆಳೆ ಬರಲಿಲ್ಲ. ಮೂರನೇ ವರ್ಷ ಕಷ್ಟಪಟ್ಟು ಬೆಳೆದಿರತಕ್ಕಂಥ ಬೆಳೆಯನ್ನು ಕೊಳ್ಳಲು ಸರ್ಕಾರದವರು ಏನಾದರೂ ವ್ಯವಸ್ಥೆ ಮಾಡಬೇಕು. ಏನಾದರೂ ಪರಿಹಾರ ಒದಗಿಸಬೇಕು. ಈ ಮಾತನ್ನು ಕೇಂದ್ರ

ಸರ್ಕಾರಕ್ಕೂ ಹೇಳಿ ಎಂದು ತಾವು ಹೇಳಬಹುದು. ನಾನು ಕೇಂದ್ರ ಸರ್ಕಾರಕ್ಕೂ ಈ ಮೂಲಕ ಒತ್ತಾಯ ಮಾಡುತ್ತಿದ್ದೇನೆ. ಆದರೆ ರಾಜ್ಯ ಸರ್ಕಾರ ಈ ದಿಕ್ಕಿನಲ್ಲಿ ಏನು ಪ್ರಯತ್ನ ಮಾಡಿದೆ ಎಂದು ಕೇಳುತ್ತಿದ್ದೇನೆ. ಹತ್ತಿ ಕೊಳ್ಳುವ ಬಗ್ಗೆ ಏನು ವ್ಯವಸ್ಥೆ ಮಾಡಲಾಗಿದೆ ಎಂದು ಕೇಳುತ್ತಿದ್ದೇನೆ. ಕಾಟನ್ ಕಾರ್ಪೊರೇಷನ್ ಆಫ್ ಇಂಡಿಯಾದವರ ಹತ್ತಿರ ನೂರಾರು ಕೋಟಿ ರೂಪಾಯಿಗಳ ಬಂಡವಾಳವಿದೆ. ಈ ಕಾರ್ಪೊರೇಷನ್ ಅವರ ಮೇಲೆ ಯಾವ ಯಾವ ರಾಜ್ಯ ಸರ್ಕಾರಗಳು ಪರಿಣಾಮಕಾರಿಯಾಗದಂಥ ರೀತಿಯಲ್ಲಿ ಒತ್ತಾಯ ತರುತ್ತವೋ ಅಂತಹ ರಾಜ್ಯಗಳಲ್ಲಿ ಈ ಕಾರ್ಪೊರೇಷನ್ ಅವರು ಹತ್ತಿಯನ್ನು ಖರೀದಿ ಮಾಡಿದ್ದಾರೆ. ಆದರೆ ಇಲ್ಲಿ ಏತಕ್ಕೆ ಮಾಡುತ್ತಿಲ್ಲ ಈ ಬಗ್ಗೆ ವ್ಯವಸಾಯ ಮಂತ್ರಿಯವರು ಏನು ಪ್ರಯತ್ನ ಮಾಡಿದ್ದಾರೆಂಬುದನ್ನು ನಾನು ಕೇಳುತ್ತಿದ್ದೇನೆ. 1973ರಲ್ಲಿ ಇಂತಹ ಪ್ರಸಂಗ ಬಂದಾಗ ಆಗಿನ ವ್ಯವಸಾಯ ಮಂತ್ರಿಗಳು ದೆಹಲಿ ಮತ್ತು ಮುಂಬೈಗೆ ಹೋಗಿ ಸಂಬಂಧಪಟ್ಟವರೊಡನೆ ಮಾತನಾಡಿ ಬಂದರು. ನಂತರ ಕಾಟನ್ ಕಾರ್ಪೊರೇಷನ್ ಆಫ್ ಇಂಡಿಯಾದವರು ನಮ್ಮ ರಾಜ್ಯದಲ್ಲಿ 10 ಕೋಟಿ ರೂ.ಗಳಷ್ಟು ಹತ್ತಿಯನ್ನು ಖರೀದಿ ಮಾಡಿದರು. ಆಗ ರೈತರಿಗೆ ಪರಿಹಾರ ಸಿಕ್ಕಿತು. ಆದರೆ ಇಂದು ನಮ್ಮ ವ್ಯವಸಾಯ ಮಂತ್ರಿಗಳು ಏನು ಮಾಡುತ್ತಿದ್ದಾರೆ ? ನಿದ್ದೆ ಹೊಡೆಯುತ್ತಿದ್ದಾರೆಯೇ? ಹತ್ತಿ, ಭತ್ತ, ಕಬ್ಬು ಬೆಳೆದ ರೈತರ ಕಷ್ಟಗಳ ಬಗ್ಗೆ ಪತ್ರಿಕೆಯವರು ಚಿತ್ರಗಳನ್ನು ಕೊಟ್ಟು ಪ್ರಕಟಿಸಿದ್ದಾರೆಯೇ ಈ ದಿಶೆಯಲ್ಲಿ ಸರ್ಕಾರ ಏನು ಕ್ರಮ ತೆಗೆದುಕೊಂಡಿದೆ ? ಕಾಟನ್ ಕಾರ್ಪೊರೇಷನ್ ಆಫ್ ಇಂಡಿಯಾದವರು ಮಾರ್ಕೆಟಿಂಗ್ ಫೆಡರೇಷನ್ ಅವರು ಕೋಆಪರೇಟಿವ್ ಸಂಸ್ಥೆಗಳವರು ಮತ್ತು ಸಂಬಂಧಪಟ್ಟ ಇಲಾಖೆಯವರು ಏನು ಪ್ರಯತ್ನ ಮಾಡಿದ್ದಾರೆಂದು ನಾನು ಕೇಳುತ್ತಿದ್ದೇನೆ. ರೈತ ಇಂದು ಕಷ್ಟದಲ್ಲಿದ್ದಾನೆ. ತಾನು ಬೆಳೆದಿದ್ದನ್ನು ತನ್ನಲ್ಲಿಯೇ ಸ್ಟೋರ್ ಮಾಡಿಕೊಳ್ಳಲು ಆತನಿಗೆ ಸಾಧ್ಯವಿಲ್ಲ. ಆದ ಕಾರಣ ಆತನು ಕೈಗೆ ಬಂದ ಬೆಳೆಯನ್ನು ಧಾರಣೆಗೆ ಮಾರಾಟ ಮಾಡಿ ಇಂದು ದಿವಾಳಿಯಾಗಿದ್ದಾನೆ. ಇದನ್ನೆಲ್ಲಾ ವಿಚಾರ ಮಾಡಲು ಸರ್ಕಾರಕ್ಕೆ ಸಮಯವಿಲ್ಲವೆಂದು ಕಾಣುತ್ತಿದೆ. ರೈತರ ಈ ಸಮಸ್ಯೆಗಳನ್ನು ಬಿಡಿಸುವ ಬಗ್ಗೆ ರಾಜ್ಯ ಮಟ್ಟದಲ್ಲಿ ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ ಮತ್ತು ಕೇಂದ್ರ ಸರ್ಕಾರದ ಮೇಲೆ ಯಾವ ರೀತಿ ಪ್ರಭಾವ ಬೀರಿದೆ ಎಂಬುದನ್ನು ನಾನು ಕೇಳ ಬಯಸುತ್ತೇನೆ. ನಮ್ಮ ರೈತರು ಬಹಳ ಒಳ್ಳೆಯವರು ಮತ್ತು ಅವರು ಸೌಮ್ಯ ಜನರು. ಅದೇ ತಮಿಳುನಾಡಿನಲ್ಲಿ ರೈತರ ಚಳವಳಿ ಎಂದು ಉಗ್ರ ಸ್ವರೂಪ ತಳೆದಿದೆ. ಆದರೆ ನಮ್ಮಲ್ಲಿ ಕಾರ್ಮಿಕರಂತೆ ರೈತರು ಇನ್ನೂ ಸಂಘಟಿತರಾಗಿಲ್ಲ. ಕಾರ್ಮಿಕರೇನಾದರೂ ಸಂಪು ಮಾಡಿದರೆ ಅವರ ಸಮಸ್ಯೆಗಳನ್ನು ಬಿಡಿಸುವುದಕ್ಕೆ ಸರ್ಕಾರ ಕೂಡಲೇ ಪ್ರಯತ್ನ ಮಾಡುತ್ತದೆ. ಅವರು ಒಂದು ದಿನ ಸತ್ಯಾಗ್ರಹ

ಮಾಡಿದರೆ ಸಾಕು, 20 ಕೋಟಿ ಅಲ್ಲ 30 ಕೋಟಿ ರೂಪಾಯಿ ಆದರೂ ಸರಿಯೇ ತುಟ್ಟಿಭತ್ಯೆವನ್ನು ಜಾಸ್ತಿ ಮಾಡಲಾಗುತ್ತದೆ. ಆದರೆ ರೈತರ ಕಷ್ಟಗಳನ್ನು ಕೇಳುವವರೇ ಇಲ್ಲ. ಇದಕ್ಕೆ ಕಾರಣ ಅವರು ಸಂಘಟಿತರಾಗಿಲ್ಲ. ಅವರು ಮೂಕ ಪ್ರಾಣಿಗಳಾಗುತ್ತಿದ್ದಾರೆ. ಇಂತಹವರಿಗೆ ಸಹಾಯ ಮಾಡುವ ಮನಸ್ಸು ಸರ್ಕಾರಕ್ಕೆ ಇಲ್ಲ. ರೈತರ ಬಗ್ಗೆ ಸರ್ಕಾರಕ್ಕೆ ಕಿಂಚಿತ್ ಏನಾದರೂ ಕಳಕಳಿ ಇದ್ದರೆ ಕೂಡಲೇ ಈ ಬಗ್ಗೆ ಏನಾದರೂ ಕ್ರಮ ಕೈಗೊಳ್ಳಬೇಕು. ಇಲ್ಲದಿದ್ದರೆ ರೈತ ಉಳಿಯುವುದಿಲ್ಲ. ಮುಂದಿನ ವರ್ಷದೊಳಗೆ ಆತನ ಎತ್ತುಗಳೂ ಸಹ ಇರುವುದಿಲ್ಲ. ಟ್ರಾಕ್ಟರ್ ಸಹ ಇರುವುದಿಲ್ಲ. ರೈತರು ದಿವಾಳಿಯಾದರೆ ನಂತರ ಏನು ಮಾಡುತ್ತಾರೋ ಗೊತ್ತಿಲ್ಲ. ರೈತರು ಬೆಳೆ ಬೆಳೆಯದಿದ್ದರೆ ನಾವು ಆಕಾಶ ನೋಡಬೇಕಾಗುತ್ತದೆ. ಅದೇ ರೀತಿ ರೈತರು ಏನಾದರೂ ಸಂಪು ಹೂಡಿದರೆ ಅವರು ಸಹ ಆಕಾಶ ನೋಡಬೇಕಾಗುತ್ತದೆಯೇ ಹೊರತು ಪರಿಹಾರವೇನೂ ಸಿಗುವುದಿಲ್ಲ. ಇಂತಹ ರೈತರ ಕಷ್ಟವನ್ನು ಬಿಡಿಸಲು ಸರ್ಕಾರ ಗಂಭೀರವಾಗಿ ಆಲೋಚನೆ ಮಾಡಬೇಕು. ಮಾನ್ಯ ಮಂತ್ರಿಗಳು ಉತ್ತರಕೊಡುವಾಗ ಈ ಬಗ್ಗೆ ಏನೇನು ಕಾರ್ಯಕ್ರಮ ತೆಗೆದುಕೊಳ್ಳಲಾಗಿದೆ ಎಂಬುದನ್ನು ಹೇಳಬೇಕು. ರೈತರನ್ನು ಉಳಿಸದಿದ್ದರೆ ಒಕ್ಕಲುತನ ಈ ರಾಜ್ಯದಲ್ಲಿ ಸಂಪೂರ್ಣವಾಗಿ ಕೆಳಮಟ್ಟಕ್ಕೆ ಹೋಗಿಬಿಡುತ್ತದೆ. ಆ ರೀತಿ ಆಗುವುದಕ್ಕೆ ಅವಕಾಶ ಕೊಡಬಾರದೆಂದು ಹೇಳುತ್ತೇನೆ.

ಮತ್ತೊಂದು ಮೋಜಿನ ಸಂಗತಿಯೆಂದರೆ ಜನತಾ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ದೇಶದಲ್ಲಿ ಆಹಾರ ಪದಾರ್ಥಗಳ ಬೆಲೆಗಳು ಇಳಿಯಲಿಲ್ಲ ಎಂದು ಹೇಳುತ್ತಿರುವವರು ಭಾರತದ ಮಟ್ಟದಲ್ಲಿದ್ದಾರೆ. ಬೆಲೆಗಳನ್ನು ಇಳಿಸಬೇಕೆಂದು ಒಂದು ಕಡೆ ಪ್ರಚಾರ ಮಾಡುತ್ತಿದ್ದಾರೆ. ಆದರೆ ಮತ್ತೊಂದು ಕಡೆ ರೈತರು ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗುತ್ತಿಲ್ಲ. ರೈತರು ಹೋಲ್ ಸೇಲ್ ದರದಲ್ಲಿ ಮಾರಾಟ ಮಾಡುವಾಗ ಬೆಲೆಗಳು ಕಡಿಮೆಯೇ ಇದೆ. ಆದರೆ ಆ ಪದಾರ್ಥಗಳು ಗ್ರಾಹಕರಿಗೆ ಮುಟ್ಟುವಾಗ ಅದರ ಬೆಲೆ ಜಾಸ್ತಿಯಾಗಿರುತ್ತದೆ. ಬೆಂಗಳೂರು, ಹುಬ್ಬಳ್ಳಿ, ಮೈಸೂರು ಮುಂತಾದ ನಗರಗಳಲ್ಲಿ ಇದೇ ರೀತಿ ಬೆಲೆಗಳು ಗ್ರಾಹಕರಮಟ್ಟದಲ್ಲಿ ಜಾಸ್ತಿಯಾಗಿರುವುದಕ್ಕೆ ಕಾರಣವೇನು ? ಇದನ್ನು ಸರ್ಕಾರ ಆಲೋಚನೆ ಮಾಡಬೇಕು ? ರೈತರು ಕಡಿಮೆ ದರದಲ್ಲಿ ಮಾರಾಟ ಮಾಡಿದರೂ ಸಹ ಗ್ರಾಹಕರಿಗೆ ಅದು ಕಡಿಮೆಯ ದರದಲ್ಲಿ ಸಿಗದಿರುವುದಕ್ಕೆ ಕಾರಣ ಸರ್ಕಾರದ ಪಾಲಿಸಿ ಆಫ್ ಟ್ಯಾಕ್ಸೇಷನ್, ಮಲ್ಟಿ ಪಾಯಿಂಟ್ ಸೇಲ್ಸ್ ಟ್ಯಾಕ್ಸ್ ಇದೆ. ರೈತರು ಒಂದು ಸಲ ತಮ್ಮ ಮಾಲನ್ನು ಮಾರಾಟ ಮಾಡಿದ ಮೇಲೆ ಅದು ವ್ಯಾಪಾರಿಗಳ ಮಟ್ಟದಲ್ಲಿ 34 ಕೈ ದಾಟಿದರೆ ಅಷ್ಟು ಸಲವೂ ತೆರಿಗೆ ಕೊಡಬೇಕಾಗುತ್ತದೆ. ಇದರ ಜೊತೆಗೆ ಅಗ್ರಿಕಲ್ಚರಲ್ ಪ್ರೊಡ್ಯೂಸ್

ಮಾರ್ಕೆಟ್‌ನವರು ಸಹ ಸೆಸ್ ಹಾಕುತ್ತಾರೆ. ಇಂದೇ ಮಾಲನ್ನು ಹುಬ್ಬಳ್ಳಿ, ಹಾವೇರಿ, ಧಾರವಾಡ, ಬೆಂಗಳೂರು ಹೀಗೆ ನಾನಾ ಕಡೆಗಳಲ್ಲಿ ಮಾರಾಟ ಮಾಡಿದಾಗಲೆಲ್ಲಾ ಇವರು ಸೆಸ್ ಹಾಕುತ್ತಾರೆ. ಇದು ನನಗೆ ಅರ್ಥವಾಗುವುದಿಲ್ಲ. ಮಾರ್ಕೆಟಿಂಗ್ ಕಮಿಟಿಯನ್ನು ಡೆವಲಪ್ ಮಾಡುವುದಕ್ಕಾಗಿ ಮತ್ತು ವರ್ಲ್ಡ್ ಬ್ಯಾಂಕಿನವರು ಕೊಟ್ಟ ಸಾಲವನ್ನು ತುಂಬುವುದಕ್ಕಾಗಿ ಈ ಸೆಸ್ ಹಣವನ್ನು ಹಾಕುತ್ತಿದ್ದಾರೆ. ಮೊದಲು ಹತ್ತು ಇಪ್ಪತ್ತು ಪೈಸೆ ಸೆಸ್ ಇತ್ತು. ಅದನ್ನು ಈಗ ಒಂದು ರೂಪಾಯಿ ಮಾಡಿದ್ದಾರೆ. ಅಂದರೇ ಒಂದೇ ಸಲ ಇದನ್ನು 56 ಪಟ್ಟು ಹೆಚ್ಚು ಮಾಡಿದರು. ಇದರ ಜೊತೆಗೆ ಮಲ್ಟಿ ಪಾಯಿಂಟ್ ಟ್ಯಾಕ್ಸ್ ಬೇರೆ ಕೊಡಬೇಕು. ಹುಬ್ಬಳ್ಳಿಯಲ್ಲಿ ರೈತ ಕಲ್ಲಪ್ಪನಿಗೆ ತನ್ನ ಮಾಲನ್ನು ಮಾರಾಟಮಾಡಿದಾಗ ಒಂದು ಸಲ ಕಲ್ಲಪ್ಪ, ಮಲ್ಲಪ್ಪನಿಗೆ ಅದೇ ಮಾಲನ್ನು ಮಾರಾಟ ಮಾಡಿದಾಗ ಒಂದು ಸಲ ಮಲ್ಲಪ್ಪ ಚೆನ್ನಪ್ಪನಿಗೆ ಅದೇ ಮಾಲನ್ನು ಮಾರಾಟ ಮಾಡಿದಾಗ ಒಂದು ಸಲ ಮಲ್ಲಪ್ಪ ಚೆನ್ನಪ್ಪನಿಗೆ ಅದೇ ಮಾಲನ್ನು ಮಾರಾಟ ಮಾಡಿದಾಗ ಇನ್ನೊಂದು ಸಲ ಹೀಗೆ 3 ಸಲ ಟ್ಯಾಕ್ಸ್ ಕೊಡಬೇಕು ಇದರ ಜೊತೆಗೆ ಕಮಿಷನ್ ಏಜೆಂಟ್ಸ್ ಎಂಬುದಾಗಿ ಇರುತ್ತಾರೆ. ಇವರೆಲ್ಲರ ಕೈದಾಟಿ ಗ್ರಾಹಕರಿಗೆ ಅದು ಮುಟ್ಟುವಾಗ ಅದರ ಬೆಲೆ ಜಾಸ್ತಿಯಾಗಿರುತ್ತದೆ. ರೈತ ತನ್ನಲ್ಲಿರುವ ಭತ್ತವನ್ನು ಕ್ವಿಂಟಾಲಿಗೆ 8090 ರಂತೆ ಮಾರಾಟ ಮಾಡುತ್ತಾನೆ. ಅಕ್ಕಿಯಾದರೆ ಕ್ವಿಂಟಾಲ್ ಒಂದಕ್ಕೆ 130 ರಿಂದ 140 ರೂಪಾಯಿಗಳ ಪ್ರಕಾರ ಮಾರಾಟ ಮಾಡುತ್ತಾನೆ. ಆದರೆ ಅದು ಗ್ರಾಹಕನಿಗೆ ಮುಟ್ಟುವಾಗ ಅದರ ಬೆಲೆ 200 ರೂಪಾಯಿಗಳಾಗಿರುತ್ತದೆ. ಒಟ್ಟಿನಲ್ಲಿ ಗ್ರಾಹಕನಿಗೆ ಏನೂ ಅನುಕೂಲವಾಗುತ್ತಿಲ್ಲ. ಇದು ನಿಲ್ಲಬೇಕು. ಒಂದೇ ಹಂತದಲ್ಲಿ ತೆರಿಗೆ ಹಾಕಬೇಕು. ಈಗಿನ ಒಂದು ವ್ಯವಸ್ಥೆಯಿಂದ ಕಳ್ಳ ವ್ಯಾಪಾರಿಗಳಿಗೆ ಅನುಕೂಲವಾಗಿದೆ.

ಅನೇಕ ಜನ ಕಳ್ಳ ವ್ಯಾಪಾರ ಮಾಡುತ್ತಿದ್ದಾರೆ. ಅದನ್ನು ಯಾವ ರೀತಿ ಮಾಡುತ್ತಾರೆ ಎಂದು ನಾನು ಹೇಳುವುದಿಲ್ಲ. ಇದರಿಂದ ಸರ್ಕಾರಕ್ಕೂ ಟ್ಯಾಕ್ಸ್ ಸರಿಯಾಗಿ ಬರುತ್ತಾ ಇಲ್ಲ. ಗ್ರಾಹಕರಿಗೂ ಲಾಭವಿಲ್ಲ. ರೈತನಿಗೂ ಲಾಭವಿಲ್ಲ. ಗ್ರಾಹಕನಿಗೆ ಯೋಗ್ಯ ಬೆಲೆಯಲ್ಲಿ ಪದಾರ್ಥಗಳು ಸಿಕ್ಕುವಂತೆ ವ್ಯವಸ್ಥೆ ಮಾಡಬೇಕು. ಮಾನ್ಯ ಅರ್ಥಮಂತ್ರಿಗಳು ತಮ್ಮ ಭಾಷಣದಲ್ಲಿ 15,000 ಫೇರ್ ಪ್ರೈಸ್ ಷಾಪ್ಸ್ ರಾಜ್ಯದ ಸೂಕ್ತ ಸ್ಥಳಗಳಲ್ಲಿವೆ. ನಮ್ಮಲ್ಲಿ 1.72 ಲಕ್ಷಟನ್‌ಗಳನ್ನು ಭತ್ತ ದಾಸ್ತಾನು ಇದೆ ಎನ್ನುವ ಮಾತನ್ನು ಹೇಳಿದ್ದಾರೆ. ಈ ಮಾತನ್ನು ನಾನು ಒಪ್ಪುತ್ತೇನೆ. ಈ ಅಂಗಡಿಗಳು ಇನ್ನೂ ಹೆಚ್ಚಾಗಬೇಕೆ ಮತ್ತು ಸರಿಯಾದ ರೀತಿಯಲ್ಲಿ ನಡೆಯಬೇಕು ಎಂದು ನಾನು ಹೇಳುತ್ತೇನೆ. ಸರ್ಕಾರದವರು ಏನು ಆಹಾರ ಧಾನ್ಯಗಳನ್ನು ಸಂಗ್ರಹಣೆ ಮಾಡಿದ್ದಾರೆ ಅದರ ಬಗ್ಗೆ ನಾನು ಒಂದು ಮಾತನ್ನು ಹೇಳುತ್ತೇನೆ. ಈ

3 ವರ್ಷಗಳಲ್ಲಿ ಆಹಾರ ಧಾನ್ಯಗಳನ್ನು ರೈತರ ತಲೆ ಬಡಿದು ತೆಗೆದುಕೊಂಡಿದ್ದೀರಿ. ಭತ್ತ 200=00 ರೂಪಾಯಿ ಇದ್ದಾಗ 70 ರೂಪಾಯಿನಂತೆ ರೈತನಿಂದ ತೆಗೆದುಕೊಂಡಿದ್ದೀರಿ. ಅದನ್ನು ಏನು ಮಾಡಿದ್ದೀರಿ. ಅದರಲ್ಲಿ ಕೆಲವೊಂದು ಭಾಗವನ್ನು ಗ್ರಾಹಕರಿಗೆ ಹಂಚಿದ್ದೀರಿ. ಅದನ್ನು ನಾನು ಒಪ್ಪುತ್ತೇನೆ. ಅದರಲ್ಲಿ ಬಹುಭಾಗ ಎಲ್ಲೆಲ್ಲಿ ಇತ್ತೋ ಅಲ್ಲಲ್ಲಿ ಹಾಳಾಗಿ ಹೋಗಿದೆ. ನಾನು ತೋರಿಸುತ್ತೇನೆ. ಧಾರವಾಡ ಜಿಲ್ಲೆಯಲ್ಲಿ ತಮಗೆ ಗೊತ್ತಿದ್ದ ಹಾಗೆ ಅಲ್ಲಿ ಗೋಡಾನ್‌ನಲ್ಲಿದ್ದಂಥ ಆಹಾರ ಧಾನ್ಯ ಹಾಳಾಗಿ ಹೋಗಿತ್ತು ಅದಕ್ಕೆ ರೂಲ್ಸ್ ಮಾಡಿ ಹೋದ ಸಲ ಮಾರಾಟ ಮಾಡಿದ್ದೀರಿ. ಮಾರಾಟ ಮಾಡುವಾಗ ಯಾವ ಸ್ಥಿತಿಯಲ್ಲಿತ್ತು ಎಂದರೆ ಅದನ್ನು ಜನ ತಿನ್ನುವುದಂತೂ ಬಿಡಿ, ದನ ತಿನ್ನುವ ಮಟ್ಟದಲ್ಲಿತ್ತು. ಅದನ್ನು ಷಾಪ್ಸ್‌ಗೆ ಹಂಚಿದರು. ಕಡೆಗೆ ಷಾಪ್ಸ್‌ನಲ್ಲಿ ಮಾರಾಟವಾಗಲಿಲ್ಲ. ಈ ರೀತಿ ಅನೇಕ ಗೋಡಾನ್‌ಗಳಲ್ಲಿ ತಕ್ಕಂಥ ಭತ್ತವಾಗಲೀ, ಜೋಳವಾಗಲೀ ಅಕ್ಕಿಯಾಗಲೀ ಎಲ್ಲವೂ ಹಾಳಾಗಿ ಹೋಗಿದೆ. ಅದಕ್ಕೋಸ್ಕರ ನಾನು ಮಾನ್ಯ ಅರ್ಥ ಮಂತ್ರಿಗಳ ಅವಗಾಹನೆಗೆ ತರುವುದೇನೆಂದರೆ, ತಾವು ಹಣವನ್ನು ಕೊಡುತ್ತೀರಿ ಅಧಿಕಾರಿಗಳು ಕಂಡೆಮ್ಡ್ ಸ್ಟಾಕೆಂದು ಹೇಳಿ ಮಿಲ್‌ನವರಿಗೆ, ವ್ಯಾಪಾರಸ್ಥರಿಗೆ ಅದನ್ನು ಡಿಸ್ಪೋಸ್ ಮಾಡುತ್ತಿದ್ದಾರೆ. ಧಾರವಾಡ ಜಿಲ್ಲೆಯಲ್ಲಿ ನಾನು ಪರೀಕ್ಷೆ ಮಾಡಿದ್ದೇನೆ. ಅವಲಕ್ಕಿ ಮುಂತಾದವನ್ನು ಗ್ರಾಹಕರಿಗೆ ಕೊಡುವುದಕ್ಕಿಂತ ಕಡಿಮೆ ಬೆಲೆಗೆ ಪ್ರೈವೇಟ್ ಮರ್ಚೆಂಟ್ಸ್‌ಗೆ ಹೆಚ್ಚು ಭಾಗ ಮಾರುತ್ತಾ ಇದ್ದಾರೆ. ಅಲ್ಲಿ ಅಧಿಕಾರಿಗಳು ಪ್ರತಿಯೊಂದು ಬ್ಯಾಗ್ ಪ್ಯಾಡಿಯನ್ನು ಮಾರಲು 5 ರೂಪಾಯಿ ನಿಗದಿ ಮಾಡಿಕೊಂಡಿರುತ್ತಾರೆ. ಪ್ರತಿ ದಿನ ಐದಾರು ಬ್ಯಾಗುಗಳನ್ನು ಮಾರಾಟ ಮಾಡತಕ್ಕಂಥ ವ್ಯವಸ್ಥೆ ನಡೆಯುತ್ತಾ ಇದೆ. ರೈತನ ತಲೆ ಬಡಿದು ತೆಗೆದುಕೊಂಡಂಥ ಭತ್ತವನ್ನು ಈ ರೀತಿ ವ್ಯಾಪಾರಸ್ಥರಿಗೆ ಮಾರುತ್ತಾ ಇದ್ದಾರೆ. ಫುಡ್ ಡಿಪಾರ್ಟ್‌ಮೆಂಟಿನಲ್ಲಿನ ಅಂಕಿ ಸಂಖ್ಯೆಗಳನ್ನು ತೆಗೆದುಕೊಂಡರೆ ಅಲ್ಲಿ ನಡೆಯತಕ್ಕಂಥ ಅವ್ಯವಹಾರಗಳು ಗೊತ್ತಾಗುತ್ತದೆ. ಸಂಗ್ರಹ ಮಾಡಿದ್ದರಲ್ಲಿ ವ್ಯಾಪಾರಸ್ಥರಿಗೆ ಮತ್ತು ಕನ್ಸ್ಯೂಮರ್ಸ್‌ಗೆ ಎಷ್ಟು ಹಂಚಿದ್ದಾರೆ ಎಂದು ಲೆಕ್ಕ ತೆಗೆದುಕೊಂಡರೆ ಗೊತ್ತಾಗುತ್ತದೆ. ಇದರಲ್ಲಿ ಸರ್ಕಾರದ ಹಣ ಅಪವ್ಯಯವಾಗುತ್ತಾ ಇದೆ ಇದನ್ನು ನಿಲ್ಲಿಸಬೇಕು ಎಂದು ನಾನು ಈ ಸಂದರ್ಭದಲ್ಲಿ ಕೇಳಿಕೊಳ್ಳುತ್ತೇನೆ. ಮೊನ್ನೆ ಪತ್ರಿಕೆಯಲ್ಲಿ ಬಂದಿದೆ. ಏನೆಂದರೆ, ಕೇಂದ್ರದಿಂದ ಬಂದಂಥ ಗೋಧಿಯನ್ನು ಫುಡ್ ಡಿಪಾರ್ಟ್‌ಮೆಂಟ್‌ನವರು 50 ಲಕ್ಷ ರೂಪಾಯಿಗಳ ಲಾಭ ಮಾಡಿಕೊಂಡು ಮಾರಿದರು ಎನ್ನುವ ವಿಚಾರ ಪತ್ರಿಕೆಯಲ್ಲಿ ಬಂದಿದೆ. ಈ ರೀತಿ ಸರ್ಕಾರ ಏಕೆ ಮಾಡಿತು ಎನ್ನುವುದನ್ನು ಹೇಳಬೇಕು. ಬಡ ಗ್ರಾಹಕನಿಗೆ ಮುಟ್ಟಬೇಕು ಎಂದು ಕೇಂದ್ರ ಸರ್ಕಾರ ಕೊಟ್ಟಂಥ ಗೋಧಿಯನ್ನು ಸರ್ಕಾರ ಲಾಭ ಮಾಡಿಕೊಂಡು ಮಾರಾಟ ಮಾಡಿದೆ. ಕೇಂದ್ರ ಸರ್ಕಾರದ ಉದ್ದೇಶವನ್ನು ಕೈಬಿಟ್ಟು ಸರ್ಕಾರ ವ್ಯಾಪಾರಿ ಮನೋಭಾವದಿಂದ ಮಾರಾಟ

ಮಾಡಿರುವುದು ಗ್ರಾಹಕನ ದೃಷ್ಟಿಯಿಂದ ಸರಿಯಲ್ಲ. ಆಹಾರ ಧಾನ್ಯಗಳ ಸಂಗ್ರಹಣೆ, ವಿತರಣೆ ಮತ್ತು ಅದರ ಬಂಡವಾಳದ ಬಗ್ಗೆ ಸರ್ಕಾರ ಬಹಳ ದೀರ್ಘವಾಗಿ ಆಲೋಚನೆ ಮಾಡಬೇಕು. ಮೊಟ್ಟ ಮೊದಲನೆಯದಾಗಿ ಹೇಳುವುದಾದರೆ, ಲೆವಿ ಕೊಟ್ಟಂಥ ರೈತನಿಗೆ ಕೂಡಲೇ ಹಣ ಕೊಡತಕ್ಕ ವ್ಯವಸ್ಥೆಯಾಗಬೇಕು. ಕಡಿಮೆ ಬೆಲೆಯಲ್ಲಿ ಕೊಡತಕ್ಕಂಥ ರೈತ ಹಣಕ್ಕಾಗಿ 24 ಗಂಟೆ ತಹಶೀಲ್ದಾರ್ ಆಫೀಸಿನಲ್ಲಿ ಕಾಯುವ ರೀತಿ ಇರಬಾರದು. ಅವನಿಗೆ ಒಂದು ವಾರದಲ್ಲಿ ಹಣ ಕೊಡುವ ವ್ಯವಸ್ಥೆ ಮಾಡಬೇಕು ಎಂದು ನಾನು ಒತ್ತಾಯ ಪೂರ್ವಕವಾಗಿ ಹೇಳುತ್ತಿದ್ದೇನೆ. ಇದರ ಜೊತೆಗೆ ಸಂಗ್ರಹಣೆಯಲ್ಲಿರತಕ್ಕ ಆಹಾರ ಧಾನ್ಯ ಎಷ್ಟು ಕೆಟ್ಟಿದೆ. ಎಂಬುದನ್ನು ಪರೀಕ್ಷೆ ಮಾಡಬೇಕು. ನನಗೆ ಸಿಕ್ಕಿರತಕ್ಕ ಮಾಹಿತಿ ಪ್ರಕಾರ ತಮ್ಮ ಸಂಗ್ರಹಣೆಯಲ್ಲಿ ಮೂರನೇ ಒಂದು ಭಾಗ ಕೊಳೆತು ಹೋಗಿದೆ. ತಾವು ಗೋಡಾನ್‌ನಲ್ಲಿರತಕ್ಕ ಕೆಟ್ಟು ಹೋಗಿರತಕ್ಕ ಪದಾರ್ಥವನ್ನು ಈಗಾಗಲೇ ಹಂಚಿದ್ದೀರಿ, ಹಂಚುವಾಗ ಮಾಡಿದಂಥ ಅವ್ಯವಹಾರಗಳನ್ನು ನಾನು ಹೋದ ಸಲ ಭಾಷಣದಲ್ಲಿ ಹೇಳಿದ್ದೇನೆ. ಕೋಟ್ಯಂತರ ರೂಪಾಯಿ ಬೆಲೆ ಬಾಳುವ ಪದಾರ್ಥಗಳನ್ನು ಮಾರಿದ್ದಾರೆ. ಸರ್ಕಾರ ಇದನ್ನು ತನಿಖೆ ಮಾಡಬೇಕು. ಗ್ರಾಹಕರಿಗೆ ಆಹಾರ ಪದಾರ್ಥಗಳು ಯೋಗ್ಯ ಬೆಲೆಯಲ್ಲಿ ಸಿಗತಕ್ಕ ವ್ಯವಸ್ಥೆಯನ್ನು ಮಾಡಬೇಕು. ಟ್ಯಾಕ್ಸೇಷನ್ ಪಾಲಿಸಿಯನ್ನು ರಿವೈಸ್ ಮಾಡಬೇಕು. ಅಗ್ರಿಕಲ್ಚರಲ್ ಸೆಸ್ ಅನ್ನು ಒಂದು ಪಾಯಿಂಟ್ ಮಾಡಬೇಕು. ಒಂದು ಕಡೆ ಟ್ಯಾಕ್ಸ್ ಕೊಟ್ಟರೆ ಇನ್ನೊಂದು ಕಡೆ ಕೊಡುವ ಅವಶ್ಯಕತೆ ಇಲ್ಲ. ರೆಗ್ಯುಲೇಟೆಡ್ ಮಾರ್ಕೆಟ್ ಕಮಿಟಿ ಖಾತೆಯ ಮಂತ್ರಿಗಳು ಇದ್ದಾರೆ ಅವರಿಗೆ ಇದರ ಬಗ್ಗೆ ರೆಪ್ರಸೆಂಟೇಷನ್ ಕೊಟ್ಟಿದ್ದೇವೆ. ಇದರ ಬಗ್ಗೆ ಮಾನ್ಯ ಮಂತ್ರಿಗಳೂ ಕೂಡ ಭರವಸೆ ಕೊಟ್ಟಿದ್ದಾರೆ. ಅದು ತೀವ್ರವಾಗಿ ಆಗಬೇಕು. ಆಗದೇ ಹೋದರೆ ಗ್ರಾಹಕರಿಗೆ ಬೆಲೆ ಏರಿಕೆಯಿಂದ ಲಾಭ ಸಿಕ್ಕುವುದಿಲ್ಲ.

*****

# ಕೈಗಾರಿಕಾ ಉದ್ಯಮಗಳ ಮೇಲಿನ ಚರ್ಚೆ

ದಿನಾಂಕ: 14.6.1978

**ಕೃಷಿಯಷ್ಟೇ ಆದ್ಯತೆ ಕೈಗಾರಿಕೆಗಳಿಗೂ ಇರಬೇಕು. ಈ ಕೈಗಾರಿಕೆಗಳು ಈ ನೆಲದ ಪರಿಸರ, ಸಾಮಾಜಿಕ ಪರಿಸ್ಥಿತಿಗೆ ಅನುಕೂಲವಾಗಿದ್ದರೆ ರಾಜ್ಯ ಅಭಿವೃದ್ಧಿಗೆ ಪೂರಕವಾಗುತ್ತವೆ ಎಂಬ ಆಲೋಚನೆ ಹೊಂದಿದ್ದ ಬೊಮ್ಮಾಯಿ ಅವರು ವಿರೋಧ ಪಕ್ಷದ ನಾಯಕರಾಗಿ ರಾಜ್ಯ ಕೈಗಾರಿಕಾ ಕ್ಷೇತ್ರದ ಅಭಿವೃದ್ಧಿಗೆ ಪೂರಕವಾಗಲು ಹೊಸ ಆಲೋಚನೆಗಳನ್ನು ಒದಗಿಸಿದ್ದಾರೆ.**

**ಶ್ರೀ ಎಸ್.ಆರ್. ಬೊಮ್ಮಾಯಿ:** ಇನ್ನು ಕೈಗಾರಿಕೆಗಳ ಬಗ್ಗೆ ಹೇಳಬೇಕಾಗಿದೆ. ಈ ರಾಜ್ಯದ ಉದ್ಯಮಗಳ ಚಿತ್ರವನ್ನು ನಾವು ಕಣ್ಣ ಮುಂದೆ ತೆಗೆದುಕೊಂಡರೆ ಸಂಪೂರ್ಣವಾಗಿ ಕತ್ತಲೆ ಕಾಣಿಸುತ್ತದೆ. ಕಳೆದ 6 ವರ್ಷಗಳಲ್ಲಿ ನಡೆದಂಥ ಔದ್ಯೋಗಿಕ ಬೆಳವಣಿಗೆಯನ್ನು ನೋಡಿದಾಗ ಸರ್ಕಾರದ ಕೈಯಲ್ಲಿದ್ದಂಥ ಮುಖ್ಯವಾದ ನಾಲ್ಕೈದು ಉದ್ಯಮಗಳನ್ನು ಸರ್ಕಾರ ಮಾರಾಟ ಮಾಡಿದೆ. ಹೊಸ ಉದ್ಯಮಗಳನ್ನು ಪ್ರಾರಂಭ ಮಾಡಿಲ್ಲ. ಇದ್ದುದನ್ನು ಕೊಟ್ಟಿದ್ದಾರೆ. ಇವತ್ತಿನ ದಿವಸ ಸರ್ಕಾರಿ ಉದ್ಯಮಗಳು ಲಾಭಗಳಿಸುತ್ತಾ ಇಲ್ಲ. ಒಂದೆರಡು ಬಿಟ್ಟರೆ ಎಲ್ಲಾ ಉದ್ಯಮಗಳು ಹಾನಿಯಲ್ಲಿವೆ. ಸೋಪ್ ಫ್ಯಾಕ್ಟರಿ, ಭದ್ರಾವತಿ ಫ್ಯಾಕ್ಟರಿ ಮುಂತಾದ ಎರಡು ಮೂರು ಉದ್ಯಮಗಳನ್ನು ಬಿಟ್ಟರೆ ಉಳಿದ ಎಲ್ಲಾ ಉದ್ಯಮಗಳು ನಷ್ಟದಲ್ಲಿವೆ. ಇವು ಕಳೆದ 6 ವರ್ಷಗಳಿಂದ ನಷ್ಟದಲ್ಲಿವೆ. ಲಾಭಗಳಿಸುತ್ತಾ ಇಲ್ಲ. ಇದರ ಜೊತೆಗೆ 6 ವರ್ಷಗಳಲ್ಲಿ ಹೊಸ ಉದ್ಯಮಗಳು ಸರ್ಕಾರಿ ವಲಯದಲ್ಲಿ ಯಾವುದೂ ಬರಲಿಲ್ಲ. ಪಬ್ಲಿಕ್ ಸೆಕ್ಟರ್ ಇಂಡಸ್ಟ್ರೀಸ್ ಮೇಲೆ ಹಿಂದೆ ಮಾನ್ಯ ಮುಖ್ಯಮಂತ್ರಿಗಳ ವರ್ಚಸ್ಸು ಇತ್ತು. ಈ ಕೇಂದ್ರದಲ್ಲಿ ಬೇರೆ ಪಕ್ಷದ ಸರ್ಕಾರವಿದೆ. ಈಗಲೂ ವರ್ಚಸ್ಸು ಇರಬಹುದು. ಇಲ್ಲ ಎಂದು ನಾನು ಹೇಳುವುದಿಲ್ಲ. 1972-73 ಇಸವಿಯಿಂದ 1977-78ರವರೆಗಿನ ಮಾನ್ಯ ಪೋರ್ಪಡೆಯವರ ಬಜೆಟ್ ಭಾಷಣಗಳು ನನ್ನ ಹತ್ತಿರ ಇವೆ. ಅದರಲ್ಲಿ ಚುನಾವಣೆಯಾದ ಮೇಲೆ 1972-73ನೇ ಇಸವಿಯಲ್ಲಿ ವೋಟ್ ಆನ್ ಅಕೌಂಟ್ ಆಯಿತು ಆಗ ಮಾಡಿದಂತ ಭಾಷಣವನ್ನು ನಾನು ನೋಡಿದೆ. ಆಗ ಮಾಡಿದಂತ ಭಾಷಣ ಮತ್ತು 1977-78ನೇ ಇಸವಿಯಲ್ಲಿ ಮಾಡಿದಂಥ ಭಾಷಣ ಒಂದೇ ರೀತಿ ಇದೆ. ಅನೇಕ ಭರವಸೆಗಳನ್ನು ಕೊಟ್ಟಿದ್ದಾರೆ. 1971-72 ರಲ್ಲಿ ವಿಜಯನಗರ ಉಕ್ಕಿನ ಕಾರ್ಖಾನೆ ಕೃಷ್ಣಾ ಮತ್ತು ಕಾವೇರಿಯಲ್ಲಿರತಕ್ಕ ಯೋಜನೆಗಳ ಬಗ್ಗೆ ಮತ್ತು ಅದರಲ್ಲೂ ಕಾಳಿ ನದಿ ಯೋಜನೆ ಬಗ್ಗೆ ಹೇಳಿದ್ದಾರೆ. ಆ ರೀತಿ ಹೇಳುವಾಗ

ಏನು ಹೇಳಿದ್ದಾರೆಂದರೆ ಅವುಗಳನ್ನೆಲ್ಲಾ ಒಂದೆರಡು ವರ್ಷಗಳಲ್ಲಿಯೇ ಅದರಲ್ಲೂ ವಿಜಯನಗರ ಉಕ್ಕಿನ ಕಾರ್ಖಾನೆಯ ಅಡಿಗಲ್ಲು ಹಾಕುವಾಗ ಆಗಿನ ಪ್ರಧಾನ ಮಂತ್ರಿಯವರು ಏನು ಹೇಳಿದ್ದಾರೆಂದರೆ ನಾವು ಅಲ್ಲಿಯ ಬೆಳವಣಿಗೆ ಆದಷ್ಟು ಕೂಡಲೇ ಹಣವನ್ನು ಒದಗಿಸಿಕೊಡುತ್ತೇವೆ ಎನ್ನುವ ಮಾತನ್ನು ಹೇಳಿದ್ದರು. ಅದರ ಬಗ್ಗೆ ಯಾರೂ ಸಂಶಯ ಪಡುವ ಕಾರಣವಿಲ್ಲವೆಂದು ರಾಜ್ಯ ಸರ್ಕಾರದವರು ಸಮರ್ಥನೆ ಮಾಡಿಕೊಂಡು ಎರಡು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ಜಮೀನು ಕೊಂಡುಕೊಂಡಿದ್ದಾರೆ. ಹಿಂದಿನ ಅರ್ಥಸಚಿವರು ಈಗ ಇಲ್ಲಿ ಇಲ್ಲ ಆದುದರಿಂದ ಅವರ ಬಗ್ಗೆ ಹೆಚ್ಚಿಗೆ ನಾನು ಹೇಳುವುದಕ್ಕೆ ಹೋಗುವುದಿಲ್ಲ. ಕಾರ್ಖಾನೆ ಪ್ರಾರಂಭವಾಗುತ್ತದೆಂದು ಅದರ ಪಕ್ಕದಲ್ಲಿದ್ದ ಜಾಗವನ್ನು ಕರ್ನಾಟಕ ಯೂನಿವರ್ಸಿಟಿಯವರು ತೆಗೆದುಕೊಂಡು ಅಲ್ಲಿ ಒಂದು ಕಾಲೇಜನ್ನು ಪ್ರಾರಂಭ ಮಾಡಿದ್ದಾರೆ, 6 ವರ್ಷಗಳಾಗುತ್ತಾ ಬಂತು ಆದರೆ ಅಲ್ಲಿ ಇನ್ನೂ ಕಾರ್ಖಾನೆ ಬರಲಿಲ್ಲ. ವಿಜಯನಗರದ ಉಕ್ಕಿನ ಕಾರ್ಖಾನೆ ಒಂದು ಇಡೀ ನಮ್ಮ ದೇಶಕ್ಕೆ ಮಹತ್ವದ ಕಾರ್ಖಾನೆ ಅದರ ಮೇಲೆ ನಮ್ಮ ರಾಷ್ಟ್ರದ ರಾಜ್ಯದ ಮುಂದಿನ ಭವಿಷ್ಯದ ತಳಹದಿ ನಿಂತಿದೆ. ಅಂಥಾ ಒಂದು ಕಾರ್ಖಾನೆ ಇನ್ನೂವರೆಗೂ ಬರಲಿಲ್ಲ. ಅದರ ಜೊತೆಗೆ ಪ್ರಾರಂಭ ಮಾಡಿದ ಸೇಲಂನದು ಮಾತ್ರ ಬಂದಿದೆ. ಸೇಲಂನಲ್ಲಿ ಆಗಲೇ ಕಾರ್ಖಾನೆ ಪ್ರಾರಂಭವಾಗಿದೆ. ನಾವು ಈ ವಿಷಯದ ಬಗ್ಗೆ ಪದೇ ಪದೇ ಒತ್ತಾಯ ಮಾಡಿದಾಗ ಹಿಂದಿದ್ದ ಮಂತ್ರಿಗಳವರು ನಮ್ಮಲ್ಲಿ ವಿಶ್ವಾಸವಿಡಿ ಎಂದು ಹೇಳುತ್ತಲೇ ಬಂದಿದ್ದಾರೆ. ಆದರೆ ಇತ್ತಿತ್ತಲಾಗಿ ನಮ್ಮ ಮುಖ್ಯಮಂತ್ರಿಗಳವರು ಮತ್ತು ಕೆಲವು ಮಂತ್ರಿಗಳು ಕೇಂದ್ರ ಸರ್ಕಾರದವರು ಇದನ್ನು ಮಾಡದೇ ಹೋದರೆ ನಾವು ಚಳವಳಿ ಮಾಡುತ್ತೇವೆ ಎನ್ನುವ ಮಾತನ್ನು ಹೇಳುತ್ತಿದ್ದಾರೆ. ನಾನು ಕೇಳುತ್ತೇನೆ. ಈ ಚಳವಳಿ ಮಾಡತಕ್ಕಂಥ ಬುದ್ಧಿಶಕ್ತಿ 6 ವರ್ಷಗಳಿಂದ ಎಲ್ಲಿಗೆ ಹೋಗಿತ್ತು? ಈ ಕಾರ್ಖಾನೆ 6 ವರ್ಷಗಳಿಂದಲೂ ಆಗದಿದ್ದಾಗ ಆಗ ಏತಕ್ಕೆ ತೆಪ್ಪಗೆ ಮುಚ್ಚಿಕೊಂಡು ಕೂತಿದ್ದೀರಿ? ಆಗ ಚಳವಳಿ ಮಾಡುವ ವಿಚಾರ ಏತಕ್ಕೆ ನೀವು ಮಾಡಲಿಲ್ಲ? ಆವಾಗ ಮಾಡತಕ್ಕ ಧೈರ್ಯ ನಿಮಗೆ ಇರಲಿಲ್ಲ. ಯಾವುದೋ ಒಂದು ಕಾರಣದಿಂದ ಇವತ್ತು ನಮ್ಮ ರಾಜ್ಯದಲ್ಲಿ ಆ ಕಾರ್ಖಾನೆ ಬರಲಿಲ್ಲ. 6 ವರ್ಷಗಳಿಂದ ರಾಷ್ಟ್ರದಲ್ಲಿ ಕೇಂದ್ರದ ಅನೇಕ ದೊಡ್ಡ ದೊಡ್ಡ ಕಾರ್ಖಾನೆಗಳು ಪ್ರಾರಂಭವಾಗಿವೆ. ಆದರೆ ನಮ್ಮಲ್ಲಿ ಮಾತ್ರ ಒಂದು ಕಾರ್ಖಾನೆ ಬರಲಿಲ್ಲ, ಅದು ಬರುತ್ತದೆ. ಇದು ಬರುತ್ತದೆ. ಟೈರ್ ಫ್ಯಾಕ್ಟರಿ ಬರುತ್ತದೆ. ಟ್ರ್ಯಾಕ್ಟರ್ ಫ್ಯಾಕ್ಟರಿ ಬರುತ್ತದೆ. ಹುಬ್ಬಳ್ಳಿ ಹತ್ತಿರ, ಬೆಂಗಳೂರು ಹತ್ತಿರ ಫ್ಯಾಕ್ಟರಿ ಬರುತ್ತದೆಂದು ಹೇಳುತ್ತಲೇ ಇದ್ದರು ಆದರೆ ಬರಲಿಲ್ಲ ಉದ್ದಿಮೆ ದೃಷ್ಟಿಯಿಂದ ನೋಡಿದರೆ ಕೇಂದ್ರದಿಂದ ಯಾವುದೂ ಬರಲಿಲ್ಲ. ರಾಜ್ಯ ಸರ್ಕಾರದಿಂದಲೂ ಯಾವ ಹೊಸ ಉದ್ದಿಮೆಗಳು ಬರಲಿಲ್ಲ.

ಇನ್ನು ಪ್ರೈವೇಟ್ ಇಂಡಸ್ಟ್ರೀಸ್ ಬಗ್ಗೆ ಹೇಳುವುದಾದರೆ ಈ ರಾಜ್ಯದಲ್ಲಿ ಕೆಲವರು ಹೊಸ ಉದ್ದಿಮೆಗಳನ್ನು ಪ್ರಾರಂಭ ಮಾಡಿದ್ದಾರೆ. ಬೆಂಗಳೂರಿನ ಹವೆ, ಬೆಂಗಳೂರಿನಲ್ಲಿರತಕ್ಕ ಸೌಕರ್ಯ ಆಕರ್ಷಣೆ ಅಂತ ಹೇಳಿದರೆ ಆ ರೀತಿಯ ಒಂದು ಅಟ್ರ್ಯಾಕ್ಷನ್ ಇಲ್ಲಿ ಇದೆ. ಕೇಂದ್ರ ಸರ್ಕಾರದಿಂದ ಕೆಲವು ಯೋಜನೆಗಳು ಬಂದವು, ಅನ್ ಎಂಪ್ಲಾಯ್ಡ್ ಇಂಜಿನಿಯರ್ಸ್‌ಗೆ ಅವರು ಕಾರ್ಖಾನೆಯನ್ನು ಸ್ವತಃ ಪ್ರಾರಂಭ ಮಾಡುವುದಾದರೆ ಹಣದ ಸಹಾಯ ಮಾಡುತ್ತೇವೆ. ಅವರಿಗೆ ಎಲ್ಲ ರೀತಿಯ ಸೌಲಭ್ಯಗಳನ್ನು ಕೊಡುತ್ತೇವೆ. ಅವರು ಏನು ತಮ್ಮ ತಮ್ಮ ಸಾಮರ್ಥ್ಯ ಉಪಯೋಗಿಸಿ ವಸ್ತುಗಳನ್ನು ಉತ್ಪಾದನೆ ಮಾಡುತ್ತಾರೆ ಆ ವಸ್ತುಗಳನ್ನು ಸರ್ಕಾರದವರೇ ಕೊಳ್ಳತಕ್ಕ ವ್ಯವಸ್ಥೆ ಮಾಡುತ್ತೇವೆ ಅಂತ ಯೋಜನೆಯನ್ನು ಮಾಡಿದರು. ಅನೇಕ ಜನ ಆಗ ತರುಣ ಇಂಜಿನಿಯರ್‌ಗಳು ಮುಂದೆ ಬಂದು ಅಂಥಾ ಉದ್ದಿಮೆಗಳನ್ನು ಪ್ರಾರಂಭ ಮಾಡಿದ್ದಾರೆ. ಆದರೆ ಸ್ಮಾಲ್ ಸ್ಕೇಲ್ ಇಂಡಸ್ಟ್ರೀಸ್‌ನಲ್ಲಿ ಆಗಿರತಕ್ಕ ಅನಾನುಕೂಲದ ಬಗ್ಗೆ ತಮಗೆ ಒಂದು ಉದಾಹರಣೆಯನ್ನು ಕೊಡುತ್ತೇನೆ. ಕೆ.ಎಸ್.ಆರ್.ಟಿ.ಸಿ.ಯವರು ಆಕ್ಸಲರೀಸ್ ತಯಾರು ಮಾಡಲು ಸುಮಾರು 60–70 ಅನ್ ಎಂಪ್ಲಾಯ್ಡ್ ಇಂಜಿನಿಯರ್ಸ್‌ಗೆ ಶೆಡ್‌ಗಳನ್ನು ಕೊಟ್ಟಿದ್ದಾರೆ. ಸರ್ಕಾರದಿಂದ ಅವರಿಗೆ 1 ಲಕ್ಷ ಎರಡು ಲಕ್ಷ ಮೂರು ಲಕ್ಷ ರೂಪಾಯಿಗಳವರೆಗೆ ಹಣ ಸಹಾಯ ಮಾಡಿದ್ದಾರೆ. ಆ ಹಣವನ್ನು ಪಡೆದುಕೊಳ್ಳಬೇಕಾದರೆ ಆ ಎಂಟರ್‌ಪ್ರಿನರ್ಸ್‌ಗೆ ಎಷ್ಟು ಕಷ್ಟವಾಯಿತೆಂದರೆ ಅವರು ಬೆಂಗಳೂರಿಗೆ ಒಂದು ನೂರು ಸಲ ಬಂದಿದ್ದಾರೆ. ಕರ್ನಾಟಕ ಫೈನಾನ್ಸ್ ಕಾರ್ಪೊರೇಷನ್‌ನಲ್ಲಿ ಆಗಲೀ ಅಥವಾ ಇತರ ಸಂಸ್ಥೆಗಳಲ್ಲಿ ಆಗಲೀ ಅವರು ಅರ್ಜಿ ಕೊಟ್ಟ ಎರಡು ವರ್ಷಗಳಾದ ಮೇಲೆ ಶೆಡ್‌ಗಳು ಅಲಾಟ್ ಆಗಿ, ಅವರು ಆರ್ಡರ್ ಕೊಟ್ಟಿದ್ದ ಮೆಷಿನರಿಗಳು ಬಂದು ರೈಲ್ವೆ ಸ್ಟೇಷನ್ನಿನಲ್ಲಿ ಕೊಳೆಯುತ್ತಿದ್ದರೂ ಅವರಿಗೆ ಫೈನಾನ್ಸ್ ಅಸಿಸ್ಟೆನ್ಸ್ ಸಿಗಲಿಲ್ಲ. ಅವರಿಗೆ ಫೈನಾನ್ಸ್ ಅಸಿಸ್ಟೆನ್ಸ್ ಸಿಕ್ಕ ಮೇಲೆ ಆ ಮಿಷನ್‌ಗಳು ರಿಲೀಜ್ ಆಗಿವೆ. ಅವರು ಬಹಳ ಕಷ್ಟಪಟ್ಟು ತಮ್ಮ ಉದ್ದಿಮೆಗಳನ್ನು ಪ್ರಾರಂಭಮಾಡಿ ಪ್ರೊಡಕ್ಷನ್ ಮಾಡಿದ ಮೇಲೆ ಇವತ್ತು ಕೆ.ಎಸ್.ಆರ್.ಟಿ.ಸಿ.ಯವರು ಅವರು ತಯಾರು ಮಾಡಿರತಕ್ಕ ವಸ್ತುಗಳನ್ನು ಒಂದನ್ನೂ ತೆಗೆದುಕೊಂಡಿಲ್ಲ. ಇದರಿಂದ ಆ ತರುಣರು ತಯಾರಿಸಿದ ವಸ್ತುಗಳನ್ನು ಯಾರು ಕೊಳ್ಳಬೇಕು. ಇದರಿಂದ ಅವರ ಗತಿ ಏನು? ಇದರಿಂದ ಅನೇಕ ಜನ ಇಂಜಿನಿಯರ್ಸ್‌ಗಳು ಲಿಕ್ವಿಡೇಷನ್ ಆಗುವ ಪರಿಸ್ಥಿತಿಗೆ ಬಂದಿದ್ದಾರೆ. ಅವರಲ್ಲಿರತಕ್ಕ ಮೆಷಿನರಿಗಳನ್ನು ಬ್ಯಾಂಕಿಗೆ ಅಟ್ಯಾಚ್ ಮಾಡಿರುವುದರಿಂದ ಅವುಗಳನ್ನು ರಿಲೀವ್ ಮಾಡುತ್ತಿದ್ದಾರೆ. ಕೆ.ಎಸ್.ಆರ್.ಟಿ.ಸಿ.ಯವರು ಮೊದಲು ವ್ಯವಸ್ಥೆ ಮಾಡಿಕೊಂಡು ಇವತ್ತು ತೆಗೆದುಕೊಳ್ಳುವುದಿಲ್ಲವೆಂದು ಹೇಳುವುದು ಸರಿಯಿಲ್ಲ ಅದನ್ನು ಬೇರೆ ಉದ್ದಿಮೆದಾರರು ತೆಗೆದುಕೊಳ್ಳುತ್ತಾರೆಯೇ? ಇದಕ್ಕೆ ಕಾರಣವೇನು?

ಅದಕ್ಕೆ ಕಾರಣ ಈ ಎಂಟರ್‌ಪ್ರೀನಿಯರ್ಸ್‌ರವರಿಂದ ಅವರಿಗೆ ಲಾಭ ಸಿಗುತ್ತಿಲ್ಲ. ದೊಡ್ಡ ದೊಡ್ಡ ಉದ್ದಿಮೆದಾರರಾದರೆ ಅವರಿಗೆ ಇವರಿಗೆ ಲಾಭ ಸಿಗುತ್ತದೆ. ಕಮಿಷನ್ ಸಿಗುತ್ತದೆ. ಅದರಿಂದ ಅವತ್ತು ಇವರು ಏನೋ ಒಂದು ನೆಪ ಹೇಳಿ ಅವರು ತಯಾರು ಮಾಡಿರತಕ್ಕ ವಸ್ತುಗಳನ್ನು ಕೊಂಡುಕೊಳ್ಳುತ್ತಿಲ್ಲ. ನಾವು ಈ ಬಗ್ಗೆ ಸರ್ಕಾರಕ್ಕೆ ಅನೇಕ ಸಲ ಒತ್ತಾಯ ಮಾಡಿದ ಮೇಲೆ ಒಂದು ಭರವಸೆ ಕೊಟ್ಟರು. ಎಲ್ಲೆಲ್ಲಿ ಕೆ.ಎಸ್.ಆರ್.ಟಿ.ಸಿ.ಯವರು ಎಂಟರ್‌ಪ್ರಿನಿಯರ್ಸ್‌ರವರೊಂದಿಗೆ ಒಪ್ಪಂದ ಮಾಡಿಕೊಂಡಿದ್ದರೋ ಅಂಥವರ ಕಡೆಯಿಂದ ತಯಾರಾದ ವಸ್ತುಗಳನ್ನು ತೆಗೆದುಕೊಳ್ಳುವುದಕ್ಕೆ ಸಂಬಂಧಪಟ್ಟವರಿಗೆ ಹೇಳಿ ವ್ಯವಸ್ಥೆ ಮಾಡಿ ಯುವಕರಿಗೆ ಆದ ಅನ್ಯಾಯವನ್ನು ಪರಿಹಾರ ಮಾಡುತ್ತೇವೆ ಎನ್ನುವ ಮಾತನ್ನು ಹೇಳಿದ್ದರು. ಆ ರೀತಿ ಹೇಳಿದ್ದರೂ ಇಲ್ಲಿಯವರೆಗೆ ಯಾವ ಪರಿಹಾರ ಸಿಕ್ಕಿಲ್ಲ. ಈ ರೀತಿಯಾದರೆ ನಮ್ಮ ರಾಜ್ಯದಲ್ಲಿ ಯಾವ ರೀತಿಯಲ್ಲಿ ಉದ್ದಿಮೆಗಳು ಮುಂದುವರಿಯುವುದಕ್ಕೆ ಸಾಧ್ಯವಾಗುತ್ತದೆ? ಸರ್ಕಾರಿ ಕೆಲಸವನ್ನೆ ಅವಲಂಬನೆ ಮಾಡಿಕೊಂಡಿರಬಾರದೆಂದು ಹೇಳಿ ಅವರಿಗೆ ಹಣ ಸಹಾಯವನ್ನು ಕೊಟ್ಟು ಅವರಿಗೆ ಪ್ರೋತ್ಸಾಹ ಕೊಟ್ಟು ಇವತ್ತು ಅವರನ್ನು ನಡು ನೀರಿನಲ್ಲಿ ಕೈ ಬಿಟ್ಟಿದ್ದೀರಿ. ಇದರಿಂದ ಅವರ ಗತಿ ಏನು ಅಂತ ಕೇಳುತ್ತೇನೆ. ಅದೇ ರೀತಿ ನಮ್ಮ ರಾಜ್ಯದಲ್ಲಿರುವ ಟೆಕ್ಸ್‌ಟೈಲ್ಸ್ ಮಿಲ್‌ಗಳವರ ಗತಿಯೂ ಆಗಿದೆ ಹಾಗೂ ಶುಗರ್ ಮಿಲ್‌ಗಳ ಮತ್ತು ಪಬ್ಲಿಕ್ ಸೆಕ್ಟರ್ ಕಂಪನಿಗಳ ಗತಿಯಾಗಿದೆ. ಎಲ್ಲವೂ ಕೂಡ ನಿಲ್ಲತಕ್ಕ ಪರಿಸ್ಥಿತಿಗೆ ಬಂದಿದೆ. ಬೆಂಗಳೂರು ಸುತ್ತಮುತ್ತಲೂ ಬೆಂಗಳೂರು ಹವೆ ನೋಡಿ ಉದ್ದಿಮೆಗಳವರು ಬಂದರು ಆದರೆ ಸರ್ಕಾರವನ್ನು ನೋಡಿ ಬೆದರಿ ಹೋಗಿದ್ದಾರೆ. ಈ ಸರ್ಕಾರದ ವ್ಯವಸ್ಥೆಯನ್ನು ನೋಡಿ, ಈ ಉದ್ದಿಮೆಗಳ ಬೆಳವಣಿಗೆಯ ಬಗ್ಗೆ ಸರ್ಕಾರಿ ಯಂತ್ರವೇನಿದೆ ಅದು ಅತ್ಯಂತ ಮಂದಗಾಮಿಯಾಗಿದೆ, ಅವ್ಯವಸ್ಥೆಯಲ್ಲಿ ತುಂಬಾ ಲಂಚಗುಳಿತನದಿಂದ ಕೂಡಿದೆ ಎಂದು ಸ್ಪಷ್ಟವಾಗಿ ಹೇಳುತ್ತೇನೆ. ಇದರ ಬಗ್ಗೆ ವಿವರಣೆಗಳನ್ನು ಕೊಡುವುದಕ್ಕೆ ತಯಾರಾಗಿದ್ದೇನೆ. ಅದೇ ಇವತ್ತು ಗುಜರಾತಿನಲ್ಲಿ ಏನು ವ್ಯವಸ್ಥೆ ಇದೆ? ತಮಿಳುನಾಡಿನಲ್ಲಿ ಏನು ವ್ಯವಸ್ಥೆ ಇದೆ. ಎಂಬುದನ್ನು ತಾವು ನೋಡಿದರೆ ಗೊತ್ತಾಗುತ್ತದೆ. ಗುಜರಾತಿನಲ್ಲಿ ಒಬ್ಬ ಅರ್ಜಿ ಕೊಟ್ಟರೆ ಸರ್ಕಾರಿ ಅಧಿಕಾರಿಗಳೇ ಅವರ ಮನೆಯ ಬಾಗಿಲಿಗೆ ಹೋಗುತ್ತಾರೆ. ಅವನ ಆರ್ಥಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳುತ್ತಾರೆ. ಯಾವ ಉದ್ದಿಮೆ ಮಾಡಬೇಕೆಂದಿದ್ದಾರೆ. ಎಂಬುದನ್ನು ತಿಳಿದುಕೊಳ್ಳುತ್ತಾರೆ. ಅಲ್ಲಿ ಸುತ್ತಮುತ್ತಲೂ ಅವರಿಗೆ ರಾ ಮೆಟೀರಿಯಲ್ಸ್ ಸಿಗುತ್ತದೆಯೇ ಎಂಬುದನ್ನು ನೋಡಿ ಅಲ್ಲಿ ಅವರಿಗೆ ಸರಿಯಾದ ವ್ಯವಸ್ಥೆ ಇದೆಯೇ ಅದರಿಂದ ಅವರಿಗೆ ಹುಟ್ಟುವಳಿ ಇದೆಯೇ ಎಂಬುದನ್ನೆಲ್ಲಾ ಅಭ್ಯಾಸ ಮಾಡಿ ಅವನಿಗೆ ಬೇಕಾದ ಹಣದ ಸಹಾಯ ಲೈಸೆನ್ಸ್ ಎಲ್ಲವನ್ನು ಒದಗಿಸಿಕೊಡುತ್ತಾರೆ. ಅರ್ಜಿದಾರರು ಅಲ್ಲಿ

ಯಾವ ಆಫೀಸಿಗೂ ಹೋಗುವುದಿಲ್ಲ ಅವರೇ ಅವನ ಮನೆಯ ಬಾಗಿಲಿಗೆ ಹೋಗುತ್ತಾರೆ. ಆದರೆ ಸ್ವಾಮಿ ನಮ್ಮಲ್ಲಿ ಎಂಟರ್‌ಪ್ರಿನರ್ಸ್ ಡೈರೆಕ್ಟರ್‌ರವರನ್ನು ಕಾಣಬೇಕೆಂದು ಹೋದರೆ ಅವರು ಆಫೀಸಿನಲ್ಲಿಯೇ ಇರುವುದಿಲ್ಲ. ಅವರು ಶಾಸಕರು ಹೋದರೂ ಸಿಗುವುದಿಲ್ಲ. ಈಗಿರುವವರು ಸ್ವಲ್ಪ ಪರವಾಗಿಲ್ಲ. ಹಿಂದೆ ಇದ್ದವರಂತೂ ಬೆಂಗಳೂರಿನಲ್ಲಿಯೇ ಇರುತ್ತಿರಲಿಲ್ಲ. ಲಂಡನ್, ನ್ಯೂಯಾರ್ಕ್, ಕೋಲ್ಕತ್ತ, ಡೆಲ್ಲಿ ಮುಂತಾದ ಕಡೆಗಳೆಲ್ಲಾ ಸುತ್ತಿಕೊಂಡಿರುತ್ತಿದ್ದರು. ಅದು ಎಂಥಾದೋ ಕಾಂಕ್ ಡಾರ್ ಎಂದು ಹೇಳುತ್ತಾರಲ್ಲಾ ಅದರಲ್ಲಿಯೇ ಓಡಾಡಿಕೊಂಡಿರುತ್ತಿದ್ದರು. ಅದು ಕಮಿಟಿಯ ಮುಂದೆ ಇದೆ ಅದರ ಬಗ್ಗೆ ಹೆಚ್ಚಿಗೆ ಹೇಳುವುದಕ್ಕೆ ಹೋಗುವುದಿಲ್ಲ ಇವತ್ತು ಎಂಟರ್‌ಪ್ರಿನರ್ಸ್‌ಗೆ ಅವರ ಉದ್ದಿಮೆ ಬೆಳೆಯಬೇಕಾದರೆ ಅವರಿಗೆ ಸರಿಯಾದ ಮಾರ್ಗದರ್ಶನ ಕೊಡಬೇಕು ಇಲ್ಲದೆ ಹೋದರೆ ಹೇಗೆ ಸ್ವಾಮಿ? ಯಾವುದೇ ಎಂಟರ್ ಪ್ರಿನರ್ಸ್‌ಗಳಿಗೂ ಒಂದು ವರ್ಷ ಅಥವಾ ಎರಡು ವರ್ಷಗಳಲ್ಲಿ ಅವರಿಗೆ ಉತ್ತರ ಸಿಕ್ಕುವುದಿಲ್ಲ. ಯಾವುದೇ ಆಫೀಸಿಗೆ ಹೋದರೂ. ಅವರು ಅಲ್ಲಿಗೆ, ಇಲ್ಲಿಗೆ ಹೋಗಿ ಎಂದು ಹೇಳುವುದು ಫೈನಾನ್ಸ್ ಡಿಪಾರ್ಟ್‌ಮೆಂಟ್ ಕೇಳಬೇಕು. ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟ್ ಕೇಳಬೇಕು. ಎಂದು ಕೊಕ್ಕೆ ಹಾಕುತ್ತಾರೆ, ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟ್‌ಗೆ ಹೋಗಿ ಕೇಳಿದರೆ ಫೈನಾನ್ಸ್ ಬೋರ್ಡ್ ಮೀಟ್ ಆಗಬೇಕು ಎಂದು ಏನೋ ಒಂದು ಸಬೂಬು ಹೇಳುತ್ತಿರುತ್ತಾರೆ. ಮಾನ್ಯ ಅಧ್ಯಕ್ಷಣಿಯವರ ಚಿರಂಜೀವಿಯವರು ಕೂಡ ಉದ್ಯಮದಲ್ಲಿ ಇದ್ದಾರೆ. ಹಾಗೂ ಈ ಮನೆಯ ಸದಸ್ಯರಾಗಿ ಮಾನ್ಯ ಅಧ್ಯಕ್ಷಿಣಿಯವರಿಗೂ ಈ ಅವ್ಯವಸ್ಥೆ ಗೊತ್ತಿದೆ. ಜೊತೆಗೆ ಅವರ ಚಿರಂಜೀವಿಯವರು ಯುವಕರು ಹಾಗೂ ಉತ್ಸಾಹಿ ಉದ್ಯಮಿಗಳು ಎಷ್ಟು ಕಷ್ಟ ಪಡುತ್ತಿದ್ದಾರೆಂಬುದು ತಾಯಿಯಾದ ಅವರಿಗೆ ಗೊತ್ತಿದೆ. ಈ ಸರ್ಕಾರದ ಧೋರಣೆಯಾದರೂ ಏನು ಇದ್ದೆ, ಅಥವಾ ಅಧಿಕಾರಿಗಳ ಧೋರಣೆಯನ್ನು ನೋಡಿದರೆ ಏನು ಹೇಳಬೇಕೋ ಗೊತ್ತಾಗುವುದಿಲ್ಲ. ಇಂಡಸ್ಟ್ರೀಸ್‌ನ್ನು ಪೂರ್ಣವಾಗಿ ರಿವೈಲೈಸ್ ಮಾಡಬೇಕು. ಯಾವುದೇ ಉದ್ಯಮಿ ಬಂದು ಅರ್ಜಿ ಕೊಟ್ಟರೂ ಅನುಮತಿ ಕೊಡತಕ್ಕಂಥ ವ್ಯವಸ್ಥೆ ಮಾಡಬೇಕಾಗುತ್ತದೆ.

ಇನ್ನು ಕೋಆಪರೇಟಿವ್ ಇನ್ಸ್‌ಟಿಟ್ಯೂಷನ್ ಬಗ್ಗೆ ಹೇಳುವುದಾದರೆ ಯಾವುದರಲ್ಲೂ ಲಾಭ ಇಲ್ಲದೆ ನಿಂತು ಹೋಗುತ್ತಿವೆ. ಉದಾಹರಣೆಗೆ ಹೇಳುವುದಾದರೆ ತಮಿಳುನಾಡು, ಗುಜರಾತ್ ರಾಜ್ಯಗಳಲ್ಲಿ ಸುಮಾರು 10 ಕೋಆಪರೇಟಿವ್ ಸೆಕ್ಟರ್ಸ್‌ಗಳಿಗೆ ಕೇಂದ್ರದ ಅನುಮತಿ ದೊರೆತು ಅದರಲ್ಲಿ ಮೂರು ಜನ ಅಧಿಕಾರಿಗಳನ್ನು ನೇಮಕ ಮಾಡಿಕೊಂಡು ಒಬ್ಬರು ರೆವಿನ್ಯೂ ಒಬ್ಬರು ಮೆಷಿನರಿ ಪರ್ಚೇಸ್ ಮತ್ತೊಬ್ಬರು ಆಡಳಿತವನ್ನು ನೋಡಿಕೊಳ್ಳುವಂತಹ ವ್ಯವಸ್ಥೆಯನ್ನು

W.D. 1347 - 7

ಮಾಡಿಕೊಂಡು ಒಂದೇ ವರ್ಷದಲ್ಲಿ ಪ್ರೊಡಕ್ಷನ್ ಮಾಡುವ ವ್ಯವಸ್ಥೆಯನ್ನು ಮಾಡುತ್ತಿದ್ದಾರೆ. ಇದನ್ನೆಲ್ಲಾ ಮಾಡಿ ಇದನ್ನು ಕೋಆಪರೇಟಿವ್ ಇನ್ಸ್‌ಟಿಟ್ಯೂಷನ್‌ಗೆ ಹಸ್ತಾಂತರಮಾಡಿದ್ದಾರೆ. ಇದರಿಂದ ಎಷ್ಟು ಸಮಯ ಅಪವ್ಯಯ ಹಾಗೂ ಹಣದ ಅಪವ್ಯಯವನ್ನು ತಪ್ಪಿಸಿದಂತಾಗುತ್ತದೆ ಎಂಬುದನ್ನು ನೋಡಬೇಕು. ಆದ್ದರಿಂದ ನಮ್ಮ ರಾಜ್ಯದ ಸರ್ಕಾರದ ಕೈಗಾರಿಕೆಯನ್ನು ಸಹಿತ ಆ ರೀತಿಯಲ್ಲಿ ನಡೆಯುವಂತೆ ಮಾಡಿದರೆ ನಮ್ಮ ರಾಜ್ಯಕ್ಕೆ ಎಷ್ಟೋ ಅನುಕೂಲ ಆಗುತ್ತದೆ. ನಮ್ಮ ರಾಜ್ಯದಲ್ಲಿ ಒಂದು ಕೋಆಪರೇಟಿವ್ ಸೆಕ್ಟರ್‌ನಲ್ಲಿ ಒಂದು ಇಂಡಸ್ಟ್ರೀಸ್ ಬರಬೇಕಾದರೆ ಅದಕ್ಕೆ ಪರ್ಮಿಷನ್ ಸಿಕ್ಕಿ ಅದು ಪ್ರಾರಂಭವಾಗಿ ಅದು ಪ್ರೊಡಕ್ಷನ್‌ಗೆ ಬರಬೇಕಾದರೆ 10 ವರ್ಷಗಳು ಬೇಕಾಗುತ್ತದೆ. ಅಷ್ಟರಲ್ಲಿ ಸರ್ಕಾರಕ್ಕೆ ಬೇರೆ ರಾಜ್ಯ ಸರ್ಕಾರಗಳ ರೀತಿ ಮನಸ್ಸಿಲ್ಲ ಹಾಗೂ ನೈತಿಕ ಸಾಮರ್ಥ್ಯವಿಲ್ಲ. ಸ್ವಾಮಿ ಅದನ್ನು ಹೇಳುವಾಗ ಭ್ರಷ್ಟಾಚಾರಿಗಳ ಬಗ್ಗೆ ಹೇಳಬೇಕಾಗುತ್ತದೆ. ಇದನ್ನು ಸಂಪೂರ್ಣವಾಗಿ ತೆಗೆಯುವುದು ಕಷ್ಟವೆಂದು ನಾವೆಲ್ಲರೂ ಒಪ್ಪುತ್ತೇವೆ ಆದರೆ ಇದು ಎಷ್ಟು ಕಡಿಮೆ ಇರುತ್ತದೋ ಅಷ್ಟು ಒಳ್ಳೆಯದೆಂದು ಮಾತ್ರ ಹೇಳುವುದಕ್ಕೆ ಇಷ್ಟಪಡುತ್ತೇನೆ. ಈ ಭ್ರಷ್ಟಾಚಾರ ಹೋಗಬೇಕಾದರೆ ಅಥವಾ ಕಡಿಮೆಯಾಗಬೇಕಾದರೆ ಯಾವ ಪಕ್ಷವೇ ಇರಲಿ, ಯಾವ ಸರ್ಕಾರವೇ ಇರಲಿ ಮೊದಲು ರಾಜಕಾರಣಿಗಳಲ್ಲಿ ಹಾಗೂ ಆಡಳಿತ ನಡೆಸತಕ್ಕಂಥ ಮಂತ್ರಿಗಳು ಹಾಗೂ ಮುಖ್ಯಮಂತ್ರಿಗಳು ನಿಸ್ಪೃಹರಾಗಿ ಇರಬೇಕು. ಅದು ಇದ್ದರೆ ಅವರ ಸರ್ಕಾರವು ಕೂಡ ನಿಸ್ಪೃಹವಾಗಿರುತ್ತದೆ. ಮನೆಯಲ್ಲಿ ಹಿರಿಯರು ಸರಿಯಾಗಿ ನಡೆದರೆ ಮಕ್ಕಳು ಸರಿಯಾಗಿ ನಡೆದುಕೊಳ್ಳುತ್ತಾರೆ. ಹಾಗೂ ಶಾಲೆಗಳಲ್ಲಿ ಗುರುಗಳು ಸರಿಯಾಗಿ ನಡೆದುಕೊಂಡರೆ ವಿದ್ಯಾರ್ಥಿಗಳು ತಾನೇ ಸರಿಯಾಗಿ ನಡೆದುಕೊಳ್ಳುತ್ತಾರೆ. ಅದು ಆಗದ ಹೊರತು ಯಾವ ಮಟ್ಟದಲ್ಲೇ ಆಗಲೀ ಭ್ರಷ್ಟಾಚಾರ ಹೋಗುವುದಿಲ್ಲ. ಅದು ಹೋಗದ ಹೊರತು ರಾಷ್ಟ್ರಕ್ಕೆ ಆಗಲೀ, ರಾಜ್ಯಕ್ಕೆ ಆಗಲಿ ಒಳ್ಳೆಯದು ಎಂದಿಗೂ ಆಗುವುದಿಲ್ಲ. ಇನ್ನು ಯಾವುದೇ ಕೈಗಾರಿಕೆಯಾಗಲೀ ಅಥವಾ ವ್ಯವಸಾಯದಲ್ಲೇ ಆಗಲಿ ಅದು ಏಳಿಗೆಯಾಗುವುದಿಲ್ಲ. ಇವತ್ತು ಎಲ್ಲಿಯೇ ಭ್ರಷ್ಟಾಚಾರ ಹೋಗಬೇಕಾದರೆ ನಿಷ್ಠಾವಂತ ಆಡಳಿತಗಾರರು ಇರಬೇಕಾಗುತ್ತದೆ. ಅದು ಇಲ್ಲದೆ ಹೋದರೆ ಯಾವುದೇ ಬೆಳವಣಿಗೆಯಾಗುವುದಿಲ್ಲವೆಂದು ಹೇಳಬೇಕಾಗುತ್ತದೆ. ಎಷ್ಟೋ ಉದ್ಯಮಗಳು ಇದ್ದಂತವು ಕೂಡ ನಿಂತು ಹೋಗಿವೆ. ಇನ್ನು ಚಿಕ್ಕಚಿಕ್ಕ ಉದ್ಯಮಗಳಂತೂ ನಾಶವಾಗುವ ಹಾದಿಯಲ್ಲಿ ಇದ್ದಾವೆ. ನಮ್ಮ ಇಂಡಸ್ಟ್ರೀಸ್ ಇಲಾಖೆಯನ್ನು ಸರಿಯಾಗಿ ಬದಲಾವಣೆ ಮಾಡಬೇಕು ಎಂದು ಒಂದು ಸಲಹೆ ಕೊಡುತ್ತೇನೆ. ನಮ್ಮ ಕೇಂದ್ರ ಸರ್ಕಾರದ ಧೋರಣೆಯಾದರೂ ಏನು ಎಂದರೆ ದೊಡ್ಡ ದೊಡ್ಡ ಕೈಗಾರಿಕೆಗಳಿಗಿಂತ ಇನ್ನು ಮುಂದೆ ಚಿಕ್ಕಚಿಕ್ಕ

ಕೈಗಾರಿಕೆಗಳು ಬರಬೇಕು ಅದರಲ್ಲೂ ಗ್ರಾಮಾಂತರ ಪ್ರದೇಶಗಳಲ್ಲಿ ಬರಬೇಕೆನ್ನುವುದೇ ಆಗಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಸಣ್ಣ ಸಣ್ಣ ಕೈಗಾರಿಕೆಗಳು ಬಂದು ಅಲ್ಲಿಯ ಜನರ ಬಡತನವನ್ನು ಮತ್ತು ನಿರುದ್ಯೋಗವನ್ನು ನಿವಾರಿಸಿದಹೊರತು ನಮ್ಮ ದೇಶದ ಏಳಿಗೆಯಾಗುವುದಿಲ್ಲವೆನ್ನುವುದೇ ಆಗಿರುವುದರಿಂದ ಪ್ರತಿ ಜಿಲ್ಲೆಗೂ ಒಂದೊಂದು ಉದ್ಯಮದ ಕೇಂದ್ರಗಳು ಬರಬೇಕೆಂದು ಮಾಡುತ್ತಿದ್ದಾರೆ. ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ಹಾಗೂ ತಾಲ್ಲೂಕು ಮಟ್ಟದಲ್ಲಿಯೂ ಉದ್ಯಮಗಳು ಬರುವಂತಾಗಬೇಕಾದರೆ ಅಂತಹ ಒಂದು ಒಳ್ಳೆಯ ವಾತಾವರಣವನ್ನು ನಿರ್ಮಾಣಮಾಡಬೇಕು. ಅದನ್ನು ನಿರ್ಮಾಣ ಮಾಡಬೇಕಾದರೆ ಆಡಳಿತ ನಡೆಸತಕ್ಕಂಥ ಸರ್ಕಾರಗಳು ಸರಿಯಾದ ಪ್ರಚಾರ ಮತ್ತು ಸವಲತ್ತುಗಳನ್ನು ಕೊಡಬೇಕು. ಪ್ರತಿ ಹಳ್ಳಿಹಳ್ಳಿಗೂ ಕೈಗಾರಿಕೆಗಳು ಬರುವಂತೆ ಉದ್ಯಮಗಳಿಗೆ ತೀವ್ರವಾದ ಸಹಾಯಗಳು ದೊರೆಯುವಂತೆ ಮಾಡಬೇಕು. ಆ ರೀತಿ ಸಹಾಯ ದೊರಕುವುದಾದರೆ ಅನೇಕ ಜನ ಯುವಕರು ಮುಂದೆ ಬರುತ್ತಾರೆಂದು ಹೇಳುವುದಕ್ಕೆ ಈ ಸಮಯದಲ್ಲಿ ಬಯಸುತ್ತೇನೆ. ಸದ್ಯದಲ್ಲಿ ಹೊಸ ಉದ್ಯಮಿಗಳು ಬರುತ್ತಾ ಇಲ್ಲ. ಈಗ ನಮ್ಮ ರಾಜ್ಯದ ಕೈಗಾರಿಕೆಯಲ್ಲಿ ಕತ್ತಲು ವಾತಾವರಣ ಉಂಟಾಗಿದೆ. ದಯವಿಟ್ಟು ಈ ಬಗ್ಗೆ ಸರ್ಕಾರ ಕೂಡಲೇ ಸರಿಯಾದ ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ಮುಖ್ಯವಾಗಿ ಉದ್ಯಮಗಳಿಗೆ ಬೇಕಾಗಿರುವುದು ಪವರ್, ಅದರ ಬಗ್ಗೆ ಪ್ರಸ್ತಾಪ ಮಾಡುವುದಾದರೆ ನಮ್ಮ ಸರ್ಕಾರದ ಮುಂದೆ ಧೋರಣೆ ಹೇಳದೆ ವಿಧಿಯಿಲ್ಲ. ನಮ್ಮ ರಾಜ್ಯದ ಸ್ಥಿತಿಯನ್ನು ಹೋಲಿಸಿ ನೋಡಿದರೆ ನೆರೆಯ ರಾಜ್ಯಗಳೆಲ್ಲಕ್ಕಿಂತಲೂ ಹೆಚ್ಚು ಬಡತನ ಈ ಎಲೆಕ್ಟ್ರಿಸಿಟಿಯಲ್ಲಿ ಬಂದಿದೆಯೆಂದು ಹೇಳದೆ ವಿಧಿಯಿಲ್ಲ. ಪವರ್ ಕಟ್ 55 ಪರ್ಸೆಂಟ್ ಇದೆ. ಈಗ ಅದರಲ್ಲಿ 5 ಪರ್ಸೆಂಟ್ ಕಡಿಮೆಯಾಗಿದೆ. ಮಾನ್ಯ ಸದಸ್ಯರಾದ ರಾಜಶೇಖರ್‌ರವರಿಗೆ ಉತ್ತರ ಕೊಡುತ್ತಾ ಮಾನ್ಯ ಮುಖ್ಯಮಂತ್ರಿಗಳು ಥರ್ಮಲ್ ಪ್ಲಾಂಟ್ ಬಗ್ಗೆ ಹೇಳಿದ್ದಾರೆ. ಉಳಿದ ರಾಜ್ಯಗಳು ಹಿಂದಿನ 6 ವರ್ಷಗಳಲ್ಲಿ ಏನು ಮಾಡಿದ್ದಾರೆ ಅದನ್ನು ನೋಡಿದರೆ ನಮ್ಮ ರಾಜ್ಯದ ಅಧಿಕಾರಿಗಳ ಬಗ್ಗೆ ನನಗೂ ಅಭಿಮಾನವಿದೆ. ಶರಾವತಿಯನ್ನು ಕಟ್ಟಿದ್ದಾರೆ. ಕಾಳಿಯನ್ನು ಕಟ್ಟುತ್ತಾ ಇದ್ದಾರೆ ನಮ್ಮಲ್ಲಿ ಬುದ್ಧಿವಂತರು ಇಲ್ಲವೆಂದು ನಾನು ಹೇಳುತ್ತಾ ಇಲ್ಲ. ಆದರೆ ಥರ್ಮಲ್ ಪ್ಲಾಂಟ್‌ನ್ನು ಮಂಗಳೂರಿನಲ್ಲಿ ಮಾಡಬೇಕೆಂದು ಹೇಳುವುದನ್ನು ನೋಡಿದರೆ ನನಗೆ ತಿಳಿದ ಮಟ್ಟಿಗೆ ಅದಕ್ಕೆ ಮುಖ್ಯವಾಗಿ ಬೇಕಾಗಿರುವುದು ಕಲ್ಲಿದ್ದಲು, ಕಲ್ಲಿದ್ದಲು ಸಿಕ್ಕುವ ಪ್ರದೇಶವಾಗಿದ್ದರೆ ಅದು ಲಾಭದಾಯಕವಾಗುತ್ತಿತ್ತು. ಅದರಿಂದ ವಿದ್ಯುತ್ ಅನ್ನು ಹೆಚ್ಚಿಸಬಹುದು. ಆದರೆ ಅದು ನಮಗೆ ದೊರೆಯಬೇಕಾದ ಜಾಗ ಎಂದರೆ ಆಂಧ್ರಕ್ಕೆ ಸಮೀಪದ ರಾಯಚೂರು ಇದನ್ನು ಮೊದಲು ಪ್ರೊಪೋಸ್

ಮಾಡಿದ್ದರೆ ಚೆನ್ನಾಗಿತ್ತು. ಆದರೆ ಮಂಗಳೂರಿನಲ್ಲಿ ಮಾಡುವುದಾದರೆ ಕಲ್ಲಿದ್ದಲನ್ನು ಮಂಗಳೂರಿಗೆ ತರಬೇಕಾದರೆ ಎಷ್ಟು ಕಾಸ್ಟ್ ಬರುತ್ತದೆ ಎನ್ನುವುದನ್ನು ನಾವು ಯೋಚನೆಮಾಡಬೇಕು. ಈ ರೀತಿ ಮುಂದಾಲೋಚನೆ ಇಲ್ಲದೆ ಯಾವುದೇ ಕೆಲಸವನ್ನು ಮಾಡಿದರೂ ಅದು ಲಾಭದಾಯಕವಾಗುವುದಿಲ್ಲ. ನಾವು ಮಳೆಯನ್ನೇ ಸಂಪೂರ್ಣವಾಗಿ ನಂಬುವುದಕ್ಕೆ ಸಾಧ್ಯವಾಗುವುದಿಲ್ಲ. ಥರ್ಮಲ್ ಪ್ಲಾಂಟ್ ಬರಬೇಕಾದರೆ ನಾಲ್ಕು ವರ್ಷ ಬೇಕಾಗುತ್ತದೆ. ಇದರಿಂದ ಹಿಂದಿನ ಆರು ವರ್ಷಗಳು ಈಗಿನ ನಾಲ್ಕು ವರ್ಷಗಳು ಅನ್ಯಾಯವಾಗಿ ನಾವು ಕಳೆದುಕೊಂಡಂತಾಗಿದೆ. ಇದು ನಮ್ಮ ಸರ್ಕಾರದ ಮುಂದಾಲೋಚನೆ ಇಲ್ಲದ ಕೆಲಸವಾಗಿದೆ ಎಂದು ಹೇಳದೆ ವಿಧಿ ಇಲ್ಲ.

******

## ರಾಜ್ಯ ಯೋಜನೆಗಳ ಮೇಲಿನ ಚರ್ಚೆ

ದಿನಾಂಕ: 14.6.1978

**ಸಾರ್ವಜನಿಕ ಆಡಳಿತದಲ್ಲಿ ನಿಧಾನ ಕಾರ್ಯವನ್ನು ಬೊಮ್ಮಾಯಿ ಅವರು ಎಂದೂ ಸಹಿಸುತ್ತಿರಲಿಲ್ಲ. ಯೋಜನೆಗಳನ್ನು ರೂಪಿಸಿ ಭಾಷಣ ಮಾಡಿದರೆ ಸಾಲದು. ಅವನ್ನು ಸಕಾಲಕ್ಕೆ ಮುಗಿಸಬೇಕು. ಒಂದು ಸರ್ಕಾರ ಕೆಲಸದ ಬಗ್ಗೆ ಮಾತನಾಡುವ ಬದಲು ಕೆಲಸವನ್ನು ನಿಗದಿತ ವೇಳೆಯಲ್ಲಿ ಮಾಡಿ ಮುಗಿಸಿದರೆ ಮಾತ್ರ ನಿಜವಾದ ಅಭಿವೃದ್ಧಿ ಸಾಧ್ಯ ಎಂಬುದನ್ನು ತಮ್ಮ ಚರ್ಚೆಯಲ್ಲಿ ನಿರೂಪಿಸಿದ್ದಾರೆ.**

**ಶ್ರೀ ಎಸ್.ಆರ್. ಬೊಮ್ಮಾಯಿ:** ಇವತ್ತು ಈ ರಾಜ್ಯದ ಆರ್ಥಿಕ ಸ್ಥಿತಿ ಹೀನಾಯವಾದ ಸ್ಥಿತಿಗೆ ಬರತಕ್ಕಂಥ ಪರಿಸ್ಥಿತಿ ಬಂದಿದೆ. ಅದಕ್ಕಾಗಿ ನಾನು ಹೇಳುತ್ತಿದ್ದೇನೆ. ಈ ರಾಜ್ಯದಲ್ಲಿ ಒಂದಲ್ಲ 4 ಥರ್ಮಲ್ ಯೂನಿಟ್‌ಗಳನ್ನು ತೀವ್ರಗತಿಯಿಂದ ಮಾಡುವುದಕ್ಕೆ ಸರ್ಕಾರ ಪ್ರಯತ್ನ ಮಾಡಬೇಕು. ಅನೇಕ ಸಲ ಈ ಮೇಜರ್ ಇರಿಗೇಷನ್ ಪ್ರಾಜೆಕ್ಟ್ ಕೆಲಸ ತಡವಾಗಿದೆ. ಈ ಬಗ್ಗೆ ಕಮಿಟಿಯ ರಿಪೋರ್ಟ್ಸ್ ಇದೆ. ಸರಿಯಾದ ರೀತಿಯಿಂದ ಟೆಂಡರ್ ಕರೆಯದೇ ಮತ್ತು ಸರಿಯಾದ ಕಂಟ್ರಾಕ್ಟ್‌ದಾರರಿಗೆ ಕೊಡದೇ ಈ ಪ್ರಾಜೆಕ್ಟ್ ಕೆಲಸ ಒಂದು ವರ್ಷದಲ್ಲಿ ಆಗಬೇಕಾದದ್ದು 4 ವರ್ಷವಾಗಿದೆ. ಹೀಗೆ 5 ವರ್ಷ ಆದ್ದರಿಂದ ಬೆಲೆಗಳೆಲ್ಲ 3 ಪಟ್ಟು ಹೆಚ್ಚಾಗಿದೆ. ಹೀಗಾಗಿ ಆ ಯೋಜನೆಗಳು ಸರಿಯಾದ ರೀತಿಯಲ್ಲಿ ಆಗಿಲ್ಲ. ಕಾಳಿ ಯೋಜನೆಯ ಬಗ್ಗೆ ಆವತ್ತು ನಾನು ಪ್ರಶ್ನೆ ಕೇಳಲಿಲ್ಲ. ಅದು ತಡವಾಗುವುದಕ್ಕೆ ಕಾರಣವೇನು? ಅದಕ್ಕೆ ಕಾರಣ ಏನು ಎಂಬುದು ಜನತೆಗೆ ಗೊತ್ತಿದೆ. ಆ ದಿನ ಪಿ.ಡಬ್ಲ್ಯೂ.ಡಿ. ಮಂತ್ರಿಗಳು ಒಬ್ಬರಿಗೆ ಕೊಡಬೇಕು ಎಂದು ಮನಸ್ಸು ಮಾಡಿದರು. ಮಾನ್ಯ ಮಂತ್ರಿಯವರು ಮತ್ತೊಬ್ಬರಿಗೆ ಕೊಡಬೇಕು ಎಂದು ಮನಸ್ಸು ಮಾಡಿದರು. ಇವರಿಬ್ಬರ ತಿಕ್ಕಾಟದಲ್ಲಿ ತಡವಾಯಿತು. ಹೀಗೆ ಅವರವರಿಗೆ ತಿಕ್ಕಾಟವಾಗಿ ಪವರನ್ನು ಅವರಿಂದ ಕಿತ್ತುಕೊಳ್ಳುತ್ತಾರೆ ಎಂದು ಪಿ.ಡಬ್ಲ್ಯೂ.ಡಿ. ಮಂತ್ರಿಯವರಿಗೆ ಗೊತ್ತಾಯಿತು. ಅದರ ಹಿಂದಿನ ದಿವಸ ಅವರು ಬುದ್ಧಿವಂತಿಕೆಯಿಂದ ಏನು ಮಾಡಿದರು ಎಂದರೆ ಅದನ್ನು ಗೌರ್ನಮೆಂಟ್ ಆಫ್ ಇಂಡಿಯಾ ಕನ್‌ಸರ್ನ್‌ಗೆ ಕೊಟ್ಟರು. ಈ ಒಂದು ಅಧಿಕಾರದ ಜಗಳ ಜನತೆಗೆ ಗೊತ್ತಿದೆ. ಟೆಂಡರ್ ಫೈನಲೈಸ್ ಆಗಬೇಕಾದರೆ ಪರದೆಯ ಹಿಂದೆ ನಡೆಯತಕ್ಕಂತ ನಾಟಕಗಳು ಸಾರ್ವಜನಿಕರಿಗೆ ಗೊತ್ತು. ಈ ಒಂದು

ಚದುರಂಗದಾಟದಲ್ಲೇ 7 ತಿಂಗಳು ಕಳೆದುಹೋಯಿತು. ಆದ್ದರಿಂದ ಇವತ್ತು ಸರ್ಕಾರದ ನಿರ್ಣಯಗಳು ತ್ವರಿತವಾಗಿ ಕಾರ್ಯಗತವಾಗುತ್ತಿಲ್ಲ. ಅದಕ್ಕಾಗಿಯೇ ಕಾಳಿ ಯೋಜನೆ ತಡವಾಗಿದೆ. ಥರ್ಮಲ್ ಪ್ಲಾಂಟ್ ತಡವಾಗಿ ಬಂದಿದೆ. ಇದರಿಂದ ಕೈಗಾರಿಕೋದ್ಯಮ ಒಂದು ರೀತಿಯಿಂದ ನಿಂತು ಹೋಗಿದೆ ಎಂದು ಹೇಳಿದರೆ ಅದು ತಪ್ಪಾಗುವುದಿಲ್ಲ. ಈ ಬಗ್ಗೆ ಆದಷ್ಟು ಬೇಗ ತ್ವರಿತವಾದ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕು ಎಂದು ಹೇಳುವುದಕ್ಕೆ ಬಯಸುತ್ತೇನೆ. ಈ ಕಾಳಿ ಯೋಜನೆಯ ಬಗ್ಗೆ ಹೇಳುವಾಗ ಒಂದು ಮಾತನ್ನು ಹೇಳದೆ ಇದ್ದರೆ ತಪ್ಪು ಮಾಡಿದ ಹಾಗಾಗುತ್ತದೆ. 1972ನೇ ಇಸವಿಯ ಬಜೆಟ್ ಪ್ರಾವಿಷನ್‌ನಲ್ಲಿ ಈ ಯೋಜನೆಗೆ ಕೇಂದ್ರ ಸರ್ಕಾರದವರು ಸಂಪೂರ್ಣವಾಗಿ ಹಣವನ್ನು ಕೊಡುವುದಕ್ಕೆ ಒಪ್ಪಿದ್ದಾರೆ. ಎಂದು ಹಿಂದೆ ಅರ್ಥಮಂತ್ರಿಗಳು ಹೇಳಿದ್ದರು. ಇದರ ಬಗ್ಗೆ ಯಾರೂ ಚಿಂತೆ ಮಾಡಬೇಕಾಗಿಲ್ಲ. ಆದರೆ ನಾನು ಒಂದು ಪ್ರಶ್ನೆಯನ್ನು ಕೇಳುತ್ತೇನೆ. ಇದೆಲ್ಲಾ ರೈಟಿಂಗ್‌ನಲ್ಲಿ ಇದೆಯೇ ನೀವು ಬರೆದಿರುವುದಕ್ಕೆ ಉತ್ತರ ಬಂದಿದೆಯೇ? ಇದಕ್ಕೆ ಬರವಣಿಗೆಯ ಅವಶ್ಯಕತೆ ಇಲ್ಲ. ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದ ನಡುವೆ ಇದೊಂದು ವಿರಸದ ವಾತಾವರಣ. ಇವತ್ತು ಆ ವಿರಸದ ವಾತಾವರಣ ಇಲ್ಲ. ಇವತ್ತು ಮಧುರವಾದ ವಾತಾವರಣ ಇದೆ. ಕೇಂದ್ರದ ಮೇಲೆ ವಿಶ್ವಾಸ ಇದೆ ಎಂದು ಹಿಂದೆ ಅರ್ಥ ಮಂತ್ರಿಗಳು ಹೇಳಿದ್ದರು. ಆದರೆ 3 ವರ್ಷದವರೆಗೆ ಕೇಂದ್ರದಿಂದ ಹಣ ಬರಲಿಲ್ಲ. ಕೊನೆಗೆ ರಾಜ್ಯ ಸರ್ಕಾರವೇ ಸಾಲ ತೆಗೆದುಕೊಂಡು ಈ ಯೋಜನೆಯ ಕಾರ್ಯಮಾಡುವುದಕ್ಕೆ ಪ್ರಯತ್ನ ಮಾಡಿತು. ಇದರಿಂದ ಆ ಯೋಜನೆ ತಡವಾಗಿದೆ. ಕಾಳಿ ಯೋಜನೆ ಪ್ರಾರಂಭವಾದದ್ದು 1968–69 ರಲ್ಲಿ ಆಗಿನ ಸರ್ಕಾರ ಅದನ್ನು ಪ್ರಾರಂಭಮಾಡಿತು. ಯೋಜನೆಯ ಕೆಲಸ ಪ್ರಾರಂಭವಾದದ್ದು 1973–74ರಲ್ಲಿ ಹೀಗೆ ಹಂತಹಂತವಾಗಿ ಹಣದ ಕೊರತೆಯಿಂದಾಗಿ ಈ ಯೋಜನೆ ಮುಗ್ಗರಿಸುತ್ತಾ ನಡೆಯುತ್ತಾ ಬಂದಿದೆ. ಇದನ್ನು ನಾನು ಏತಕ್ಕೆ ಹೇಳುತ್ತಿದ್ದೇನೆ. ಎಂದರೆ ಇವತ್ತು ಸರ್ಕಾರಕ್ಕೆ ಮುಂದಾಲೋಚನೆ ಇಲ್ಲದೆ ಸರಿಯಾದ ರೀತಿಯಲ್ಲಿ ಕೇಂದ್ರದಿಂದ ಬರತಕ್ಕಂಥ ಹಣ ಬಾರದೆ ಕಾಳಿಯೋಜನೆ ತಡವಾಗಿದೆ. ಇವತ್ತು ಕೇಂದ್ರದಲ್ಲಿ ಯಾವುದೇ ಸರ್ಕಾರ ಇರಲಿ, ನಾವು ಅವರೊಡನೆ ವ್ಯವಹರಿಸುವಾಗ ಅದೆಲ್ಲಾ ಬರಹದಲ್ಲಿ ಇದ್ದರೆ ಒಳ್ಳೆಯದು. ಆದ್ದರಿಂದ ನಾವು ಕೇಳತಕ್ಕಂಥ ಹಕ್ಕು ಬರುತ್ತದೆ. ಅದು ಇಲ್ಲದೇ ಇದ್ದುದಕ್ಕೆ ಇವತ್ತು ಕಾಳಿ ಯೋಜನೆ ತಡವಾಗಿದೆ. ಈ ಪವರ್

ಬಗ್ಗೆ ನಾನು ಹೆಚ್ಚು ಮಾತನಾಡುವುದಕ್ಕೆ ಹೋಗುವುದಿಲ್ಲ. ಇವತ್ತಿನ ದಿವಸ ಒಕ್ಕಲುತನ ಉದ್ದಿಮೆ ಈ ರಾಜ್ಯದ ಒಂದು ಅಭಿವೃದ್ಧಿ ಎಲ್ಲವೂ ಸಂಪೂರ್ಣವಾಗಿ ಪವರ್ ಮೇಲೆ ಅವಲಂಬಿಸಿದೆ. ಅದನ್ನು ಎಷ್ಟೊಂದು ತ್ವರಿತವಾಗಿ ಆಚರಣೆಯಲ್ಲಿ ನಾವು ತರುತ್ತೇವೆಯೋ ಅಷ್ಟೊಂದು ತ್ವರಿತವಾಗಿ ಈ ರಾಜ್ಯ ಅಭಿವೃದ್ಧಿಯಾಗುತ್ತದೆ ಇದರ ಬಗ್ಗೆ ಹೆಚ್ಚು ಗಮನ ಕೊಡಬೇಕು. ಮತ್ತು ಹೆಚ್ಚು ಹಣವನ್ನು ಕೊಡಬೇಕು. ಅಲ್ಲದೇ ಈ ಕಾರ್ಯವನ್ನು ನಾವು ಹೆಚ್ಚು ಚುರುಕಿನಿಂದ ಮಾಡಬೇಕು. ಮಾನ್ಯ ಅರ್ಥಮಂತ್ರಿಗಳಿಗೆ ಒಂದು ಮಾತನ್ನು ಹೇಳುತ್ತೇನೆ. ತಾವು ಹಗಲು ರಾತ್ರಿ ನಿದ್ದೆಗೆಟ್ಟು ಜನರ ಮೇಲೆ ಕರ ಹೇರಿ ಹಣವನ್ನು ಗಳಿಸುತ್ತೀರಿ.

**ಶ್ರೀ ಮಳ್ಳೂರು ಆನಂದ ರಾವ್:** ಗೌರವಾನ್ವಿತ ಹಣಕಾಸು ಮಂತ್ರಿಗಳು ಬಡವರಾಗಿದ್ದಾರೆ.

*****

# ಕಾರ್ಪೋರೇಷನ್ ಆರ್ಥಿಕ ವ್ಯವಸ್ಥೆ ಕುರಿತು ಚರ್ಚೆ

ದಿನಾಂಕ: 14.6.1978

**ಸರ್ಕಾರವು ಆರ್ಥಿಕ ವ್ಯವಸ್ಥೆಯನ್ನು ಸಮರ್ಥವಾಗಿ ನಿಭಾಯಿಸಲು ಏನು ಮಾಡಬೇಕು ಎಂಬುದನ್ನು ಹೇಳುವ ಮೂಲಕ ಸಾರ್ವಜನಿಕ ಅರ್ಥಶಾಸ್ತ್ರಕ್ಕೆ ಹೊಸ ಚಿಂತನೆಗಳನ್ನು ನೀಡಿದ್ದಾರೆ. ಈ ಚರ್ಚೆಯಲ್ಲಿ ಯಾವುದೇ ಒಂದು ನಿರ್ದಿಷ್ಟ ಕೆಲಸ ಸಕಾಲಕ್ಕೆ ಸುಗಮವಾಗಿ ಆಗಲಿ ಎಂಬ ಸಲುವಾಗಿ ನಿಗಮ ಮಂಡಲಿಗಳನ್ನು ರಚಿಸಲಾಗುತ್ತದೆ. ಆದರೆ ಅವು ರಾಜಕೀಯ ಸ್ಥಾನ-ಮಾನಗಳಿಗೆ ಮೀಸಲಿಗೆ ಅನಗತ್ಯ ಖರ್ಚಿನ ಬಾಬತ್ತಿಗೆ ಕಾರಣವಾಗುತ್ತವೆ. ಈ ಪ್ರಸಂಗವನ್ನು ಬೊಮ್ಮಾಯಿ ಅವರು ಸದನದ ಚರ್ಚೆಯಲ್ಲಿ ಅಂಕಿ-ಅಂಶ ಸಮೇತ ವಿವರಿಸಿದ್ದಾರೆ.**

**ಶ್ರೀ ಎಸ್.ಆರ್. ಬೊಮ್ಮಾಯಿ:** ಅವರು ಜನಕ್ಕೆ ಟ್ಯಾಕ್ಸ್ ಹಾಕುತ್ತಾರೆ ಅದನ್ನು ಅವರು ವಸೂಲು ಮಾಡುತ್ತಾರೆ. ಆದರೆ ಹಣವನ್ನು ಹಿಡಿತವಾಗಿ ಖರ್ಚು ಮಾಡತಕ್ಕಂಥಾದ್ದು ಅವರ ಕೈಯಲ್ಲಿ ಇಲ್ಲ. ಒಂದು ಬಜೆಟ್ ಅನ್ನು ಪಾಸ್ ಮಾಡಿಬಿಟ್ಟರೆ ಮುಗಿದು ಹೋಯಿತು ಎಂದರೆ ಆಗುವುದಿಲ್ಲ. ಬಜೆಟ್ ಪಾಸ್ ಆದ ಮೇಲೆ ಎಲ್ಲೆಲ್ಲಿ ಹಣದ ಅಪವ್ಯಯವಾಗುತ್ತಿದೆ ಎಂಬುದನ್ನು ಅವರು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನೋಡಬೇಕು. ನಾನು ಏತಕ್ಕೆ ಇದನ್ನು ಹೇಳುತ್ತಿದ್ದೇನೆ. ಎಂದರೆ ಇದು ಕಣ್ಣಿದ್ದೂ ಕಾಣುವುದಿಲ್ಲ. ಈ ಸಮಯದಲ್ಲಿ ಈ ವಿಚಾರ ಬಂದಿದೆ. ಆದ್ದರಿಂದ ಒಂದು ಮಾತನ್ನು ಹೇಳಿಬಿಡುತ್ತೇನೆ. ಇದರಲ್ಲಿ ಒಂದು ಹೊಸ ವಿಧಾನ ನಡೆಯುತ್ತಿದೆ. ಸ್ವಾಮಿ ಈ 6 ವರ್ಷಗಳಲ್ಲಿ ಸುಮಾರು 28 ಕಾರ್ಪೊರೇಷನ್‌ಗಳು ಆಗಿವೆ. ಈ ಕಾರ್ಪೊರೇಷನ್‌ಗಳಲ್ಲಿ ಸುಮಾರು 1 ಕೋಟಿ ರೂ. ಬಂಡವಾಳದಿಂದ 200 ಕೋಟಿ ರೂಪಾಯಿವರೆಗೆ ಬಂಡವಾಳ ಇರತಕ್ಕಂಥ ಕಾರ್ಪೋರೇಷನ್‌ಗಳು ಇವೆ. ಈ ಕಾರ್ಪೊರೇಷನ್‌ಗಳಿಗೆ ಹಣವನ್ನು ಸರ್ಕಾರದಿಂದಲೂ ಫೈನಾನ್ಸ್ ಇನ್‌ಸ್ಟಿಟ್ಯೂಟ್‌ನಿಂದಲೂ ಗೌರ್ನಮೆಂಟ್ ಗ್ಯಾರಂಟಿಯಿಂದ ಕೊಡುತ್ತಿದ್ದಾರೆ. ಈ ಬಗ್ಗೆ ಉದಾಹರಣೆ ಕೊಡಬೇಕೆಂದರೆ ಎಲೆಕ್ಟ್ರಿಸಿಟಿ ಬೋರ್ಡ್, ಪವರ್ ಕಾರ್ಪೊರೇಷನ್, ಕೆ.ಎಸ್.ಆರ್.ಟಿ.ಸಿ., ಹೌಸಿಂಗ್ ಬೋರ್ಡ್. ಫಾರೆಸ್ಟ್ ಇಂಡಸ್ಟ್ರಿಸ್ ಕಾರ್ಪೊರೇಷನ್, ಬ್ಯಾಕ್‌ವರ್ಡ್‌ಕ್ಲಾಸ್ ಕಾರ್ಪೊರೇಷನ್ ಈ ರೀತಿ ಎಷ್ಟೋ ಕಾರ್ಪೊರೇಷನ್‌ಗಳಾಗಿವೆ. ಅವುಗಳ ಹೆಸರುಗಳನ್ನು ಹೇಳತಕ್ಕಂಥಾದ್ದೇ ಈಗ ಕಷ್ಟವಾಗಿದೆ. ಈ ಕಾರ್ಪೊರೇಷನ್‌ಗಳಲ್ಲಿ ದುಂದುಗಾರಿಕೆಯಿಂದ ಹಣವನ್ನು ಖರ್ಚು ಮಾಡುತ್ತಿದ್ದಾರೆ. ಅನೇಕ ಕಾರ್ಪೊರೇಷನ್‌ಗಳಲ್ಲಿ ಏನು ಆಗಿದೆ ಎಂದರೆ ಒಬ್ಬೊಬ್ಬ ಪಕ್ಷದ ರಾಜಕಾರಣಿಗೆ ಒಂದೊಂದು ಅಧಿಕಾರ ಸ್ಥಾನವನ್ನು ಕೊಟ್ಟಿದ್ದಾರೆ.

ಅವರಿಗೆ ಅಧಿಕಾರ ಸ್ಥಾನದ ಜೊತೆಗೆ ಒಂದು ಬಂಗಲೆ, ಒಂದು ಕಾರು ಎಸ್ಟಾಬ್ಲಿಷ್‌ಮೆಂಟ್ ಕೊಟ್ಟಿದ್ದಾರೆ. ಹೀಗಾಗಿ ಅನೇಕ ಕಾರ್ಪೋರೇಷನ್‌ಗಳಿಗೆ ಕೊಟ್ಟಂಥ ಹಣ ಅವುಗಳ ಎಷ್ಟಾಬ್ಲಿಷ್‌ಮೆಂಟ್ ಮೇಲೆ ಖರ್ಚಾಗುತ್ತಿದೆ. ಹೀಗಾದರೆ ಏನು ಪ್ರಯೋಜನವಿಲ್ಲ. ಎಲೆಕ್ಟ್ರಿಸಿಟಿ ಬೋರ್ಡು, ಕೆ.ಎಸ್.ಆರ್.ಟಿ.ಸಿ., ಹೌಸಿಂಗ್ ಬೋರ್ಡು ಇಂತಹ ದೊಡ್ಡ ಕಾರ್ಪೋರೇಷನ್‌ಗಳು ಏನಿವೆ. ಎಲ್ಲಿ ಪ್ರತಿ ವರ್ಷ ನೂರಾರು ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತಾರೆ. ಇಲ್ಲಿ ಡಿಮ್ಯಾಂಡ್‌ಗಳು ಬಂದ ಮೇಲೆ ಇಲ್ಲಿ ಪ್ರತಿಯೊಬ್ಬ ಸದಸ್ಯರಿಗೂ ಸರಿಯಾಗಿ ಹಣ ವ್ಯಯವಾಗಿದೆಯೇ ಇಲ್ಲವೇ ಎಂಬುದನ್ನು ಚರ್ಚೆ ಮಾಡುವುದಕ್ಕೆ ಅವಕಾಶ ಇದೆ. ಪಿ.ಡಬ್ಲ್ಯೂ.ಡಿ. ಯವರು ಕೆರೆ ಕಟ್ಟುವುದಕ್ಕೆ. ರಸ್ತೆ ಮಾಡುವುದಕ್ಕೆ ಬೇಕಾದಷ್ಟು ಹಣ ಖರ್ಚು ಮಾಡುತ್ತಾರೆ. ಕೆ.ಎಸ್.ಆರ್.ಟಿ.ಸಿ.ಯವರ ಟೈರ್ ಖರೀದಿ ಮಾಡುವುದಕ್ಕೆ 4 ಕೋಟಿ ರೂಪಾಯಿಗಳನ್ನು ಬಸ್ ಕೊಂಡುಕೊಳ್ಳುವುದಕ್ಕೆ 34 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ. ಇದನ್ನು ಕೇಳುವವರು ಯಾರು? ಇದನ್ನು ಕೇಳುವವರು ಯಾರೂ ಇಲ್ಲ. ಅದರ ಬಗ್ಗೆ ಇಲ್ಲಿ ಚರ್ಚೆಯೂ ಇಲ್ಲ. ಪವರ್ ಕಾರ್ಪೋರೇಷನ್‌ರವರು ಖರ್ಚು ಮಾಡತಕ್ಕಂಥಾದ್ದು ಕೆ.ಇ.ಬಿ.ಯವರು ಖರ್ಚು ಮಾಡತಕ್ಕಂಥಾದ್ದು ಹೌಸಿಂಗ್ ಬೋರ್ಡಿನವರು ಖರ್ಚು ಮಾಡತಕ್ಕಂಥಾದ್ದು ಯಾವುದಕ್ಕೂ ಸ್ಕ್ರೂಟಿನಿ ಇಲ್ಲ. ಮಾನ್ಯ ಸಭಾಪತಿಗಳು ಹೌಸಿಂಗ್ ಬೋರ್ಡ್‌ನ ಚೇರ್ಮನ್ ಆಗಿದ್ದರು. ಆಗ ಅನೇಕ ಮನೆಗಳನ್ನು ಕಟ್ಟಿದ್ದಾರೆ. ಆ ಮನೆಗಳ ಫೌಂಡೇಷನ್ ಸರಿಯಿಲ್ಲವೆಂದು ಕೆಲವರು ಹೇಳಿದರು. ನಾನು ಅದರ ಬಗ್ಗೆ ತನಿಖೆ ಮಾಡಿದಾಗ ಅಲ್ಲಿ ಪಕ್ಕದಲ್ಲಿ ಪೊಲೀಸ್ ಕ್ವಾಟ್ರಸ್‌ನ್ನು ಕಟ್ಟಿದ್ದಾರೆ. ಅವುಗಳ ಫೌಂಡೇಷನ್ ಬಹಳ ಚೆನ್ನಾಗಿದೆ.

ಸಮನಾದ ಭೂಮಿ ಇದೆ ಅಲ್ಲಿ ಮನೆಗಳನ್ನು ಕಟ್ಟುವುದಕ್ಕೆ ಯಾವ ತೊಂದರೆಯೂ ಇಲ್ಲ. ಕೆಲವು ಕಡೆ ಮನೆಗಳನ್ನು ಕಟ್ಟಿದ್ದಾರೆ. ಆ ಮನೆಗಳಲ್ಲಿ ವಾಸ ಮಾಡುವುದಕ್ಕೆ ಸಾಧ್ಯ ಇಲ್ಲ. ಮಹಡಿ ಮನೆಗಳನ್ನು ಕಟ್ಟಿದ್ದಾರೆ. ಅವುಗಳಿಗೆ ಮೆಟ್ಟಿಲುಗಳೇ ಇಲ್ಲ. ಕಾರ್ಪೋರೇಷನ್ ಯಾವ ರೀತಿ ಕೆಲಸ ಮಾಡುತ್ತಿದೆ ಎನ್ನುವುದನ್ನು ವಿಚಾರ ಮಾಡುವವರು ಯಾರು? ಈ ಮನೆಗೆ ವಿಚಾರ ಮಾಡುವಂತ ಒಂದು ಅಧಿಕಾರ ಬೇಡವೆ? ಕಾರ್ಪೋರೇಷನ್ ಮುಖಾಂತರ ಹಣ ಖರ್ಚು ಮಾಡುವಂತಹ ಹೊಸ ವಿಧಾನ ಏನು ಇದೆ ಇಂದು ಅಪವ್ಯಯ ಮಾಡುವುದಕ್ಕೆ ದಾರಿಯಾಗಿದೆ. 50 ಪರ್ಸೆಂಟ್ ಮೇಲೆ ಕಾರ್ಪೋರೇಷನ್ ಷೇರು ಬಂಡವಾಳ ಇದ್ದರೆ ಎ.ಜಿ.ಗೆ ಸ್ಕೂಟನಿಗೆ ಬರುತ್ತೆ. 49 ಪರ್ಸೆಂಟ್ ಇದ್ದರೂ ಕೂಡ ಅದನ್ನು ಎ.ಜಿ. ನೋಡುವುದಕ್ಕೆ ಆಗುವುದಿಲ್ಲ. ಪ್ರತಿ ವರ್ಷ ಆಡಿಟ್ ರಿಪೋರ್ಟ್ಸ್‌ನ್ನು ಈ ಮನೆಯ ಮುಂದೆ

ಇಡುವಂತೆ ವ್ಯವಸ್ಥೆ ಮಾಡಬೇಕು. ಕಳೆದ ಆರು ವರ್ಷಗಳು ನಮ್ಮ ಅನುಭವದಲ್ಲಿ ನೋಡಿದ್ದೇವೆ. ಯಾವುದೇ ಆಡಿಟ್ ರಿಪೋರ್ಟ್ ಕೂಡ ಸಭೆಯ ಮುಂದೆ ಬಂದಿಲ್ಲ. 5 ವರ್ಷದ ಹಿಂದಿನ ರಿಪೋರ್ಟ್ ಈಗ ಬರುತ್ತಿದೆ. ಪ್ರತಿ ವರ್ಷ ರಿಪೋರ್ಟ್‌ನ್ನು ಈ ಮನೆಯ ಮುಂದೆ ಕೊಡುವ ವ್ಯವಸ್ಥೆ ಮಾಡುತ್ತೀರಾ ಅಪ್ ಟು ಡೇಟ್ ಆಡಿಟ್ ರಿಪೋರ್ಟು ಯಾವುದು ಇಲ್ಲ. ಕಾರ್ಪೊರೇಷನ್‌ಗಳಲ್ಲಿ ಚೇರ್ಮನ್ ಆಗಿರತಕ್ಕಂಥವರು ಚಕ್ರಾಧಿಪತಿಗಳಾಗಿದ್ದಾರೆ. ಅವನದೇ ಒಂದು ಸಾಮ್ರಾಜ್ಯ ಅವನದೇ ಒಂದು ಆಡಳಿತ. ಅವನದೇ ಒಂದು ದರ್ಬಾರು ಪ್ರತಿಯೊಂದು ಕಾರ್ಪೊರೇಷನ್‌ಗಳಲ್ಲಿಯೂ ಕೂಡ ಇದು ನಡೆಯುತ್ತಿದೆ. ಈ ಕಾರ್ಪೊರೇಷನ್‌ಗಳ ಮೇಲೆ ಒಂದು ಹತೋಟಿ ತರುವುದಕ್ಕೆ ಮಾನ್ಯ ಅರ್ಥಮಂತ್ರಿಗಳು ಆಲೋಚನೆ ಮಾಡಬೇಕು. ಕಾರ್ಪೊರೇಷನ್‌ಗಳ ಹಣದ ಒಂದು ವ್ಯಯದ ಹತೋಟಿ ಲೆಕ್ಕಾಚಾರ ಈ ಮನೆಯ ಮುಂದೆ ಬರತಕ್ಕ ಒಂದು ವ್ಯವಸ್ಥೆಯನ್ನು ಕಂಡು ಹಿಡಿಯಬೇಕು. ಇಲ್ಲದೆ ಹೋದರೆ ತಾವು ಬಡ್ಜೆಟ್ಟಿನಲ್ಲಿ ಸುಮಾರು 635 ಕೋಟಿ ರೂಪಾಯಿಗಳನ್ನು ಒದಗಿಸಿದ್ದಿರಿ ಅದರ ನಾಲ್ಕು ಪಟ್ಟು ಹಣ ಈ ಕಾರ್ಪೊರೇಷನ್‌ಗಳಿಂದ ಪೋಲಾಗುವುದಕ್ಕೆ ಅವಕಾಶವಾಗುತ್ತದೆ. ಕಾರ್ಪೊರೇಷನ್‌ಗಳ ಬಗ್ಗೆ ಒಂದು ಮಾತು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಒಬ್ಬ ರಾಜಕೀಯ ನಾಯಕನಿಗೆ ಒಂದೊಂದು ಸ್ಥಾನಮಾನ ಕೊಡುವುದಕ್ಕಾಗಿ ಒಂದೊಂದು ಜಾತಿಯ ಮುಖಂಡರನ್ನು ಕೂಡಿಸಿ ಜಾತಿಯ ಆಧಾರದ ಮೇಲೆ ಒಂದು ರಾಜಕೀಯ ಪ್ರಭಾವ ಬೆಳೆಸುವ ಉದ್ದೇಶದಿಂದ ಈ ಕಾರ್ಪೊರೇಷನ್‌ಗಳನ್ನು ನಾಯಿಕೊಡೆಗಳಂತೆ ಬೆಳಸಲಿಕ್ಕೆ ಹೊರಟಿದ್ದಾರೆ. ಇವತ್ತು ಇವುಗಳ ಬಗ್ಗೆ ಕಮಿಷನ್ಸ್ ಬರುತ್ತಾ ಇರಲಿಲ್ಲ. ಒಂದು ಸಲಹೆಯನ್ನು ನಾನು ಕೊಡುತ್ತೇನೆ. ಇವತ್ತು ಈ ಕಾರ್ಪೊರೇಷನ್ ಇರಲಿ ಕೆ.ಇ.ಬಿ. ಇರಲಿ ಜನಹಿತವನ್ನು ಕಾಪಾಡತಕ್ಕ ವ್ಯಕ್ತಿಗಳನ್ನು ಹಣವನ್ನು ಸದುಪಯೋಗ ಮಾಡತಕ್ಕ ವ್ಯಕ್ತಿಗಳನ್ನು ಹಾಕಿ ಯಾವುದೇ ಒಂದು ರಾಜಕೀಯ ಉದ್ದೇಶಕ್ಕಾಗಿ ಒಂದು ಜಾತಿಯ ಆಧಾರದ ಮೇಲೆ ಮಾಡಕೂಡದು ಎಂದು ಹೇಳುತ್ತೇನೆ. ಹರಿಜನ ಗಿರಿಜನರಿಗೆ ಹಿಂದುಳಿದ ವರ್ಗದವರಿಗೆ ಮಾಡಲಿ.

ನಿಮ್ಮ ಸರ್ಕಾರದಲ್ಲಿ ಟೆಂಪರೆನ್ಸ್ ಕಮಿಟಿಗೆ 6 ವರ್ಷ ಆದ ಮೇಲೆ ಕಛೇರಿ ಕೊಟ್ಟಿದ್ದೀರಿ. ಕಮಿಷನ್ ಚೆನ್ನಾಗಿ ಕೆಲಸಮಾಡಬೇಕು. ಅದನ್ನು ನಾನು ಒಪ್ಪುತ್ತೇನೆ. ಕಾರ್ಪೊರೇಷನ್‌ಗಳ ಹಣಕಾಸಿನ ವ್ಯವಹಾರದಲ್ಲಿ ಹತೋಟಿ ತರುವುದು ಒಳ್ಳೆಯದೆಂದು ಹೇಳುತ್ತೇನೆ.

ಈಗ ಫಾರೆಸ್ಟ್ ಡಿಪಾರ್ಟ್‌ಮೆಂಟಿನಲ್ಲಿ ಎಷ್ಟು ಕಾರ್ಪೊರೇಷನ್‌ಗಳು ಇವೆ. ಫಾರೆಸ್ಟ್ ಕಾರ್ಪೊರೇಷನ್ ಫಾರೆಸ್ಟ್ ಇಂಡಸ್ಟ್ರೀಸ್ ಕಾರ್ಪೊರೇಷನ್, ಪ್ಲಾಂಟೇಷನ್

ಕಾರ್ಪೊರೇಷನ್, ಇವುಗಳ ಅವಶ್ಯಕತೆ ಇದೆಯೇ? ಮೂರು ಕಾರ್ಪೊರೇಷನ್‌ಗೂ ಮೂರು ತರಹ ಎಕ್ಸ್‌ಪೆಂಡಿಚರ್ ಇದು ಏನು ಇದು ಎಂದು ನಾನು ಕೇಳುತ್ತೇನೆ. ಇನ್ನು ಫುಡ್ ಡಿಪಾರ್ಟ್‌ಮೆಂಟಿನ ವಿಚಾರ ಹೇಳುವುದಾದರೆ ಫುಡ್ ಡಿಪಾರ್ಟ್‌ಮೆಂಟ್ ಇಂದು ಸೀಡ್ ಕಾರ್ಪೊರೇಷನ್ ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್ ತಲೆಗೆ ಒಂದೊಂದು ಕಾರ್ಪೊರೇಷನ್ ಮಾಡುತ್ತಿದ್ದಾರೆ ಅದು ಸರಿಯಲ್ಲ. ಇವತ್ತು ಒಂದೊಂದು ಡಿಪಾರ್ಟ್‌ಮೆಂಟಿನಲ್ಲಿ ಎಷ್ಟೆಷ್ಟು ಕಾರ್ಪೊರೇಷನ್‌ಗಳಿವೆ ಎಂದು ನಾನು ಫೈನಾನ್ಸ್ ಮಿನಿಸ್ಟರ್ ಅನ್ನು ಕೇಳಬೇಕಾಗಿದೆ. ಈ ತರಹದ ಮಲ್ಟಿ ಕಾರ್ಪೊರೇಷನ್‌ಗಳ ಉದ್ದೇಶ ಏನು. ಈ ಒಂದು ಕಾರ್ಪೊರೇಷನ್‌ಗಳ ಬಂಡವಾಳ ಏನು ಅದರ ಎಸ್ಟ್ಯಾಬ್ಲಿಷ್‌ಮೆಂಟ್ ಖರ್ಚು ಏನು ? ಇವೊತ್ತು ಒಂದು ಕಾರ್ಪೊರೇಷನ್‌ಗೆ ಬಂಡವಾಳವಾಗಿ 20–30 ಲಕ್ಷ ರೂಪಾಯಿ ಕೊಟ್ಟರೆ ಅದರ ಎಸ್ಟಾಬ್ಲಿಷ್‌ಮೆಂಟ್ ಖರ್ಚಿಗೆ ಸುಮಾರು 15 ಲಕ್ಷ ರೂಪಾಯಿ ಖರ್ಚಾಗುತ್ತದೆ. ಇದು ಸರಿಯೇ ಇನ್ನು ಬ್ಯಾಕ್‌ವರ್ಡ್ ಕ್ಲಾಸ್ ಕಾರ್ಪೋರೇಷನ್ ಮಾಡಿದ್ದೀರಿ ಅದನ್ನು ನಾನು ಒಪ್ಪುತ್ತೇನೆ. ಅದಕ್ಕೆ ತಾವು ಸರಿಯಾದ ಬಂಡವಾಳ ಕೊಡಬೇಕು. ಕಾರ್ಪೊರೇಷನ್ ಹೆಸರಿನಲ್ಲಿ 50 ಲಕ್ಷ ರೂಪಾಯಿ ಕೊಟ್ಟು 30 ಲಕ್ಷ ರೂಪಾಯಿ ಎಸ್ಟಾಬ್ಲಿಷ್‌ಮೆಂಟ್‌ಗೆ ಖರ್ಚು ಮಾಡಿದರೆ ಆ ಒಂದು ಕಾರ್ಪೊರೇಷನ್‌ನಲ್ಲಿ ಏನು ಮಾಡಲಿಕ್ಕೆ ಸಾಧ್ಯವಾಗುತ್ತದೆ ಎಂದು ಕೇಳುತ್ತೇನೆ. ಈಗ ಏನಾಗಿದೆ ಎಂದರೆ ಕಾರ್ಪೊರೇಷನ್‌ಗಳಿಗೆ ಬಂಡವಾಳ ಕಡಿಮೆ ಕೊಟ್ಟು ಸ್ಪಷ್ಟವಾಗಿ ರಾಜಕೀಯ ಜನಾಂಗಕ್ಕೆ ಮಾಯಾ ಬಜಾರ್ ಮಾಡಿ ಮತ ತೆಗೆದುಕೊಳ್ಳುವ ಉದ್ದೇಶದಿಂದ ಮಾಡಿದ್ದೀರಿ ಎಂದು ಅರ್ಥವಾಗುತ್ತದೆ. ಈಗ ಮಾಡಿರತಕ್ಕಂತಹ ಮಲ್ಟಿ ಕಾರ್ಪೊರೇಷನ್‌ಗಳನ್ನೆಲ್ಲಾ ತೆಗೆದು ಹಾಕಿ ಒಂದೇ ಕಾರ್ಪೊರೇಷನ್ ಮಾಡಿ ಅದಕ್ಕೆ ಸಾಕಷ್ಟು ಹಣ ಒದಗಿಸಿ ಸರಿಯಾದ ರೀತಿಯಲ್ಲಿ ವಿನಿಯೋಗಿಸಿದರೆ ಅನುಕೂಲವಾಗುತ್ತದೆ. ಇನ್ನು ಉಣ್ಣೆ ಕಾರ್ಪೊರೇಷನ್ ಎಂದು ಮಾಡಿದ್ದೀರಿ ಅದು ಎಷ್ಟೋ ವರ್ಷಗಳಾಗಿದೆ. ಅದಕ್ಕೆ ಬಡ್ಜೆಟ್ಟೇ ಇಲ್ಲ. ಅಲ್ಲಿಯ ಚೇರ್‌ಮನ್‌ಗೆ ಓಡಾಡಲಿಕ್ಕೆ ಒಂದು ಕಾರು ಮತ್ತೆ ಅವರ ಎಸ್ಟಾಬ್ಲಿಷ್‌ಮೆಂಟ್‌ಗೆ ಹಣ ಅಷ್ಟು ಇದ್ದರೆ ಸಾಕು.

**ಶ್ರೀ ಪಿ. ರಾಮದೇವ್:** ಈಗ ಬೆಗ್ಗರ್ಸ್ ಬಗ್ಗೆ ಒಂದು ಕಮಿಟಿ ಮಾಡಿದ್ದಾರೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಅದರ ಬಗ್ಗೆ ಟ್ಯಾಕ್ಸ್ ಕಲೆಕ್ಷನ್ ಆಗುತ್ತಾ ಇದೆ. ಈಗ ಇರತಕ್ಕಂತಹ 68 ಕಾರ್ಪೊರೇಷನ್‌ಗಳಲ್ಲಿ ಅನೇಕ ಕಾರ್ಪೊರೇಷನ್‌ಗಳು ಅನಾವಶ್ಯಕ ಇವೆ. ಈಗ ಅಭಿವೃದ್ಧಿ ದೃಷ್ಟಿಯಿಂದ ಯಾವ ಕಾರ್ಪೊರೇಷನ್‌ಗಳ ಅವಶ್ಯಕತೆ ಇದೆ. ಅವುಗಳಿಗೆ ಸಾಕಷ್ಟು ಹಣ ಕೊಟ್ಟು ಆ ಹಣವನ್ನು ಸರಿಯಾಗಿ

ಉಪಯೋಗ ಮಾಡಲಿಕ್ಕೆ ವ್ಯವಸ್ಥೆ ಮಾಡಿ ಅದರ ಒಂದು ಸ್ಕೂಟನಿ ಈ ಮನೆಯ ಮುಂದೆ ಬರುವುದಕ್ಕೆ ಒಂದು ವ್ಯವಸ್ಥೆ ಮಾಡಿ ಎಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಇನ್ನು ತಾಲ್ಲೂಕು ಬೋರ್ಡು ಚುನಾವಣೆ ಮೊನ್ನೆ ತಾನೆ ನಡೆದಿದ್ದು ತಮ್ಮ ಪಕ್ಷ ಪ್ರಚಂಡ ಬಹುಮತದಿಂದ ಗೆದ್ದು ಬಂದಿದೆ. ಜನತೆ ತಮಗೆ ಮತ ಕೊಟ್ಟು ಗೆಲ್ಲಿಸಿದ್ದಾರೆ. ತಾವು ಅಧಿಕಾರಕ್ಕೆ ಬಂದಿದ್ದೀರಿ ಅದನ್ನು ನಾವು ಒಪ್ಪಿಕೊಂಡಿದ್ದೇವೆ. ಇವೊತ್ತು ತಾಲ್ಲೂಕು ಬೋರ್ಡು ಪರಿಸ್ಥಿತಿ ಏನು, ಎಂದರೆ ಒಂದು ತಾಲ್ಲೂಕಿನ ಇನ್‌ಕಂ ಸುಮಾರು 5 ಲಕ್ಷ ರೂಪಾಯಿ ಬರಬಹುದು ಅಥವಾ ಕೆಲವು ಕಡೆಗಳಲ್ಲಿ ಮೂರು ನಾಲ್ಕು ಲಕ್ಷ ರೂಪಾಯಿಗಳು ಬರಬಹುದು. ಅಲ್ಲಿಯ ಒಬ್ಬ ಬಿ.ಡಿ.ಓ. ಇರುತ್ತಾರೆ. ಒಂದು ಜೀಪು ಇರುತ್ತದೆ. ಅದಕ್ಕೆ ಒಬ್ಬ ಡ್ರೈವರ್ ಒಬ್ಬ ಅಗ್ರಿಕಲ್ಚರ್ ಎಕ್ಸ್‌ಟೆನ್‌ಷನ್ ಆಫೀಸರ್ ಒಬ್ಬ ಸೋಷಿಯಲ್ ವೆಲ್‌ಫೇರ್ ಎಕ್ಸ್‌ಟೆನ್‌ಷನ್ ಆಫೀಸರ್ ಮತ್ತು ಕ್ಲರಿಕಲ್ ಸ್ಟ್ಯಾಫ್ ಇವರೆಲ್ಲರ ಖರ್ಚು ಲೆಕ್ಕ ಹಾಕಿದರೆ ಬಂದ ಉತ್ಪನ್ನ ಎಸ್ಟಾಬ್ಲಿಷ್‌ಮೆಂಟಿಗೆ ಹೋಗುತ್ತದೆ. ಈ ರೀತಿಯಾದರೆ ತಾಲ್ಲೂಕು ಬೋರ್ಡಿನವರು ಮಾಡತಕ್ಕ ಅಭಿವೃದ್ಧಿ ಕಾರ್ಯ ಏನು? ತಾಲ್ಲೂಕು ಬೋರ್ಡುಗಳಲ್ಲಿ ಒಂದು ರೋಡು ರಿಪೇರಿ ಮಾಡಲಿಕ್ಕೂ ಕೂಡ ಹಣ ಇರುವುದಿಲ್ಲ. ಅಲ್ಲಿ ಮೂರು ಡಿವಿಜನ್‌ಗಳು ಇರುತ್ತವೆ. ಒಂದೊಂದು ಡಿವಿಜನ್‌ಗೂ 5 ಸಾವಿರ, 3 ಸಾವಿರ, 2 ಸಾವಿರ ರೂಪಾಯಿಯಂತೆ ಕೊಡುತ್ತಾರೆ. ಇದರಿಂದ ಏನು ಕೆಲಸ ಮಾಡಲಿಕ್ಕೆ ಸಾಧ್ಯವಾಗುತ್ತದೆ ಇವೊತ್ತು ತಾಲ್ಲೂಕು ಬೋರ್ಡು ಎಲೆಕ್ಷನ್‌ಗೆ ಏನು ಹಣ ಖರ್ಚು ಮಾಡಿದ್ದಾರೆ. ಅದೇ ಹಣವನ್ನು ತಾಲ್ಲೂಕಿನ ಅಭಿವೃದ್ಧಿ ಕಾರ್ಯಗಳಿಗೆ ಹಾಕಿದ್ದರೆ ಎಷ್ಟೋ ಅನುಕೂಲವಾಗುತ್ತಿತ್ತು. ಇನ್ನು ಜಿಲ್ಲಾ ಬೋರ್ಡುನಲ್ಲೂ ಕೂಡ ಏನು ತಾನೆ ಅಧಿಕಾರ ಇದೆ. ಆರು ದಿವಸಗಳ ಹಿಂದೆ ಈ ಡಿಸೆಂಟ್ರಲೈಸೆಷನ್ ಆಫ್ ಪವರ್ ಆಗಬೇಕು, ಗ್ರಾಮಗಳ ಅಭಿವೃದ್ಧಿಯಾಗಬೇಕು. ಎಂದು ಅನೇಕ ರಾಜ್ಯಗಳಲ್ಲಿ ಜಿಲ್ಲಾ ಪರಿಷತ್ತು ಮತ್ತು ತಾಲ್ಲೂಕು ಬೋರ್ಡು ವ್ಯವಸ್ಥೆ ಮಾಡಿದೆ. ಇವೊತ್ತು ಗುಜರಾತಿನಲ್ಲಿ ಆಗಿದೆ, ಮಹಾರಾಷ್ಟ್ರದಲ್ಲಿ ಆಗಿದೆ, ಆಂಧ್ರದಲ್ಲಿ ಆಗಿದೆ. ಈ ರಾಜ್ಯದಲ್ಲಿ ಅಂತಹ ಒಂದು ಬಿಲ್ ತಯಾರಿಸಲಿಕ್ಕೆ ಮಾನ್ಯ ಕೊಂಡಜ್ಜಿ ಬಸಪ್ಪನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿದ್ದರು. ಅದರ ಬಗ್ಗೆ ಒಂದು ಬಿಲ್ ಕೂಡ ಆಗಿತ್ತು ನಾನು ಈ ಸಂದರ್ಭದಲ್ಲಿ ಸರ್ಕಾರಕ್ಕೆ ಒತ್ತಾಯ ಮಾಡುವುದು ಏನೆಂದರೆ ನಿಜವಾಗಿಯೂ ಗ್ರಾಮಗಳ ಅಭಿವೃದ್ಧಿಯಾಗಬೇಕಾಗಿದ್ದರೆ, ಜಿಲ್ಲಾ ಪರಿಷತ್ತು ಮತ್ತು ತಾಲ್ಲೂಕು ಮಂಡಲಿಗಳಿಗೆ ಹೆಚ್ಚಿನ ಹಣ ಮತ್ತು ಹೆಚ್ಚಿನ ಅಧಿಕಾರ ಕೊಡಬೇಕು. ಮಹಾರಾಷ್ಟ್ರ ಮತ್ತು ಗುಜರಾತಿನಲ್ಲಿ ಜಿಲ್ಲಾ ಪರಿಷತ್ತು ನೇರವಾಗಿ ಅಧ್ಯಕ್ಷರನ್ನು ಚುನಾವಣೆ ಮಾಡುತ್ತಾರೆ. ಆ ಜಿಲ್ಲೆಯೊಳಗಿನ ಒಂದು ಕೋಟಿ ರೂಪಾಯಿಗಳ

ಯೋಜನೆಯನ್ನು ಜಿಲ್ಲಾ ಅಭಿವೃದ್ಧಿ ಮಂಡಳಿಯವರು ಸಂಪೂರ್ಣ ಅಧಿಕಾರ ಹೊಂದಿ ಆ ಯೋಜನೆಗಳನ್ನು ಕಾರ್ಯಗತ ಮಾಡುತ್ತಾರೆ. ಸುಮಾರು ರೂ. 10 ಲಕ್ಷಗಳವರೆಗಿನ ಯೋಜನೆಗಳನ್ನು ತಾಲ್ಲೂಕು ಬೋರ್ಡಿನವರೇ ಕಾರ್ಯಗತ ಮಾಡುತ್ತಾರೆ. ಸರ್ವೆ ಸಾಧಾರಣವಾಗಿ ಜಿಲ್ಲೆಯೊಳಗಿನ ಕೆಲಸಗಳು ಅಂದರೆ ರಸ್ತೆ ಕೆಲಸವಾಗಲೀ ಚಿಕ್ಕಮಟ್ಟ ನೀರಾವರಿ ಕೆಲಸವಾಗಲೀ ಕುಡಿಯುವ ನೀರಿನ ಯೋಜನೆಗಳಾಗಲೀ ಅವುಗಳನ್ನೆಲ್ಲಾ ಜಿಲ್ಲಾ ಅಭಿವೃದ್ಧಿ ಮಂಡಳಿಯವರೇ ಮಾಡುತ್ತಿದ್ದಾರೆ. ಇದರಿಂದ ಏನು ಲಾಭ ಇದೆ ಎಂದರೆ ಪ್ರತಿಯೊಂದು ಕೆಲಸಕ್ಕೂ ಬೆಂಗಳೂರಿಗೆ ಬಂದು ಮಂತ್ರಿಗಳನ್ನು ಕಾಯಬೇಕಾಗಿಲ್ಲ. ಇವೊತ್ತು ಒಂದು ಸ್ಕೂಲ್ ಬಿಲ್ಡಿಂಗ್ ರಿಪೇರಿ ಆಗಬೇಕು ಎಂದರೆ ಎಷ್ಟು ಕಷ್ಟ ಇದೆ. ಇಲ್ಲಿ ಹಣ ಇರುವುದಿಲ್ಲ. ಅಲ್ಲಿ ರಿಪೇರಿ ಆಗುವುದಿಲ್ಲ. ಆದುದರಿಂದ ಈ ಅಧಿಕಾರವನ್ನು ವಿಕೇಂದ್ರೀಕರಣ ಮಾಡತಕ್ಕ ಒಂದು ಬಿಲ್ಲನ್ನು ಕೂಡಲೇ ತೆಗೆದುಕೊಂಡು ಬನ್ನಿ ಎಂದು ಹೇಳುತ್ತೇನೆ.

ಇವೊತ್ತು ನಮ್ಮಲ್ಲಿ ಒಂದು ಸಣ್ಣ ಬ್ರಿಡ್ಜ್ ಕೆಲಸ ಮಾಡಬೇಕಾದರೂ ಇಲ್ಲಿಗೆ ತರಬೇಕು. ಒಂದು ಲಕ್ಷಕ್ಕೆ ಮೇಲ್ಪಟ್ಟು ಖರ್ಚು ಮಾಡಲಿಕ್ಕೆ ಚೀಫ್ ಇಂಜಿನಿಯರ್‌ಗೂ ಪವರ್ ಇಲ್ಲ. ಅದೇ ಆಂಧ್ರ, ಮಹಾರಾಷ್ಟ್ರ, ಗುಜರಾತ್‌ಗಳಲ್ಲಿ ಇಂತಹ ಯೋಜನೆಗಳನ್ನು ಮಾಡತಕ್ಕಂತಾದ್ದಕ್ಕೆ ಹಣ ಖರ್ಚು ಮಾಡಲಿಕ್ಕೆ ಜಿಲ್ಲಾ ಪರಿಷತ್ತಿನವರಿಗೆ ಅಧಿಕಾರ ಇದೆ. ಅದೇ ರೀತಿ ಚುನಾಯಿತ ಪ್ರತಿನಿಧಿಗಳು ಕೆಲಸ ಮಾಡಲಿಕ್ಕೆ ಹೆಚ್ಚಿನ ಹಣ ಮತ್ತು ಅಧಿಕಾರವನ್ನು ಕೊಡಬೇಕು. ಈಗ ಏನಾಗಿದೆ ಎಂದರೆ ತಮ್ಮ ಮತ ಕ್ಷೇತ್ರದಲ್ಲಿ ಒಂದು ಕೆಲಸ ಆಗಬೇಕು. ಎಂದರೆ ಅಲ್ಲಿ ಜೂನಿಯರ್ ಇಂಜಿನಿಯರ್‌ನಿಂದ ಹಿಡಿದು ಚೀಫ್ ಇಂಜಿನಿಯರ್‌ವರೆಗೆ ಬಂದು ನಂತರ ಮಂತ್ರಿಗಳವರೆಗೆ ಬಂದು ಹೋಗಬೇಕು. ಇದರಿಂದ ಕಾಲ ವ್ಯಯವಾಗಿ ಅಭಿವೃದ್ಧಿ ಕಾರ್ಯ ಚುರುಕಿನಿಂದ ಆಗುವುದಿಲ್ಲ. ಇದನ್ನು ಇವರು ಏತಕ್ಕೆ ತರುತ್ತಾ ಇಲ್ಲ ಎಂದರೆ ಇದರಲ್ಲಿ ಒಂದು ಸ್ವಾರ್ಥ ಇದೆ. ಅದೇನೆಂದರೆ, ಅಧಿಕಾರ ವಿಕೇಂದ್ರೀಕರಣವಾದರೆ, ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಮಂತ್ರಿಗಳಿಗಿಂತ ಹೆಚ್ಚಿನ ಅಧಿಕಾರ ಪಡೆಯುತ್ತಾರೆ.

ಈ ವಿಚಾರದಲ್ಲಿ ಜನತೆ ಪದೇ ಪದೇ ಮಂತ್ರಿಗಳ ಹತ್ತಿರ ಬರುವ ಅವಶ್ಯಕತೆ ಇಲ್ಲ. ಅವರು ಬೆಂಗಳೂರಿಗೆ ಯಾತ್ರೆ ಮಾಡುವ ಅವಶ್ಯಕತೆ ಇಲ್ಲ. ಜನತೆ ತಮ್ಮ ಜಿಲ್ಲೆಯ ಅಭಿವೃದ್ಧಿ ಕಾರ್ಯಕ್ರಮವನ್ನು ತಾವೇ ಹಾಕಿಕೊಳ್ಳುತ್ತಾರೆ. ಇವತ್ತು ಏನಾಗಿದ ಎಂದರೆ ಯಾವ ಜಿಲ್ಲೆಯಲ್ಲಿ ರಾಜಕೀಯ ಒತ್ತಡ ಹೆಚ್ಚಾಗಿ ಬರುತ್ತದೆ ಅಲ್ಲಿ ಹೆಚ್ಚು ಅಭಿವೃದ್ಧಿ ಕಾರ್ಯಕ್ರಮಗಳು ನಡೆಯುತ್ತಿವೆ. ಎಲ್ಲಿ ರಾಜಕೀಯ ಒತ್ತಡ ಜಾಸ್ತಿ

ಬರುವುದಿಲ್ಲ ಅಲ್ಲಿ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿಲ್ಲ. ನಾನು ಹೇಳುವುದೇನೆಂದರೆ ಈ ಹಳ್ಳಿಗಳ ಸಮಾನಾಂತರ ಅಭಿವೃದ್ಧಿ ಆಗಬೇಕು. ಇದಾಗ ಬೇಕಾದರೆ ಅಧಿಕಾರ ವಿಕೇಂದ್ರೀಕರಣ ಆಗಲೇಬೇಕು. ಆದರೆ ಈ ಅಧಿಕಾರ ವಿಕೇಂದ್ರೀಕರಣವಾಗದಂತೆ ಕೆಲವು ಅಧಿಕಾರಿಗಳು ಅಡ್ಡ ಬರುತ್ತಿದ್ದಾರೆ. ಈ ಅಧಿಕಾರ ವಿಕೇಂದ್ರೀಕರಣ ನೀತಿಯನ್ನು ತರಬಾರದೆಂದಿದ್ದಾರೆ. ಇದು ಅಂಡರ್‌ಗ್ರೌಂಡ್ ಸೆಲ್‌ನೊಳಗೆ ಹೋಗಿದೆ. ಇದನ್ನು ದಯವಿಟ್ಟು ತಪ್ಪಿಸಿ, ಅಧಿಕಾರವನ್ನು ವಿಕೇಂದ್ರೀಕರಣ ಮಾಡಬೇಕು.

**ಶ್ರೀ ಎಸ್.ಎಂ. ಯಾಹ್ಯ:** ಈ ಅಧಿಕಾರ ವಿಕೇಂದ್ರೀಕರಣ ಮಾಡುವ ಕೆಲಸ ಬಹಳ ದಿನದಿಂದಲೂ ನಡೆದಿದೆ. ಇದು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಇದೆ. ನಮ್ಮಲ್ಲೂ ಸಹ ತಾಲ್ಲೂಕು ಬೋರ್ಡ್ ಲೆವೆಲ್‌ನಲ್ಲಿ ಒಂದು ರೀತಿಯ ಅಧಿಕಾರ ವಿಕೇಂದ್ರೀಕರಣವಾಗಿದೆ. ಇದನ್ನು ವಿವಿಧ ರೀತಿಯಲ್ಲಿ ಮಾಡಬಹುದು. ಹೀಗೆ ಮಾಡಬೇಕೆಂದು ಏನೂ ಇಲ್ಲ. ಆದರೆ ಈ ಅಧಿಕಾರ ವಿಕೇಂದ್ರೀಕರಣ ಮಾಡುವಾಗ ಪಂಚಾಯಿತಿ ಲೆವೆಲ್‌ನಲ್ಲಿ, ತಾಲ್ಲೂಕ್ ಬೋರ್ಡ್ ಲೆವೆಲ್‌ನಲ್ಲಿ, ಡಿಸ್ಟ್ರಿಕ್ಟ್ ಲೆವೆಲ್‌ನಲ್ಲಿ, ಸ್ಟೇಟ್ ಲೆವೆಲ್‌ನಲ್ಲಿ, ಸೆಂಟ್ರಲ್ ಲೆವೆಲ್‌ನಲ್ಲಿ ಮಾಡಬೇಕು. ಯಾವುದೇ ಬಾಬಿನಲ್ಲಿ ಅಧಿಕಾರ ವಿಕೇಂದ್ರೀಕರಣ ಮಾಡಿದರೂ ಹಣಕಾಸಿನ ವಿಚಾರದಲ್ಲಿ ಮತ್ತು ಅಡ್ಮಿನಿಸ್ಟ್ರೇಶನ್ ವಿಚಾರದಲ್ಲಿ ಮಾತ್ರ ಮಾಡುವುದಕ್ಕಾಗುವುದಿಲ್ಲ; ಎನ್ನುವ ಮಾತನ್ನು ನಾನು ಹೇಳಬಯಸುತ್ತೇನೆ. ಒಂದು ವೇಳೆ ನಾವು ಹಾಗೆ ಮಾಡಿದರೆ ಹೇಳುವವರು ನಾವು ದುಡ್ಡು ಇಟ್ಟುಕೊಳ್ಳುವವರು ಬೇರೆಯಾಗುತ್ತಾರೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಾನ್ಯ ಆರ್ಥಿಕ ಸಚಿವರ ಮಾತನ್ನು ನಾನು ಮೆಚ್ಚಿಕೊಳ್ಳುತ್ತೇನೆ. ಸ್ವಾಮಿ ಕಳೆದ 30 ವರ್ಷಗಳಿಂದಲೂ ನಮ್ಮ ಈ ಸಂವಿಧಾನವಿದೆ, ಈ ಅರ್ಥ ವ್ಯವಸ್ಥೆ ಇದೆ, ಇದು ಎಲ್ಲರಿಗೂ ಗೊತ್ತಿರುವ ವಿಚಾರ. ನಮ್ಮ ಮಾನ್ಯ ಮಿತ್ರರು ಕಳೆದ 6 ವರ್ಷಗಳಿಂದಲೂ ಅಧಿಕಾರದಲ್ಲಿದ್ದಾರೆ, ಇಷ್ಟು ದಿವಸಗಳವರೆಗೂ ಕೂಡ ಈ ಅಧಿಕಾರ ವಿಕೇಂದ್ರೀಕರಣದ ಬಗ್ಗೆ ಏತಕ್ಕೆ ಬಾಯಿ ಬಿಡಲಿಲ್ಲ?

**ಶ್ರೀ ಎಸ್.ಎಂ. ಯಾಹ್ಯ:** ಈ ರೀತಿ ಇಂಬ್ಯಾಲೆನ್ಸ್ ಆಗಬಾರದೆಂದು ನಾವು ಮಾಡಿದ್ದೆವು. ಕಳೆದ 30 ವರ್ಷಗಳಿಂದ ಅಧಿಕಾರದಲ್ಲಿದ್ದರೂ ಈ ಕಾರ್ಯವನ್ನು ಏತಕ್ಕೆ ಮಾಡಲಿಲ್ಲ ಎಂಬುದಕ್ಕೆ ಕಾರಣಗಳಿವೆ. ಅದು ಹೋಗಲಿ, ಈಗ ನಿಮ್ಮ ಕಾಲದಲ್ಲಾದರೂ ಈ ಕಾರ್ಯವನ್ನು ಮಾಡಿ ನೀವೇ ಒಳ್ಳೆಯ ಕ್ರೆಡಿಟ್ ತೆಗೆದುಕೊಳ್ಳಿ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಸ್ವಾಮಿ, ತಮಗೆ ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳುತ್ತೇನೆ. 42ನೇ ಅಮೆಂಡ್‌ಮೆಂಟ್ ಪಾಸ್ ಆದಮೇಲೆ ರಾಜ್ಯಗಳ ಅಧಿಕಾರವನ್ನು ನಿಮ್ಮವರು ಕಸಿದುಕೊಂಡರು. ಇವತ್ತು ನಿಮಗೆ ಬೆಳಕು ಬರತಕ್ಕಂಥ ಕೆಲಸವನ್ನು ನಾವು ಮಾಡಿದ್ದೇವೆ, ಅಂಥ ಒಂದು ವಾತಾವರಣವನ್ನು ನಾವು ಇಂದು ನಿರ್ಮಾಣ ಮಾಡಿಕೊಟ್ಟಿದ್ದೇವೆ.

**ಶ್ರೀ ಎಸ್.ಎಂ. ಯಾಹ್ಯ:** ನೀವು ಏನು ಮಾಡಿದ್ದೀರಿ ಎಂಬುವುದನ್ನು ಮುಂದೆ ನೋಡೋಣ. ಅಧಿಕಾರ ವಿಕೇಂದ್ರೀಕರಣವಾಗಬೇಕೆಂದು ನಿಮ್ಮ ಪಾರ್ಟಿ ಮ್ಯಾನಿಫೆಸ್ಟೋನಲ್ಲಿ ನಮೂದಿಸಿದ್ದೀರಿ. ಇದು ನಿಮ್ಮ ಗುರಿಯಾಗಿದೆ. ಆದರೆ ಈ ಕೆಲಸವನ್ನು ನೀವು ಮಾಡಲಿಲ್ಲವೆಂದು ನಮ್ಮ ಮೇಲೆ ಹೇರುವುದು ಬೇಡ. ಇದುವರೆಗೂ ನೀವು ಏನು ಮಾಡುತ್ತೇವೆಂದು ಹೇಳಿದ್ದೀರಿ. ಅದನ್ನು ಮಾಡುತ್ತಾರೇನೋ ಎಂದು ಜನ ನೋಡಿದರು ಆದರೆ ನೀವು ಆ ಕೆಲಸವನ್ನು ಮಾಡಲಿಲ್ಲ ಎಂಬುವುದನ್ನು ತಿಳಿದು ಜನ ನಮ್ಮ ಕಡೆಗೆ ಬರುತ್ತಿದ್ದಾರೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಸ್ವಾಮಿ, ನಾನು ಹೇಳುವುದೇನೆಂದರೆ ಬರೀ ಅಧಿಕಾರ ವಿಕೇಂದ್ರೀಕರಣ ಒಂದೇ ಅಲ್ಲ, ಎಲ್ಲಾ ದೃಷ್ಟಿಯಲ್ಲೂ ವಿಕೇಂದ್ರೀಕರಣ ಆಗಬೇಕು. ಈ ವಿಚಾರ ಸದಾ ಕಾಲವೂ ತಮ್ಮ ಮನಸ್ಸಿನಲ್ಲಿರಲಿ.

**ಶ್ರೀ ಎಸ್.ಎಂ. ಯಾಹ್ಯ:** ಕೇಂದ್ರದಲ್ಲಿ ನಿಮ್ಮ ಸರ್ಕಾರವೇ ಇದೆ, ನೀವು ಏನು ಬೇಕಾದರೂ ಹೇಳಿ ಮಾಡಿಸಬಹುದು.

**ಶ್ರೀ ಎಸ್.ಆರ್. ಬೊಮ್ಮಾಯಿ:** ಈಗ ನಾವು ಮಾತನಾಡುತ್ತಿರುವುದು ಈ ಅಸೆಂಬ್ಲಿಯಲ್ಲಿ ನಿಮ್ಮ ರಾಜ್ಯದ ಅರ್ಥ ವ್ಯವಸ್ಥೆ ಬಗ್ಗೆಯೇ ಹೊರತು, ಕೇಂದ್ರ ಸರ್ಕಾರದ ಬಡ್ಜೆಟ್ ವಿಚಾರದಲ್ಲಿ ಅಲ್ಲ. ಈ ರಾಜ್ಯದ ಜಿಲ್ಲೆಯ ಅಭಿವೃದ್ಧಿಯಾಗಿ, ಜನತೆಗೆ ಅನುಕೂಲವಾಗುವಂತಹ ಒಂದು ಬಿಲ್ಲನ್ನು ತಾವು ತೆಗೆದುಕೊಂಡು ಬನ್ನಿ.

**ಶ್ರೀ ಎಸ್.ಎಂ. ಯಾಹ್ಯ:** ನಮ್ಮ ರಾಜ್ಯದ ಎಲ್ಲ ಗ್ರಾಮಗಳೂ, ಜಿಲ್ಲೆಗಳೂ ಅಭಿವೃದ್ಧಿಯಾಗಬೇಕೆಂಬುದೇ ನಮ್ಮ ಸರ್ಕಾರದ ಉದ್ದೇಶ. ಅದನ್ನು ಮನಸ್ಸಿನಲ್ಲಿಟ್ಟುಕೊಂಡೇ ತಾಲ್ಲೂಕು ಬೋರ್ಡ್‌ಗಳಿಗೆ ಹೆಚ್ಚು ಹೆಚ್ಚು ಅನುಕೂಲಗಳನ್ನು ಕಲ್ಪಿಸಿಕೊಡಲು ಪ್ರಯತ್ನಿಸುತ್ತಿದ್ದೇವೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ತಾವು ಈ ರೀತಿ 3 ಲಕ್ಷ 4 ಲಕ್ಷ ರೂಪಾಯಿಗಳನ್ನು ಕೊಡುವುದರಿಂದ ಯಾವ ಅಭಿವೃದ್ಧಿ ಕೆಲಸಗಳೂ ಆಗುವುದಿಲ್ಲ. ಬೇರೆ ಬೇರೆ ರಾಜ್ಯಗಳಲ್ಲಿ ಯಾವ ರೀತಿ ಅವರು ಅಭಿವೃದ್ಧಿ ಕಾರ್ಯಗಳನ್ನು ಮಾಡುತ್ತಾರೆ. ಏನೇನು ಯೋಜನೆಗಳನ್ನು ಹಾಕಿಕೊಳ್ಳುತ್ತಾರೆ ಎಂಬುದನ್ನು ತಾವು ನೋಡಿಕೊಂಡು ಬಂದು ಅದಕ್ಕಿಂತ ಉತ್ತಮವಾದ ಒಂದು ಬಿಲ್ಲನ್ನು ತೆಗೆದುಕೊಂಡು ಬನ್ನಿ. ಇದರಿಂದ ರೆಡ್‌ಟೇಪಿಸಂ ಆಗುವುದು ತಪ್ಪುತ್ತದೆ. ಆಗ ತಾವು ಹೇಳುವ ವಿಷಯದ ಬಗ್ಗೆ ತಮ್ಮೊಂದಿಗೆ ಧ್ವನಿಯನ್ನೂ ಕೊಡಿಸುತ್ತೇವೆ.

ಮಾನ್ಯ ಸಭಾಧ್ಯಕ್ಷರೇ, ನಾನು ಇನ್ನೂ ಮಾತಾಡಬೇಕಾದ ವಿಚಾರಗಳು ಬಹಳಷ್ಟು ಇದ್ದವು ಆದರೆ ಕಾಲಾವಕಾಶ ಇಲ್ಲದಿರುವುದರಿಂದ ವಿದ್ಯಾಖಾತೆಯ ಬಗ್ಗೆ ಮಾತ್ರ ಒಂದೆರಡು ಮುಖ್ಯ ವಿಚಾರಗಳನ್ನು ಹೇಳಬಯಸುತ್ತೇನೆ. ನಾನು ರಾಜ್ಯದ ಎಲ್ಲಾ ಭಾಗಗಳಿಗೂ ಹೋಗಿ ನೋಡಿಲ್ಲ. ಕೇವಲ ನಮ್ಮ ಭಾಗದಲ್ಲಿ ನೋಡಿರಬಹುದಾದ ಒಂದೆರಡು ನಿದರ್ಶನಗಳನ್ನು ಹೇಳ ಬಯಸುತ್ತೇನೆ. ಅದರಲ್ಲೂ ಪ್ರಾಥಮಿಕ ಶಾಲೆಗಳ ಬಗ್ಗೆ ಹೇಳುವಾಗ ಮನಸ್ಸಿಗೆ ಬಹಳ ವೇದನೆಯಾಗುತ್ತದೆ. ಇವತ್ತು ರಾಜ್ಯದಲ್ಲಿರುವ ಅನೇಕ ಶಾಲೆಗಳಿಗೆ ಹಲವಾರು ವರ್ಷಗಳಿಂದ ರಿಪೇರಿ ವ್ಯವಸ್ಥೆ ಇಲ್ಲ. ಉದಾಹರಣೆಗೆ ಹುಬ್ಬಳ್ಳಿ ನಗರದಲ್ಲಿ 3ನೇ ತರಗತಿಯ ಒಂದು ಹೆಣ್ಣುಮಕ್ಕಳ ಶಾಲೆಯನ್ನು ನೋಡಲು ಹೋಗಿದ್ದೆವು, ಇಲ್ಲಿ ಮೂತ್ರಿ ಇಲ್ಲ, ರಿಪೇರಿ ಇಲ್ಲ ಅದು ಯಾವಾಗ ಕುಸಿದು ಬೀಳುತ್ತದೋ ಎನ್ನುವ ಸ್ಥಿತಿಯಲ್ಲಿದೆ ಅಲ್ಲಿ ಸುಮಾರು 800 ವಿದ್ಯಾರ್ಥಿಗಳಿದ್ದಾರೆ. ಇವತ್ತು ಏನಾಗಿದೆ ಎಂದರೆ ಕರ್ನಾಟಕ, ಹೈದರಾಬಾದ್ ಕರ್ನಾಟಕ ಇವುಗಳಿಂದ ಬಂದ ಭಾಗದ ಸ್ಕೂಲ್‌ಗಳಿಗೆ ಸರಿಯಾದ ರಿಪೇರಿ ವ್ಯವಸ್ಥೆ ಇಲ್ಲ. ತಾಲ್ಲೂಕ್ ಬೋರ್ಡ್ ಅಥವಾ ಮುನ್ಸಿಪಾಲಿಟಿಯವರು ಈ ಸ್ಕೂಲ್‌ಗಳನ್ನು ರಿಪೇರಿ ಮಾಡುವುದಿಲ್ಲ.

ವಿದ್ಯಾಖಾತೆಯ ಅಧಿಕಾರಿಗಳು ಬಂದು ನೋಡಿಕೊಂಡು ಹೋದರು ಆದರೂ ಏನೂ ಪ್ರಯೋಜನವಾಗಲಿಲ್ಲ. ಈವತ್ತಿನ ದಿವಸ ಸ್ಕೂಲ್ ಬಿಲ್ಡಿಂಗ್ಸ್‌ಗಳ ರಿಪೇರಿ ವಗೈರೆಗಳನ್ನು ಪಿ.ಡಬ್ಲ್ಯೂ.ಡಿ. ಇಲಾಖೆಯವರು ಮಾಡಬೇಕೋ ಯಾರು ಮಾಡಬೇಕೋ ಇದಾವುದು ಅರ್ಥವಾಗುತ್ತಿಲ್ಲ. ಕಾರ್ಪೋರೇಷನ್‌ನವರು ಮಾಡುತ್ತಾರೆಂದರೆ ಅವರಲ್ಲಿ ದುಡ್ಡಿರುವುದಿಲ್ಲ, ಅವರಿಗೆ ದುಡ್ಡನ್ನು ಕೊಟ್ಟರೆ ಮಾಡುತ್ತೇವೆಂದು ಹೇಳುತ್ತಾರೆ. ಸರ್ಕಾರದವರು ಶಾಲಾ ಆಡಳಿತವನ್ನು

ತೆಗೆದುಕೊಂಡಿರುವುದರಿಂದ ಕಾರ್ಪೊರೇಷನ್‌ರವರು ಸ್ಕೂಲ್ ಬಿಲ್ಡಿಂಗ್ ವ್ಯವಸ್ಥೆ ಮಾಡತಕ್ಕದ್ದು. ನಮ್ಮ ಜವಾಬ್ದಾರಿಯಲ್ಲವೆಂದು ಹೇಳುತ್ತಾರೆ. ಇದೇ ಸಂದರ್ಭದಲ್ಲಿ 57 ವರ್ಷಗಳಿಂದ ಮಕ್ಕಳ ಸಂಖ್ಯೆ 7ರಷ್ಟು ಜಾಸ್ತಿಯಾಗಿದೆ ಹೆಚ್ಚಿನ ಸಂಖ್ಯೆಗೆ ಅನುಗುಣವಾಗಿ ಸ್ಕೂಲ್ ಬಿಲ್ಡಿಂಗ್ ಇಲ್ಲದಿದ್ದರೆ ಮಕ್ಕಳು ವಿದ್ಯಾಭ್ಯಾಸ ಮಾಡುವುದಾದರೂ ಹೇಗೆ ಆಗುತ್ತದೆ. ಇದು ಬಹಳ ಗಂಭೀರವಾಗಿ ಆಲೋಚನೆ ಮಾಡಬೇಕಾದ ವಿಚಾರವಾಗಿರುತ್ತದೆ. ಸ್ಕೂಲ್ ಬಿಲ್ಡಿಂಗ್‌ನ ವಿಚಾರದಲ್ಲಿ ನಾವು ನೀವು ಜೊತೆಗೂಡಿ ಕೆಲಸ ಮಾಡಬೇಕಾಗುತ್ತದೆ. ಪ್ರಜಾ ಪ್ರಭುತ್ವದಲ್ಲಿ ಎಲ್ಲಿ ಅವ್ಯವಸ್ಥೆ ಆಗಿರುತ್ತದೆ, ಎಲ್ಲಿ ಅತ್ಯಾಚಾರ ನಡೆದಿರುತ್ತದೆ. ಎಲ್ಲಿ ಹಣದ ದುರುಪಯೋಗ ನಡೆದಿರುತ್ತದೆ ಅಲ್ಲಿ ವಿಚಾರಣೆ ಆಗಲೇ ಬೇಕು ಅವರು ದೊಡ್ಡವೇ ಇರಲಿ, ಮುಖ್ಯ ಮಂತ್ರಿಗಳೇ ಇರಲಿ, ಪ್ರಧಾನ ಮಂತ್ರಿಗಳೇ ಇರಲಿ ತಪ್ಪುಮಾಡಿದರೇ ಶಿಕ್ಷೆಯಾಗಲೇ ಬೇಕೆಂದು ಎಚ್ಚರಿಕೆಯನ್ನು ಕೊಡುತ್ತಿದ್ದೇನೆ.

*****

# ಸಾರಿಗೆ ವ್ಯವಸ್ಥೆಯನ್ನು ರಾಷ್ಟ್ರೀಕರಣ ಮಾಡಿ

ದಿನಾಂಕ: 14.06.1978

**ಸಾರಿಗೆ ವ್ಯವಸ್ಥೆಯನ್ನು ರಾಷ್ಟ್ರೀಕರಣ ಮಾಡುವ ಮೂಲಕ ಉತ್ತಮ ಸೇವೆ ಕಲ್ಪಿಸುವ ಜೊತೆಗೆ ಗ್ರಾಮೀಣ ಸಾರಿಗೆ ವ್ಯವಸ್ಥೆಯನ್ನು ಸುಧಾರಿಸಲು ಬೊಮ್ಮಾಯಿಯವರು ಇಲ್ಲಿ ಸರ್ಕಾರಕ್ಕೆ ಸಲಹೆ ಮಾಡಿದ್ದಾರೆ. ರಾಷ್ಟ್ರೀಕರಣದ ಮೂಲಕ ರಾಜ್ಯ ಸಾರಿಗೆ ಸಂಸ್ಥೆಯನ್ನು ಬಲಿಷ್ಠಗೊಳಿಸಲು ಬೊಮ್ಮಾಯಿ ಅವರು ನೀಡಿರುವ ಸೂಚನೆಗಳು ಇಂದಿಗೂ ಮಾದರಿಯಾಗಿವೆ.**

**ಶ್ರೀ ಎಸ್.ಆರ್. ಬೊಮ್ಮಾಯಿ :** ಇನ್ನು ಕೆ.ಎಸ್.ಆರ್.ಟಿ.ಸಿ. ಬಗ್ಗೆ ಸ್ಟ್ರೈಕ್ ಆಗುತ್ತಾ ಇರುವುದನ್ನು ನೋಡಿದರೆ ನನಗೂ ಕೂಡ ಒಂದು ರೀತಿಯ ಪ್ರಚೋದನೆಯಾಗಿದೆ. ಮಾನ್ಯ ಸಾರಿಗೆ ಮಂತ್ರಿಗಳು ಉತ್ಸಾಹಶಾಲಿಗಳಾಗಿದ್ದಾರೆ, ಅಲ್ಲದೇ ಬಹಳ ಅನುಭವ ಉಳ್ಳವರಾಗಿದ್ದಾರೆ ಅನ್ನುವುದನ್ನು ನಾನು ಒಪ್ಪುತ್ತೇನೆ. ಅವರಿಗೆ ಉತ್ಸಾಹ ಬಹಳ ಹೆಚ್ಚಿದೆ. ಕೆಲವು ವಿಚಾರಗಳನ್ನು ಬಹಳ ಉತ್ಸಾಹದಿಂದ ಹೇಳಿದ್ದಾರೆ. ಅದು ಸರ್ಕಾರದ ಧೋರಣೆಯೇ ಎಂದು ನಾನು ತಿಳಿಯಬಯಸುತ್ತೇನೆ. ಸಾರ್ವಜನಿಕರೂ ಕೂಡ ಒಪ್ಪಲಿ. ಅವರು ಒಂದು ಮಾತು ಹೇಳಲಿ. ಏನೆಂದರೆ ಗ್ರಾಮಾಂತರ ಪ್ರದೇಶದಲ್ಲಿರತಕ್ಕಂಥಾ ಸಾರಿಗೆ ವ್ಯವಸ್ಥೆಯನ್ನು ಖಾಸಗೀ ಮಾಲೀಕರುಗಳಿಗೆ ಕೊಡುವಂತಹಾ ವಿಚಾರವನ್ನು ಅವರೇ ಎತ್ತಿದ್ದಾರೆ. ಅದರ ಜೊತೆಗೆ ಬೆಂಗಳೂರಿನಲ್ಲಿರತಕ್ಕಂಥಾ ಬಸ್ಸುಗಳನ್ನು ಬೆಂಗಳೂರು ನಗರ ಕಾರ್ಪೊರೇಷನ್ನಿಗೆ ವಹಿಸಿಕೊಡುತ್ತೇವೆ. ಮತ್ತು ಅದರ ನಷ್ಟವನ್ನು ಅವರು ತುಂಬಿಕೊಡಬೇಕಾಗುತ್ತದೆ ಎಂದು ಹೇಳಿದ್ದಾರೆ. ಈ ವಿಚಾರ ವಿವಾದಾತ್ಮಕವಾದ ವಿಚಾರಗಳು ಅದೇನೆ ಇರಲಿ ಆ ವಿಚಾರ ಸರಿಯೋ ತಪ್ಪೋ ಅನ್ನುವ ವಿಚಾರ ಬೇರೆ. .ಈ ಬಗ್ಗೆ ಸರ್ಕಾರ ಧೋರಣೆ ಏನು ಅನ್ನುವುದನ್ನು ನಾವು ತಿಳಿಯಬಯಸುತ್ತೇನೆ. ಈವೊತ್ತು. ಸಮಾಜವಾದದಲ್ಲಿ ಇರತಕ್ಕಂಥಾ ಈ ಸರ್ಕಾರ, ರಾಷ್ಟ್ರೀಕರಣಕ್ಕೆ ಬದ್ಧವಾಗಿರತಕ್ಕಂಥ ಈ ಸರ್ಕಾರ ಈ ಒಂದು ತತ್ವವನ್ನು ಕೈಬಿಟ್ಟಂತಾಗುವುದಿಲ್ಲವೇ ? 1972ನೇ ಇಸವಿಯಲ್ಲಿ ಈ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ಇಲ್ಲಿಯವರೆಗೆ ಏನೇನು ನಡೆದಿದೆ ಅದರ ಹಿನ್ನೆಲೆ ನೋಡಿದೆ ಮಾನ್ಯ ಮಂತ್ರಿಗಳು ಈಗ ಹೇಳಿರುವ ಮಾತಿನಲ್ಲಿ ಅರ್ಥ ಇದೆ ಎಂದು ಗೊತ್ತಾಗುತ್ತದೆ. ಈವೊತ್ತು ಸಮಾಜವಾದದಲ್ಲಿ ನಂಬಿಕೆ ಇರತಕ್ಕಂಥಾ ಸರ್ಕಾರಕ್ಕೆ ರಾಷ್ಟ್ರೀಕರಣದಲ್ಲಿ ನಂಬಿಕೆ ಇಲ್ಲಾ ಅನ್ನುವುದು ತೋರಿಕೆ ಮಾತ್ರ ಅನ್ನುವುದು ಗೊತ್ತಾಗುತ್ತದೆ. ಅಧ್ಯಕ್ಷರೇ ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಬಯಸುತ್ತೇನೆ. 1954ರಲ್ಲಿ

ಮುಂಬೈ ರಾಜ್ಯ ಈಗಿನ ಕರ್ನಾಟಕ ಗುಜರಾತ್ ಮತ್ತು ಮುಂಬೈ ಸೇರಿ 3 ರಾಜ್ಯಗಳನ್ನೊಳಗೊಂಡ ಒಂದು ರಾಜ್ಯವಾಗಿತ್ತು. ಆವಾಗ ಆ ರಾಜ್ಯದಲ್ಲಿ ಬಸ್ ರಾಷ್ಟ್ರೀಕರಣ ಮಾಡಿದ್ದು ನಮ್ಮ ಮುಂದೆ ಒಂದು ಉದಾಹರಣೆ ಇದೆ. ಆವೊತ್ತು ಮಹಾರಾಷ್ಟ್ರ ಸರ್ಕಾರ ಒಂದು ನಿರ್ಣಯ ತೆಗೆದುಕೊಂಡು ಎಲ್ಲ ಬಸ್ಸುಗಳನ್ನು ರಾಷ್ಟ್ರೀಕರಣ ಮಾಡಿದರು. ಈವೊತ್ತಿನ ದಿವಸ ಮಹಾರಾಷ್ಟ್ರದಲ್ಲಿ ಖಾಸಗಿ ಸಾರಿಗೆ ಸಂಸ್ಥೆ ಇಲ್ಲ. ಗುಜರಾತ್‌ನಲ್ಲೂ ಇಲ್ಲ. ಅದೇ ರೀತಿ ಕರ್ನಾಟಕದಲ್ಲೂ ಕೂಡ ಮಾಡಬೇಕು ಎಂದು ಮಾಡಿದರು. ಖಾಸಗಿ ಸಾರಿಗೆ ಸಂಸ್ಥೆ ಇದ್ದರೆ ಒಳ್ಳೆಯದು ಅನ್ನುವ ಮಾತು ಬೇರೆ. ಆದರೆ ಈ ಒಂದು ತತ್ವಕ್ಕೆ ಬದ್ಧರಾಗಿದ್ದಾರೆಯೇ ಅನ್ನುವುದನ್ನು ನಾನು ಕೇಳುತ್ತೇನೆ. ರಾಷ್ಟ್ರೀಕರಣ ನೀತಿಯನ್ನು ಸರ್ಕಾರದವರು ಸ್ವೀಕಾರ ಮಾಡಿದ್ದಾರೆ ಸ್ವೀಕಾರ ಮಾಡಿದಂಥ ನೀತಿಯನ್ನು ಪಾಲಿಸದೆ ಅದಕ್ಕೆ ಶರಣು ಹೊಡೆದು ಅದನ್ನು ಕೈಬಿಡುತ್ತಿದ್ದಾರೆ. ಈ ಸರ್ಕಾರದವರು ಅಧಿಕಾರಕ್ಕೆ ಬಂದ ಮೇಲೆ 72ನೇ ಇಸವಿಯಿಂದ ಇವತ್ತಿನವರೆಗೆ ಒಂದು ಮೈಲಿ ರಸ್ತೆಯನ್ನು ರಾಷ್ಟ್ರೀಕರಣ ಮಾಡಿಲ್ಲ. ರಾಷ್ಟ್ರೀಕರಣದ ಧೋರಣೆಗೆ ಬದ್ಧವಾದಂಥ ಸರ್ಕಾರ ಈಗ ಡಿ ನ್ಯಾಷನಲೈಸ್ ಮಾಡತಕ್ಕ ಧೋರಣೆಯನ್ನು ತೆಗೆದುಕೊಂಡಿದೆ. ಮೂರು ವರ್ಷಗಳ ಹಿಂದೆ ರಾಜ್ಯದಲ್ಲಿ ಎಮರ್ಜೆನ್ಸಿ ಇದ್ದಾಗ ರಾಷ್ಟ್ರೀಕರಣ ನೀತಿಯನ್ನು ಕೈಬಿಡುತ್ತಾ ಬಂದು ಪ್ರೈವೇಟಿನ ಕಾಂಟ್ರಾಕ್ಟ್ ಕ್ಯಾರೇಜಸ್‌ನವರಿಗೆ ಪರ್ಮಿಷನ್ ಕೊಡುತ್ತಾ ಬಂದರು. ಅನೇಕ ಕಡೆಗಳಲ್ಲಿ ಪ್ರೈವೇಟಿನವರ ಸಂಖ್ಯೆಯು ಜಾಸ್ತಿಯಾಗುತ್ತಾ ಬಂತು. ಒಂದು ರೀತಿಯಲ್ಲಿ ಅವರುಗಳು ಚೆನ್ನಾಗಿ ನಡೆಸಿಕೊಂಡು ಪ್ಯಾಸೆಂಜರ್ಸ್‌ನ್ನು ಸಹ ಚೆನ್ನಾಗಿ ನಡೆಸಿದರು. ಆದರೂ ಮೊದಲು ಈ ಕೆಲಸವನ್ನು ಪ್ರೈವೇಟಿನವರಿಗೆ ಕೊಟ್ಟಿದ್ದು ತಪ್ಪು. ಇದನ್ನು ತಮಗೆ ಬೇಕಾದವರಿಗೆ ಅನುಕೂಲ ಮಾಡಿಕೊಡುವುದಕ್ಕೋಸ್ಕರ ಜಾರಿಗೆ ತಂದು ಒಂದು ರೀತಿಯ ಅವ್ಯವಹಾರವನ್ನೇ ನಡೆಸಿದರು. ಮುಂದು ಹಠತ್ತಾಗಿ ಲಕ್ಷಾಂತರ ರೂಪಾಯಿಗಳ ಬೆಲೆ ಬಾಳುವಂತಹ ಬಸ್ಸುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಬಸ್ ಮಾಲೀಕರಿಗೆ ಪರಿಹಾರವನ್ನು ಕೊಡಲಿಲ್ಲ. ಈ ವಿಚಾರ ಸುಪ್ರೀಂಕೋರ್ಟ್‌ನವರಿಗೂ ಹೋಗಿ ಬಂದಿದೆ. ಕೆಲವರು ಸಾಲ ಮಾಡಿ ತಮ್ಮ ಹೆಂಡಿರ ಮಕ್ಕಳ ಒಡವೆಗಳನ್ನು ಮಾರಿ ಬಸ್ಸುಗಳನ್ನು ತೆಗೆದುಕೊಂಡಿದ್ದರೆ ಅವರಿಗೆ ಸೂಕ್ತ ಪರಿಹಾರವನ್ನು ಕೊಡಬೇಕು. ಸರ್ಕಾರದವರು ಇವರಿಗೆ ಪರಿಹಾರವನ್ನು ಕೊಡದೇ ಇದ್ದುದರಿಂದ ಕೆಲವರು ನಿರುದ್ಯೋಗಿಗಳಾಗಿ ಬೀದಿ ಬೀದಿಯನ್ನು ಅಲೆಯುವಂಥ ಪರಿಸ್ಥಿತಿ ಬಂದಿದೆ. ಆದ್ದರಿಂದ ಸರ್ಕಾರದವರು ಇವರಿಗೆ ತಕ್ಷಣ ಪರಿಹಾರವನ್ನು ಕೊಡತಕ್ಕ ಯೋಚನೆಯನ್ನು ಮಾಡಬೇಕು ಎಂದು ನಾನು ಹೇಳುತ್ತೇನೆ. ಇದರ ಬಗ್ಗೆ ಸುಪ್ರೀಂ ಕೋರ್ಟಿನವರು ಒಂದು ಟ್ರಿಬ್ಯುನಲ್ ಮಾಡಬೇಕು ಎಂದು ಸಲಹೆ ಮಾಡಿದ್ದಾರೆ. ಟ್ರಿಬ್ಯುನಲ್ಸ್ ಮಾಡುವಾಗ ಇದಕ್ಕೆ

ಒಳ್ಳೆಯ ನ್ಯಾಯಾಧೀಶರನ್ನು ನೇಮಕ ಮಾಡಿದರೆ ಒಳ್ಳೆಯದು ಎಂದು ನಾನು ಸಲಹೆ ಮಾಡುತ್ತೇನೆ. ಅವರು ಸರಿಯಾದ ರೀತಿಯಲ್ಲಿ ವಿಚಾರಣೆ ಮಾಡಿ ನ್ಯಾಯ ಕೊಡತಕ್ಕ ವ್ಯವಸ್ಥೆಯಾಗಬೇಕು. ಇದರಲ್ಲಿ ಬಸ್ ಮಾಲೀಕರು ತಮಗೆ ತೊಂದರೆಯಾದರೆ ಹೈಕೋರ್ಟಿಗೆ ಅಪೀಲು ಹೋಗುವ ಅವಕಾಶವೂ ಇದೆ. ಒಟ್ಟಿನಲ್ಲಿ ಅವರಿಗೆ ಕೊಡತಕ್ಕ ವ್ಯವಸ್ಥೆ ಕೂಡಲೇ ಆಗಬೇಕು. ಮಾನ್ಯ ಮಂತ್ರಿಗಳು ಇತ್ತೀಚೆಗೆ ಕೆಲವು ರೂಟ್‌ಗಳನ್ನು ಪ್ರೈವೇಟಿನವರಿಗೆ ಕೊಡತಕ್ಕವಿಚಾರವಾಗಿ ಹೇಳಿದ್ದಾರೆ. ಇದಕ್ಕೆ ಕಾರಣ ಹೊಸ ಬಸ್ಸುಗಳನ್ನು ತೆಗೆದುಕೊಳ್ಳುವುದಕ್ಕೆ ನಮಗೆ ಶಕ್ತಿ ಇಲ್ಲ ಎನ್ನುವ ಮಾತನ್ನು ಹೇಳಬಹುದು. ಆದರೆ ಇದು ಕಾರಣವಲ್ಲ. ಮನಸ್ಸಿದ್ದರೆ ಮಾರ್ಗ ಇದೆ. ಎಲ್ಲಾ ರೂಟ್‌ಗಳನ್ನು ನ್ಯಾಷನಲೈಸ್ ಮಾಡುವುದಕ್ಕೆ ಸರ್ಕಾರಕ್ಕೆ ಇರುವ ತೊಂದರೆಯಾದರು ಏನು? ಕಾಂಟ್ರಾಕ್ಟ್ ಕ್ಯಾರೇಜ್‌ಗಳನ್ನು ಸರ್ಕಾರದವರ ವಶಕ್ಕೆ ತೆಗೆದುಕೊಂಡಮೇಲೆ ಎಲ್ಲಾ ರೂಟ್‌ಗಳನ್ನು ನ್ಯಾಷನಲೈಸ್ ಮಾಡತಕ್ಕ ಕೆಲಸವನ್ನು ಏಕೆ ಮಾಡುತ್ತಿಲ್ಲ. ನಮಗೆ ಇವರ ಹಿಂದೆ ಯಾರೋ ಇದ್ದಾರೆ. ಪಟ್ಟಭದ್ರ ಶಕ್ತಿಗಳು ತಮ್ಮ ರಾಜಕೀಯ ಪ್ರಭಾವವನ್ನು ಬೀರಿ ನ್ಯಾಷನಲೈಸ್ ಧೋರಣೆಗೆ ಅಡ್ಡಿ ಮಾಡುತ್ತಿದ್ದಾರೆಂದು ಶಂಕೆ ಬರುತ್ತಿದೆ. ಅವರ ವರ್ಚಸ್ ನಿಮ್ಮ ಮೇಲೆ ಇದೆ. ನಮ್ಮ ಕಡೆ ಸಾಮಾನ್ಯವಾಗಿ ಎಲ್ಲಾ ರೂಟ್‌ಗಳು ನ್ಯಾಷನಲೈಸ್ ಆಗಿವೆ. ಆದರೆ ಈ ಕಡೆ ಮಾತ್ರ ತಾವು ಏಕೋ ಮೀನಾಮೇಷ ಮಾಡುತ್ತಿದ್ದೀರಿ. ಎಲ್ಲಾ ರೂಟ್‌ಗಳನ್ನು ನ್ಯಾಷನಲೈಸ್ ಮಾಡಿದರೆ ಆಡಳಿತ ಒಂದು ಮಟ್ಟಕ್ಕೆ ಬರುತ್ತದೆ. ಇಲ್ಲಿ ಬಸ್ ಮಾಲೀಕರಿಗೆ ಪರಿಹಾರ ಕೊಡದೆ ತೊಂದರೆ ಕೊಟ್ಟಿದ್ದೀರಿ. ಶ್ರಮಪಟ್ಟು ಜಮೀನು ಮಾಡಿದಂಥವರಿಂದ ಜಮೀನನ್ನು ಕಿತ್ತುಕೊಂಡು ಅವರಿಗೂ ಪರಿಹಾರ ಕೊಟ್ಟಿಲ್ಲ. ಆದ್ದರಿಂದ ಖಾಸಗೀಯವರು ನಡೆಸತಕ್ಕ ಬಸ್ಸುಗಳನ್ನು ತೆಗೆದುಕೊಂಡು ರಾಷ್ಟ್ರೀಕರಣ ಮಾಡಿ. ತಮಗೆ ಪ್ರಜಾ ಪ್ರಭುತ್ವದಲ್ಲಿ ನಂಬಿಕೆ ಇದ್ದರೆ ರಾಷ್ಟ್ರೀಕರಣ ನೀತಿಯನ್ನು ಜಾರಿಯಲ್ಲಿ ತನ್ನಿ. ಇಲ್ಲದೆ ಹೋದರೆ, ಕೆಲವು ಹಳ್ಳಿಗಳ ರಸ್ತೆಗಳನ್ನು ಖಾಸಗಿಯವರಿಗೆ ಬಸ್ ಓಡಿಸುವುದಕ್ಕೆ ಕೊಡುವುದಾದರೆ ಮತ್ತೊಂದು ಅವ್ಯವಹಾರಕ್ಕೆ ನಾಂದಿಯಾಗುತ್ತದೆ. ಆದ್ದರಿಂದ ತಮಗೆ ಸಮಾಜವಾದದಲ್ಲಿ ವಿಶ್ವಾಸ ಇದ್ದರೆ. ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇದ್ದರೆ ಈ ವಿಚಾರವನ್ನು ಕೈಬಿಡಬೇಕು ಎಂದು ನಾನು ಹೇಳುತ್ತೇನೆ.

ಇನ್ನು ಕೆ.ಎಸ್.ಆರ್.ಟಿ.ಸಿ. ಬಗ್ಗೆ ನಾನು ಟ್ರಾನ್ಸ್‌ಪೋರ್ಟ್ ಡಿಮ್ಯಾಂಡ್ ಬಂದಾಗ ಮಾತನಾಡುತ್ತೇನೆ. ಬಸ್‌ಗಳ ಸ್ಥಿತಿಗತಿ ಪ್ರಯಾಣಿಕರಿಗೆ ಆಗತಕ್ಕ ತೊಂದರೆ

ಅಲ್ಲಿ ನಡೆಯತಕ್ಕ ಅವ್ಯವಹಾರದ ಬಗ್ಗೆ ಆಮೇಲೆ ಮಾತನಾಡುತ್ತೇನೆ. ಮುಖ್ಯವಾಗಿ ಟ್ರಾನ್ಸ್‌ಪೋರ್ಟ್ ಕಾರ್ಮಿಕರ ಸಮಸ್ಯೆಗಳನ್ನು ಬಿಡಿಸಲಿಕ್ಕೆ ತಾವು ಕೂಡಲೇ ಮನಸ್ಸು ಮಾಡಬೇಕು. ಅವರು ಅನೇಕ ಬೇಡಿಕೆಗಳನ್ನು ಇಟ್ಟಿದ್ದಾರೆ. ಅವುಗಳನ್ನು ತಾವು ಪರಿಶೀಲಿಸಿ ಪರಿಹಾರ ಕೊಟ್ಟರೆ ಅವರಲ್ಲಿ ನೆಮ್ಮದಿ ಬರುತ್ತದೆ. ಮತ್ತು ನಮ್ಮ ಕಾರ್ಯಗಳು ಸುಗಮವಾಗಿ ನಡೆಯಲಿಕ್ಕೆ ಅನುಕೂಲವಾಗುತ್ತದೆ. ಅಲ್ಲಿ ಆಗತಕ್ಕ ಲೀಕೇಜ್ ನಿಲ್ಲಿಸಲಿಕ್ಕೆ ತಕ್ಷಣ ಕಾರ್ಯಕ್ರಮ ತೆಗೆದುಕೊಳ್ಳಬೇಕು. ನಾನು ಪಬ್ಲಿಕ್ ಅಂಡರ್ ಟೇಕಿಂಗ್ ಕಮಿಟಿಯ ಸದಸ್ಯನಾಗಿದ್ದಾಗ ಇದರ ವ್ಯವಹಾರಗಳನ್ನು ನೋಡಿದ್ದೇನೆ. ಸರ್‌ಪ್ರೈಸ್ ಚೆಕ್ಮಾಡಿದಾಗ ಇನ್‌ಕಂ ಕೂಡ ಜಾಸ್ತಿಯಾಗಿದೆ. ಚಕ್ ಇಲ್ಲ ಅಂದರೆ ಆದಾಯ ಸೋರಿ ಹೋಗಿದೆ. ಇನ್ನು ಹೆಚ್ಚಿನ ವಿವರಗಳನ್ನು ನಾನು ಇಲ್ಲಿ ಹೇಳುವುದಕ್ಕೆ ಹೋಗುವುದಿಲ್ಲ.

**ಶ್ರೀ ಆರ್. ಗುಂಡೂರಾವ್ :** ನಾನು ಒದಗಿಸುತ್ತೇನೆ.

**ಶ್ರೀ ಎಸ್. ಆರ್. ಬೊಮ್ಮಾಯಿ :** ತಮಗೆ ನಾನು ಈ ಸಲಹೆಯನ್ನು ಕೊಟ್ಟಿದ್ದೇನೆ. ನಿಮಗೆ ಧೈರ್ಯ ಇದ್ದರೆ ಎಲ್ಲಾ ರೂಟ್‌ಗಳನ್ನು ನ್ಯಾಷನಲೈಸ್ ಮಾಡಿ.

****

# ಭೂ ಸುಧಾರಣೆ ಮೇಲಿನ ಚರ್ಚೆ

ದಿನಾಂಕ: 14.6.1978

**ಕರ್ನಾಟಕದ ಭೂ ಸುಧಾರಣೆ ವ್ಯವಸ್ಥೆ ಒಂದು ಕ್ರಾಂತಿಕಾರಿ ಹೆಜ್ಜೆ ಎಂಬುದು ಎಲ್ಲರಿಗೂ ತಿಳಿದ ವಿಚಾರ. ಈ ಕಾಯ್ದೆ ಜಾರಿಗೆ ಬರುವ ಮುನ್ನ ಇದರ ಲೋಪದೋಷಗಳನ್ನು ಬೊಮ್ಮಾಯಿ ಅವರು ಎತ್ತಿ ಹಿಡಿದರು. ಇದರಿಂದಾಗಿ ಕೆಲ ಅವಾಸ್ತವಿಕ ಅಂಶಗಳು ಈ ಕಾಯ್ದೆಯಿಂದ ಹೊರ ಉಳಿದವು. ಬೊಮ್ಮಾಯಿ ಅವರು ತಮ್ಮ ಈ ಭಾಷಣದಲ್ಲಿ ಭೂ ಸುಧಾರಣೆ ಕುರಿತು ಭಿನ್ನ ದೃಷ್ಟಿಕೋನದಲ್ಲಿ ಆಲೋಚನೆ ಮಾಡಿರುವುದು ಕಂಡುಬರುತ್ತದೆ.**

**ಶ್ರೀ ಎಸ್.ಆರ್. ಬೊಮ್ಮಾಯಿ :** ನಮ್ಮ ಮುಖ್ಯಮಂತ್ರಿಗಳು ತಮ್ಮ ಬೆನ್ನನ್ನು ತಾವೇ ತಟ್ಟಿಕೊಂಡು ಹೋದಹೋದಲೆಲ್ಲಾ ಲ್ಯಾಂಡ್ ರಿಫಾರಂಸ್ ಬಗ್ಗೆ ಕರ್ನಾಟಕದಲ್ಲಿ ತಾವು ಕೈಗೊಂಡಂಥ ಕಾರ್ಯಕ್ರಮಗಳನ್ನು ಬೇರೆ ಯಾವ ರಾಜ್ಯದಲ್ಲಿಯೂ ಕೈಗೊಂಡಿಲ್ಲ ಎನ್ನುವ ಮಾತನ್ನು ಹೇಳಿಕೊಳ್ಳುತ್ತಿದ್ದಾರೆ. ಇದು ಮೋಸ್ಟ್ ಪ್ರೊಗ್ರೆಸ್ಸೀವ್ ಲೆಜಿಸ್ಲೇಷನ್ ಎಂದು ಹೇಳುತ್ತಿದ್ದಾರೆ. ನಾನು ಅವರಲ್ಲಿ ಒಂದು ಸವಿನಯ ಪ್ರಾರ್ಥನೆ ಮಾಡುತ್ತೇನೆ. ಏಕೆಂದರೆ ಉಳಿದ ರಾಜ್ಯಗಳಲ್ಲಿ ಏನು ನಡೆಯುತ್ತಿದೆ ಎನ್ನುವುದನ್ನು ಅವರೂ ಸ್ವಲ್ಪ ತಿಳಿದುಕೊಂಡಿದ್ದರೆ, ಹೇಳಿದ್ದರೆ ಇದು ಚೆನ್ನಾಗಿತ್ತು. ಅವರು ಈಗ ಇಂಟರ್ ನ್ಯಾಷನಲ್ ಲೀಡರ್ ಆಗುವುದಕ್ಕೆ ಹೊರಟಿದ್ದಾರೆ. ಸಭೆಯಲ್ಲಿದ್ದರೆ ಚೆನ್ನಾಗಿತ್ತು.

**ಶ್ರೀ ಆರ್. ಗುಂಡೂರಾವ್ :** ಅವರಿಗೆ ಮೈಯಲ್ಲಿ ಸರಿಯಿಲ್ಲ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಲ್ಯಾಂಡ್ ರಿಫಾರಂಸ್ ಬಗ್ಗೆ ಹೇಳುವಾಗ ಮೊದಲು 1972ನೇ ಇಸವಿಯಲ್ಲಿ ಚುನಾವಣೆಗಳಿಗಿಂತ ಮುಂಚೆಯೇ ಟಿಲ್ಲರ್ ವುಡ್ ಬಿ ದಿ ಓನರ್ ಆಫ್ ದಿ ಸಾಯಿಲ್ ಮಾಡುತ್ತೇವೆಂದು ಹೇಳಿದರು. ಬೀದಿ ಬೀದಿಯಲ್ಲಿ ಈ ಮಾತನ್ನು ಹೇಳಿದ್ದಾರೆ. ಆದರೆ ಆದದ್ದು ಏನು? ಆಕ್ಟನ್ನು ತಮ್ಮ ಧೋರಣೆಗೆ ಅನುಗುಣವಾಗಿ ತಂದದ್ದು 2.10.74ರಲ್ಲಿ ಈ ಆಕ್ಟ್ ಅನ್ನು ಪಾಸ್ ಮಾಡಲಿಕ್ಕೆ ಎರಡು ವರ್ಷವಾಗಿದೆ. ಮಾನ್ಯ ರೆವಿನ್ಯೂ ಮಂತ್ರಿಗಳು ಸುಮಾರು 8 ಲಕ್ಷ ಟೆನೆಂಟ್ಸ್‌ಗಳಿಂದ ಅರ್ಜಿಗಳು ಬಂದಿವೆ. ಇದರಲ್ಲಿ ಮೂರು ಲಕ್ಷ ಅರ್ಜಿಗಳು ನಿರ್ಣಯವಾಗಿವೆ. ಇನ್ನೂ ನಾಲ್ಕು ಲಕ್ಷ ಅರ್ಜಿಗಳು ವಿಚಾರಣೆಯಾಗಬೇಕು ಎಂದು ಹೇಳಿದ್ದಾರೆ.

ಕಳೆದ ನಾಲ್ಕು ವರ್ಷಗಳಲ್ಲಿ 3 ಲಕ್ಷ ಅರ್ಜಿಗಳು ಈ ಟ್ರಿಬ್ಯುನಲ್‌ಗಳ ಮುಖಾಂತರ ಇತ್ಯರ್ಥವಾಗಿವೆ. ಇವುಗಳ ಪೈಕಿ ನನ್ನ ಒಂದು ಮಾಹಿತಿ ಪ್ರಕಾರ ಹೆಚ್ಚಾಗಿ ಅಂದರೆ 75 ಪರ್ಸೆಂಟಿನಷ್ಟು ಅಡ್ಮಿಟೆಡ್ ಟೆನೆಟ್ಸ್ ಒಡೆಯರೇ ಇವರು

ತಮ್ಮ ಬಳಿ ಇದ್ದ ರೈತರು ಎಂದು ಒಪ್ಪಿಕೊಂಡಿದ್ದಾರೆ. ಡಿಸ್ಪ್ಯೂಟೆಡ್ ಕೇಸಸ್ 25 ಪರ್ಸೆಂಟಿನಿಂದ 30 ಪರ್ಸೆಂಟಿನವರೆಗೆ ಇದೆ. ಆದರೆ ಇಷ್ಟೇ ಸಂಖ್ಯೆಯಲ್ಲಿ ಅಂದರೆ 25 ಪರ್ಸೆಂಟಿನಿಂದ 30 ಪರ್ಸೆಂಟ್‌ವರೆಗೆ ಹೈಕೋರ್ಟಿನಲ್ಲಿ ರಿಟ್ ಹಾಕಲಾಗಿದೆ. ಈ ಸಂಬಂಧದಲ್ಲಿ ಒಂದು ಲಕ್ಷದವರೆಗೆ ರಿಟ್ ಅರ್ಜಿಗಳನ್ನು ಹಾಕಲಾಗಿದೆ. ಈ ಅರ್ಜಿಗಳು ಮತ್ತೆ ನಿರ್ಣಯವಾಗಬೇಕಾಗಿದೆ.

**ಶ್ರೀ ವಿ.ಎಂ.ಕುಸನೂರ್:** ಒಂದು ಲಕ್ಷ ಅಲ್ಲ, 16 ಸಾವಿರ ಮಾತ್ರ ರಿಟ್‌ಗಳನ್ನು ಹಾಕಿರುವುದು.

**ಶ್ರೀ ಎಸ್.ಆರ್. ಬೊಮ್ಮಾಯಿ:** ತಾವು ಬೇಕಾದರೆ ಮತ್ತೊಂದು ಸಲ ವೆರಿಫೈ ಮಾಡಿ ನೋಡಿ, ನಮ್ಮ ಜಿಲ್ಲೆಯಲ್ಲಿಯೇ 5 ಸಾವಿರ ರಿಟ್ ಅರ್ಜಿಗಳನ್ನು ಹಾಕಿದ್ದಾರೆ. ಇಷ್ಟೊಂದು ರಿಟ್ ಅರ್ಜಿಗಳನ್ನು ತೀರ್ಮಾನ ಮಾಡಲು ಮತ್ತು 56 ಜನ ಹೈಕೋರ್ಟ್ ಜಡ್ಜ್‌ಗಳನ್ನು ಹೊಸದಾಗಿ ನೇಮಕ ಮಾಡಬೇಕಾಗುತ್ತದೆ. ಈಗ ಟ್ರಿಬ್ಯೂನಲ್‌ಗಳ ಮುಂದೆ ಉಳಿದಿರುವ ಅರ್ಜಿಗಳನ್ನು ಇತ್ಯರ್ಥ ಮಾಡಲು ಇನ್ನೂ ಎಷ್ಟು ವರ್ಷಗಳು ಬೇಕೋ ಗೊತ್ತಿಲ್ಲ. ಭೂ ಸುಧಾರಣೆಯ ಮೂಲಕ ರೈತರಿಗೆ ನ್ಯಾಯ ಕೊಟ್ಟಿದ್ದೇವೆಂದು ಹೇಳುತ್ತಾರೆ. ಆದರೆ ಜಮೀನೆಲ್ಲಾ ಸರ್ಕಾರದ ವಶದಲ್ಲಿಯೇ ಇದೆ. ರೈತರನ್ನೇ ಭೂ ಒಡೆಯರನ್ನಾಗಿ ಮಾಡಿಲ್ಲ. ಈಗಿನ ಆಕ್ಟ್ ಪ್ರಕಾರ ರೈತ ಇನ್ನೂ ಭೂ ಒಡೆಯನಾಗಿಲ್ಲ. ನಾನು ವಿಧಾನ ಪರಿಷತ್ತಿನ ಸದಸ್ಯನಾಗಿದ್ದಾಗ ಸಹ ಪದೇ ಪದೇ ಸಲಹೆಗಳನ್ನು ಈ ಬಗ್ಗೆ ಕೊಡುತ್ತಿದ್ದೆ. ಈಗಲೂ ಕೊಡುತ್ತಿದ್ದೇನೆ. ಏನೆಂದರೆ ಕೇರಳಾ ಮತ್ತು ಮಹಾರಾಷ್ಟ್ರದಲ್ಲಿ ಮಾಡಿರುವಂತೆ ಇಲ್ಲಿಯೂ ಸಹ ಉಳುವವನೇ ಒಡೆಯ ಎಂದು ಘೋಷಿಸಿ. ಆಗ ಭೂಮಿ ನಿಜವಾದ ರೈತನಿಗೆ ದಕ್ಕುತ್ತದೆ. ಭೂ ನ್ಯಾಯಮಂಡಲಿಯವರು ಇವನ್ನೇ ಟೆನೆಂಟ್ ಎಂದು ತೀರ್ಮಾನ ಮಾಡಿದ ಕೂಡಲೇ ಅವನನ್ನು ಭೂ ಒಡೆಯನನ್ನಾಗಿ ಮಾಡಬೇಕು. ಏನಾದರೂ ಡಿಸ್ಪ್ಯೂಟ್ ಇದ್ದರೆ ಅದನ್ನು ಆಗಲೇ ತೀರ್ಮಾನ ಮಾಡಬೇಕು. ಏನಿದ್ದರೂ ಆತನಿಂದ ಪರಿಹಾರದ ಹಣವನ್ನು ಮಾತ್ರ ಕಂತಿನ ರೂಪದಲ್ಲಿ ತೆಗೆದುಕೊಳ್ಳಬೇಕು. ಆಗ ಆತನಿಗೆ ತಾನೇ ಭೂ ಒಡೆಯ ಎಂಬ ಭಾವನೆ ಬರುತ್ತದೆ. ನಂತರ ಪರಿಹಾರವನ್ನು ಕಂತಿನ ರೂಪದಲ್ಲಿ ಕೊಡುವ ವ್ಯವಸ್ಥೆ ಮಾಡಿ. ಈ ಮೊದಲು ಸೆಕ್ಷನ್ 53ರ ಪ್ರಕಾರ ಪರಿಹಾರದ ಹಣವನ್ನು ಕಂತಿನ ರೂಪದಲ್ಲಿ ಕೊಡುವುದಕ್ಕೆ ವ್ಯವಸ್ಥೆ ಮಾಡಿ, ಈಗ ಅದನ್ನು ತಿದ್ದುಪಡಿ ಮಾಡುವುದರ ಮೂಲಕ ಕಂತಿನ ರೂಪದಲ್ಲಿ ಕೊಡುವುದಕ್ಕೆ ವ್ಯವಸ್ಥೆ ಇತ್ತು. ಈಗ ಅದನ್ನು ತಿದ್ದುಪಡಿ ಮಾಡುವುದರ ಮೂಲಕ ಒಂದೇ ಗಂಟಿನಲ್ಲಿ ಕೊಡಬೇಕೆಂದು ಮಾಡಿದ್ದೀರಿ. ಮತ್ತು ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕಿನ ಮೂಲಕ ಸಾಲ ತೆಗೆದುಕೊಂಡು ಒಂದೇ ಗಂಟಿನಲ್ಲಿ

ಕೊಡುವಂತಹ ವ್ಯವಸ್ಥೆಯನ್ನು ಸಹ ಮಾಡಿದ್ದೀರಿ. ಇದಕ್ಕೆ ಒಂದು ತಿದ್ದುಪಡಿ ಮಾಡಿದ್ದೀರಿ. ಈ ಹಣಕ್ಕೆ ರೈತರು 10 ಪರ್ಸೆಂಟ್ ಬಡ್ಡಿ ಕೊಡಬೇಕು. ಪರಿಹಾರದ ಹಣ ಅದರ ಮೇಲಿನ ಬಡ್ಡಿ ಮತ್ತು ಭೂ ಕಂದಾಯ ಈ ಮೂರನ್ನು ಸಹ ಕೊಡಬೇಕೆಂದರೆ ರೈತರಿಗೆ ಸಾಧ್ಯವಾಗುವುದಿಲ್ಲ. ಆಗ ರೈತನಾದವನು ಎಂದಿಗೂ ಭೂ ಒಡೆಯನಾಗುವುದಕ್ಕೆ ಸಾಧ್ಯವಾಗುವುದಿಲ್ಲ. ಇದನ್ನು ತಾವು ಅರ್ಥ ಮಾಡಿಕೊಳ್ಳಬೇಕು. ಉದ್ವೇಗದಲ್ಲಿ ತಾವು ಜನಕ್ಕೆ ಏನು ಬೇಕಾದರೂ ಪ್ರಚಾರ ಮಾಡಿಬಿಡಬಹುದು, ಆದರೆ ಅವನ್ನು ಕಾರ್ಯರೂಪಕ್ಕೆ ತರುವುದು ಅಷ್ಟು ಸುಲಭದ ಕೆಲಸವಲ್ಲ. ಕಂತು ಬಡ್ಡಿ ಮತ್ತು ಭೂ ಕಂದಾಯ ಈ ಮೂರನ್ನು ತಪ್ಪದೇ ಕಟ್ಟಬೇಕು. ಕಟ್ಟದಿದ್ದರೆ ಈ ನಿಮ್ಮ ಕಾಯಿದೆಯ ಪ್ರಕಾರ ಆತ ಭೂ ಒಡೆಯನಾಗುವುದಕ್ಕೆ ಸಾಧ್ಯವಾಗುವುದಿಲ್ಲ. ಆದ ಕಾರಣ ಇದನ್ನು ಪ್ರಗತಿಪರವಾದಂಥ ಭೂ ಸುಧಾರಣಾ ಮಸೂದೆ ಎಂದು ಯಾವ ರೀತಿ ಕರೆಯುತ್ತೀರಿ?

**ಶ್ರೀ ಎಸ್.ಎಂ. ಯಾಹ್ಯಾ:** ರೈತರು ಆ ಒಂದು ಸ್ಥಿತಿಗೆ ಬರುವುದಕ್ಕೆ ನಾವು ಬಿಡುವುದಿಲ್ಲ ರೈತರಿಗೆ ಸಹಾಯ ಮಾಡಬೇಕೆಂಬುದೇ ಸರ್ಕಾರದ ಮುಖ್ಯ ಗುರಿಯಾಗಿದೆ. ಈ ಬಗ್ಗೆ ಏನಾದರು ತೊಂದರೆಗಳು ಬಂದರೆ ಅದಕ್ಕೆ ಸೂಕ್ತ ತಿದ್ದುಪಡಿಗಳನ್ನು ತಂದಾದರೂ ಸಹ ರೈತರಿಗೆ ಸಹಾಯ ಮಾಡುತ್ತೇವೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಈಗಿನ ಆಕ್ಟ್ ಪ್ರಕಾರ ರೈತರಿಗೆ ಇದೊಂದು ದೊಡ್ಡ ಬಾರವಾಗಿದೆ. ಇದನ್ನು ತಾವು ಅರ್ಥ ಮಾಡಿಕೊಳ್ಳಬೇಕು. ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕಿನಿಂದ ಸಾಲ ತೆಗೆದುಕೊಳ್ಳಲು ರೈತರಿಗೆ ಎಷ್ಟು ಕಷ್ಟವಾಗುತ್ತದೆಂಬುದನ್ನು ತಾವು ನೋಡಬೇಕು. ರೆಕಾರ್ಡ್ ಆಫ್ ರೈಟ್ಸ್ ತೆಗೆದುಕೊಳ್ಳಲು ರೈತನು ವಿಲೇಜ್ ಅಕೌಂಟೆಂಟಿಗೆ ದುಡ್ಡು ಕೊಡಬೇಕು. ನಂತರ ಸಾಲ ಪಡೆದುಕೊಳ್ಳಲು ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕಿನ ಸೆಕ್ರೆಟರಿಗೆ ಹಣ ಕೊಡಬೇಕು.

**ಒಬ್ಬ ಸದಸ್ಯರು:** ಎಲ್ಲ ಹಣವನ್ನು ಕಂತಿನಲ್ಲಿ ಕೊಡುವುದಕ್ಕೆ ಅವಕಾಶವಿದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಈಗಿನ ಆಕ್ಟ್‌ನಲ್ಲಿ ಒಂದೇ ಗಂಟಿನಲ್ಲಿ ಹಣ ಕೊಡಬೇಕಾಗುತ್ತದೆ. ಭೂಮಿಯನ್ನು ಕಳೆದುಕೊಂಡವರಿಗೆ ಭೂಮಿಯನ್ನು ಪಡೆದವರು ಒಂದೇ ಗಂಟಿನಲ್ಲಿ 15ರಿಂದ 20 ಸಾವಿರ ರೂಪಾಯಿಗಳನ್ನು ಪರಿಹಾರದ ರೂಪದಲ್ಲಿ ಕೊಡುವುದು ಬಹಳ ಕಷ್ಟದ ಕೆಲಸ.

**ಶ್ರೀಮತಿ ರೇಣುಕಾರಾಜೇಂದ್ರನ್:** ಬೆಲೆ ಬಾಳುವ ಜಮೀನಾದರೆ ಜಾಸ್ತಿ ಕೊಡಬೇಕಾಗುತ್ತದೆ. ಆದರೆ ಹೊಲ ಆದರೆ ಕಡಿಮೆ ಪರಿಹಾರವನ್ನು ನಿಗದಿ

ಮಾಡುತ್ತಾರೆ. ಆದ ಕಾರಣ ರೈತರಿಗೆ ಪಿ.ಎಲ್.ಡಿ. ಬ್ಯಾಂಕ್‌ನವರು ಕೊಡುವ ಹಣ ಸಾಕಾಗುತ್ತದೆ.

**ಶ್ರೀ ಎಸ್. ಆರ್. ಬೊಮ್ಮಾಯಿ:** ನಿಮ್ಮ ಭಾಗದಲ್ಲಿ ಜಮೀನಿನ ಬೆಲೆ ಎಷ್ಟಿದೆಯೋ ನನಗೆ ಗೊತ್ತಿಲ್ಲ. ಆದರೆ ಒಳ್ಳೆಯ ಜಮೀನಾದರೆ ಪರಿಹಾರದ ಹಣ ಜಾಸ್ತಿ ಇರುತ್ತದೆ. ಇದಕ್ಕೆ ಬಡ್ಡಿ ಬೇರೆ ಕೊಡಬೇಕು. ಪರಿಹಾರದ ಹಣ ಎಷ್ಟು ನಿಗದಿ ಮಾಡುತ್ತಾರೆಂಬುದರ ಬಗ್ಗೆ ನಾನು ಹೇಳುವುದಿಲ್ಲ. ಆದರೆ ರೈತರು ಒಂದೇ ಗಂಟಿನಲ್ಲಿ ಹಣವನ್ನು ಬ್ಯಾಂಕಿನಲ್ಲಿ ಸಾಲ ಪಡೆದು ಕೊಡುವುದು ಬಹಳ ಕಷ್ಟವಾಗುತ್ತದೆ ಅದಕ್ಕೆ ಏನು ಮಾಡಬೇಕೆಂದರೆ, ಎಲ್ಲ ಭೂ ಮಾಲೀಕರಿಗೂ ಸರ್ಕಾರದವರೇ ನೇರವಾಗಿ ಒಂದೇ ಗಂಟಿನಲ್ಲಿ ಪರಿಹಾರವನ್ನು ಕೊಡಬೇಕು. ನಂತರ ರೈತರಿಂದ ಕಂತಿನ ರೂಪದಲ್ಲಿ ಸರ್ಕಾರದವರು ವಸೂಲಿ ಮಾಡಬೇಕು. ಮಾನ್ಯ ಶಿರ್ನಾಳಿ ಚಂದ್ರಶೇಖರ್ ಹೇಳಿದಂತೆ ಇದಕ್ಕೆ 40 ಕೋಟಿ ರೂಪಾಯಿಗಳು ಬೇಕಾಗಬಹುದು. ಒಂದು ಸಲ ಸರ್ಕಾರಿ ನೌಕರರಿಗೆ ಟಿ.ಎ. ಮತ್ತು ಡಿ.ಎ. ಜಾಸ್ತಿ ಮಾಡಿದರೆ ಸರ್ಕಾರಕ್ಕೆ 30 ಕೋಟಿ ರೂ.ಗಳವರೆಗೆ ಹೆಚ್ಚಿನ ಖರ್ಚು ಬರುವಾಗ ಇದಕ್ಕಾಗಿ ಹಣ ಒದಗಿಸುವುದು ಅಷ್ಟೇನೂ ಕಷ್ಟದ ಕೆಲಸವಲ್ಲ ಇದಕ್ಕಾಗಿ ವರ್ಷಕ್ಕೆ 34 ಕೋಟಿ ರೂಪಾಯಿಗಳಂತೆ ಒದಗಿಸಿದರೆ, ಅದರಿಂದ ರೈತರನ್ನು ಉದ್ದಾರ ಮಾಡಿದಂತಾಗುವುದಿಲ್ಲ. ಆದ್ದರಿಂದ ಸರ್ಕಾರ ಧೈರ್ಯ ಮಾಡಿ ಇದಕ್ಕೆ 30–40 ಕೋಟಿ ರೂಪಾಯಿಗಳನ್ನಾದರೂ ಒದಗಿಸಬೇಕು.

**ಶ್ರೀ ಎಸ್.ಎಂ. ಯಾಹ್ಯಾ:** 30–40 ಕೋಟಿ ರೂಪಾಯಿ ಅಲ್ಲ, 100 ಕೋಟಿ ರೂಪಾಯಿಗಿಂತ ಹೆಚ್ಚು ಹಣ ಇದಕ್ಕೆ ಬೇಕಾಗುತ್ತದೆ. ನೀವು ಹೇಳತಕ್ಕಂಥ ಸಲಹೆ ಚೆನ್ನಾಗಿದೆ. ಆದರೆ ಇದಕ್ಕೆ ಹೆಚ್ಚಿನ ಹಣ ಬೇಕಾಗುತ್ತದೆ. ಈಗಿನ ನಮ್ಮ ಈ ಪ್ರೋಗ್ರಾಮ್ ಏನಿದೆ, ಇದು ಪ್ರೋಗ್ರಾಮ್ ಅಷ್ಟೇ ಅಲ್ಲ ರೆವಲ್ಯೂಷನರಿ ಕೂಡ ಆಗಿದೆ. ಇಂತಹ ಒಂದು ಪ್ರೋಗ್ರಾಮನ್ನು ಇಡೀ ದೇಶದಲ್ಲಿ ಎಲ್ಲಿಯೂ ಜಾರಿಗೆ ತರಲಿಲ್ಲ. ಈ ಬಗ್ಗೆ ನಮ್ಮ ರಾಜ್ಯದಲ್ಲಿಯೂ ಸಹ ಮಾತನಾಡುತ್ತಿದ್ದರೇ ಹೊರತು ಯಾರೂ ಜಾರಿಗೆ ತಂದಿರಲಿಲ್ಲ. ನಮ್ಮ ಸರ್ಕಾರ ಅಧಿಕಾರಕ್ಕೆ ಬಂದಮೇಲೆ ಇದನ್ನು ಜಾರಿಗೆ ತರಲಾಗಿದೆ. ಅದಕ್ಕಾಗಿಯೇ ಕಳೆದ ಕೆಲವು ದಿವಸಗಳ ಹಿಂದೇ ಕೇಂದ್ರದ ಒಂದು ಕಮಿಟಿಯವರು ಈ ಯೋಜನೆಯ ಬಗ್ಗೆ ತಿಳಿದುಕೊಳ್ಳಲು ಇಲ್ಲಿಗೆ ಬಂದಿದ್ದರು. ಈ ಯೋಜನೆ ಇಷ್ಟೊಂದು ಪ್ರಗತಿದಾಯಕವಾಗಿರುವುದಕ್ಕೆ ಕಾರಣವೇನು, ನಮ್ಮ ಆಕ್ಟ್ ಯಾವ ರೀತಿ ಇದೇ ಎಂಬುದನ್ನೆಲ್ಲಾ ತಿಳಿದುಕೊಳ್ಳಲು ಐ.ಎ.ಎಸ್. ಆಫೀಸರ್‌ಗಳು ಇಲ್ಲಿಗೆ ಬಂದು ಎಲ್ಲವನ್ನೂ ನೋಡಿಕೊಂಡು ಹೋಗಿದ್ದಾರೆ. ಇಂತಹ ಒಂದು ರೆವಲ್ಯೂಷನರಿ ಲೆಜಿಸ್ಲೇಷನ್ ಮಾಡುವಾಗ ಕೆಲವು ತೊಂದರೆಗಳು

ಇರಬಹುದು. ನಾನು ಇಲ್ಲವೆಂದು ಹೇಳುವುದಿಲ್ಲ. ಆದಷ್ಟು ಬೇಗ ಇದು ಸುಧಾರಣೆಯಾಗಬೇಕಾಗಿದೆ. ಅದಕ್ಕಾಗಿಯೇ ನಾವು ಕೆಲವು ತಿದ್ದುಪಡಿಗಳನ್ನು ಇದಕ್ಕೆ ತರುತ್ತಿದ್ದೇವೆ. ತಾವು ಹಣ ಕೊಡುವ ವಿಚಾರದಲ್ಲಿ ಏನು ಸಲಹೆ ಕೊಡುತ್ತಿದ್ದೀರಿ, ಅದು ಖಂಡಿತವಾಗಿಯೂ ವಿಚಾರಣೆ ಮಾಡುವ ಸಲಹೆಯಾಗಿದೆ ಎಂದು ಹೇಳುತ್ತೇನೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಾನ್ಯ ಮಂತ್ರಿಗಳು ಕೇರಳಕ್ಕೆ ಹೋಗಿ ಬಂದರೆ ಗೊತ್ತಾಗುತ್ತದೆ. ಅಲ್ಲಿ ಕಮ್ಯುನಿಸ್ಟ್ ಗವರ್ನಮೆಂಟ್‌ನ್ನು ಯಾವ ರೀತಿ ಟ್ಯಾಕಲ್ ಮಾಡಿದ್ದಾರೆ ಎಂದು ಗೊತ್ತಾಗುತ್ತದೆ. ಆಲ್ ಇಂಡಿಯಾ ಕಮಿಟಿ ಬಂದಾಗ ಅವರನ್ನು ಗ್ರಾಮಾಂತರ ಪ್ರದೇಶಗಳಿಗೆ ಕಳುಹಿಸಿ. ಬೇಕಾದರೆ ನಾನು ಅವರನ್ನು ಕರೆದುಕೊಂಡು ಹೋಗುತ್ತೇನೆ. ಯಾವುದೇ ತಾಲ್ಲೂಕಿನ 100 ಜನ ಟೆನೆಂಟ್ಸ್‌ನಿಂದ ಎವಿಡೆನ್ಸ್ ತೆಗೆದುಕೊಳ್ಳೋಣ. ಟ್ರಿಬ್ಯೂನಲ್ಸ್ ಆದಮೇಲೆ ಅವರು ಕೇಸ್ ಸಲುವಾಗಿ ಎಷ್ಟು ಸಲ ಹೋಗಿದ್ದಾರೆ. ಎಷ್ಟು ಹಣವನ್ನು ಖರ್ಚುಮಾಡಿದ್ದಾರೆ. ಎಷ್ಟು ಲಂಚ ಕೊಟ್ಟಿದ್ದಾರೆ, ಎಷ್ಟು ಭ್ರಷ್ಟಾಚಾರ ನಡೆದಿದೆ. ಪ್ರತಿಯೊಬ್ಬ ರೈತನಿಗೂ ಟ್ರಿಬ್ಯುನಲ್ಸ್ ಆದಮೇಲೆ ಎಷ್ಟು ಹಣ ವ್ಯಯವಾಗಿದೆ ಎನ್ನುವುದನ್ನು ಸರ್ವೆ ಮಾಡೋಣ. ರೈತ ಕೇಸ್ ಸಲುವಾಗಿ ತನ್ನ ಜಮೀನಿನ 3 ಪಟ್ಟು ಹಣವನ್ನು ಕೊಟ್ಟಿದ್ದಾನೆ.

**ಶ್ರೀ ಎಸ್.ಎಂ.ಯಾಹ್ಯಾ:** ಟ್ರಿಬ್ಯೂನಲ್ಸ್ ವಿಚಾರದಲ್ಲಿ ಹೇಳುವುದಾದರೆ ಇವನ್ನು ಪೀಪಲ್ಸ್ ಕಾನ್‌ಸೆಪ್ಟ್‌ನಿಂದ ಮಾಡಿರತಕ್ಕಂಥಾದ್ದು. ಇಷ್ಟು ದೊಡ್ಡ ಪ್ರಮಾಣದಲ್ಲಿ ಇಂಪ್ಲಿಮೆಂಟ್ ಮಾಡುವಾಗ ಒಂದೆರಡು ಕಡೆ ತೊಂದರೆಯಾಗಿರಬಹುದು. ಖಂಡಿತವಾಗಿ ತೊಂದರೆಯಾಗಿಲ್ಲ ಎಂದು ಹೇಳುವುದಕ್ಕಾಗುವುದಿಲ್ಲ. ಜನರಲ್ಲಿ ನಂಬಿಕೆ ಉಳಿಸಿಕೊಂಡಿರತಕ್ಕಂಥಾದ್ದು ಈ ಟ್ರಿಬ್ಯೂನಲ್‌ಗಳು. ಅದನ್ನು ತಾವು ತಿಳಿದುಕೊಳ್ಳಬೇಕು. ಇದರಿಂದ ಲಕ್ಷಾಂತರ ಫ್ಯಾಮಿಲೀಸ್‌ಗೆ ಎಫೆಕ್ಟ್ ಆಗಿದೆ. ಮಾಲೀಕರಾಗತಕ್ಕ ರೈತರು ಒಂದೆರಡು ಸಾವಿರ ಅಲ್ಲ, 7 ಲಕ್ಷಕ್ಕಿಂತ ಹೆಚ್ಚು ಅರ್ಜಿಗಳು ಇವೆ. 3 ಲಕ್ಷ ಅರ್ಜಿಗಳನ್ನು ಈಗಾಗಲೇ ತೀರ್ಮಾನ ಮಾಡಿದ್ದಾರೆ. ಒಂದೊಂದು ಕೇಸಿಗೂ ಯಾವ ಕೋರ್ಟಿಗೆ ಹೋದರು ಎಷ್ಟು ವರ್ಷಗಳು ಆಗುತ್ತದೆ ಎನ್ನುವುದು ತಮಗೆ ಗೊತ್ತಿದೆ. ಈ ಟ್ರಿಬ್ಯೂನಲ್ಸ್‌ನವರು ಲಕ್ಷಾಂತರ ಕೇಸುಗಳನ್ನು ಉತ್ತಮ ರೀತಿಯಲ್ಲಿ ತೀರ್ಮಾನ ಮಾಡಿದ್ದಾರೆ.

**ಶ್ರೀ ಎಸ್.ಆರ್.ಬೊಮ್ಮಾಯಿ:** ಯಾವುದೇ ತಾಲ್ಲೂಕಿನಲ್ಲಿ 100 ಜನ ಟೆನೆಂಟ್ಸ್‌ನ್ನು ತೆಗೆದುಕೊಂಡು ಎಗ್ಸಾಮಿನ್ ಮಾಡೋಣ, ಸರ್ವೆ ಮಾಡೋಣ. ಇದಕ್ಕೆ ತಾವು ಒಪ್ಪಿಕೊಳ್ಳಿ. ಲ್ಯಾಂಡ್ ಟ್ರಿಬ್ಯೂನಲ್ಸ್‌ನಿಂದ ಎಷ್ಟು ನಿರ್ಣಯಗಳಾಗಿವೆ

ಎಂದು ಎಗ್ಸಾಮಿನ್ ಮಾಡೋಣ. ರೈತರಿಗೆ ಟ್ರಿಬ್ಯೂನಲ್ಸ್‌ಗೆ ಹೋಗಲಿಕ್ಕೆ ಕೇಸ್ ಮಾಡಲಿಕ್ಕೆ ಎಷ್ಟು ಹಣ ಖರ್ಚಾಗಿದೆ. ಎಷ್ಟು ತೊಂದರೆಯಾಗಿದೆ ಎನ್ನುವುದನ್ನು ಅರ್ಥಮಾಡಿಕೊಳ್ಳಿ. ಆ ಓಟು ಕೊಟ್ಟಿದ್ದಾರೆ, ಅದರ ಬಗ್ಗೆ ಚರ್ಚೆ ಮಾಡುವುದು ಪಾಲಿಸಿ ಮ್ಯಾಟರ್ ಆಗುತ್ತದೆ. ಲ್ಯಾಂಡ್ ರಿಫಾರ್ಮ್ಸ್ ಒಂದಕ್ಕೆ ಜನ ಓಟು ಕೊಟ್ಟಿದ್ದಾರೆ ಎನ್ನುವ ಮಾತನ್ನು ನಾನು ಒಪ್ಪುವುದಿಲ್ಲ ಯಾವುದೇ ತಾಲ್ಲೂಕನ್ನು ತೆಗೆದುಕೊಂಡು ಸರ್ವೆ ಮಾಡೋಣ ನಿಮ್ಮ ಆಫೀಸರನ್ನು ಕಳುಹಿಸಿಕೊಡಿ, ಇದಕ್ಕೆ ನೀವು ಒಪ್ಪಿಕೊಳ್ಳಿ.

**ಶ್ರೀ ಎಸ್.ಎಂ.ಯಾಹ್ಯಾ:** ಚಾಲೆಂಜ್, ಕೌಂಟರ್ ಚಾಲೆಂಜ್ ಬೇಡ. ನಾನೂ ಗ್ರಾಮಾಂತರ ಪ್ರದೇಶಗಳಿಗೆ ಹೋಗಿ ಬಂದಿದ್ದೇನೆ. ನನಗೂ ಅನುಭವ ಇದೆ. ಹೆಚ್ಚು ಹೆಚ್ಚು ಹಳ್ಳಿಗಳಿಗೆ ಹೋಗುವವರಲ್ಲಿ ನಾನೂ ಒಬ್ಬ, ನಾನೂ ಕೂಡ ಹೋಗಿ ಬಂದವನೇ, ನನಗೂ ಸ್ವಲ್ಪ ಅನುಭವ ಇದೆ.

**ಶ್ರೀ ಎಸ್.ಆರ್.ಬೊಮ್ಮಾಯಿ:** ಕೆಲವು ಟ್ರಿಬ್ಯೂನಲ್‌ಗಳಲ್ಲಿ ಒಳ್ಳೆಯ ಸದಸ್ಯರಿದ್ದಾರೆ, ಒಳ್ಳೆಯ ಸದಸ್ಯರು ಎಲ್ಲೆಲ್ಲಿದ್ದಾರೆ ಅಲ್ಲಿ ಒಳ್ಳೆಯ ಕೆಲಸವಾಗಿದೆ. ಆದರೆ ಕೆಲವು ಕಡೆ ಟೆನೆಂಟ್ಸ್‌ಗೆ ಹೆಚ್ಚು ತೊಂದರೆಯಾಗಿದೆಯೆನ್ನುವುದನ್ನು ಅರ್ಥಮಾಡಿಕೊಳ್ಳಿ. ತಾವು ಕೋರ್ಟಿಗೆ ಹೋಗಿದ್ದರೆ ಎಷ್ಟೋ ವರ್ಷಗಳಾಗುತ್ತಿತ್ತು ಎನ್ನುವ ಮಾತನ್ನು ಹೇಳಿದಿರಿ. ಅಂಕಿಸಂಖ್ಯೆಗಳನ್ನು ತೆಗೆದುಕೊಂಡು ನೋಡೋಣ, ಸರ್ಕಾರದ ಫೈಲ್ ತೆಗೆದುಕೊಂಡು ನೋಡೋಣ. 1965ರಲ್ಲಿ ಈ ಆಕ್ಟ್ ಬಂತು. ಆಗ 6 ಲಕ್ಷ ಅರ್ಜಿಗಳು ಇದ್ದವು.

**ಶ್ರೀ ಎಸ್.ಎಂ.ಯಾಹ್ಯಾ:** ನಿಮ್ಮ ಧಾರವಾಡ ಜಿಲ್ಲೆಯಲ್ಲಿ ಎಷ್ಟು ಜನ ರೈತರು ಭೂಮಾಲೀಕರಾಗಿದ್ದಾರೆ? ಟ್ರಿಬ್ಯೂನಲ್ಸ್ ಆದ ಮೇಲೆ ಎಷ್ಟು ಜನ ರೈತರು ಭೂಮಾಲೀಕರಾಗಿದ್ದಾರೆ? ಹಿಂದೆ ಭೂಮಾಲೀಕರ ಪರವಾಗಿ ತೀರ್ಮಾನಗಳು ಆಗಿವೆ.

**ಶ್ರೀ ಎಸ್.ಆರ್.ಬೊಮ್ಮಾಯಿ:** ಮುನ್ಸೀಫರ್ ಡಿಸೈಡ್ ಮಾಡಿದವರು. ತಾವು ಮಂತ್ರಿಗಳಾಗಿದ್ದೀರಿ, ಆ ರೀತಿ ಹೇಳಬಾರದು. ಆಗ ಅಲ್ಲಿ ಶೇಕಡ 80 ಕ್ಕೂ ಹೆಚ್ಚು ಪ್ರಕರಣಗಳಲ್ಲಿ ಉಳುವವರ ಪರ ನ್ಯಾಯ ಸಿಕ್ಕಿದೆ.

**ಒಬ್ಬ ಸದಸ್ಯರು:** ಇಲ್ಲಾ ಇದು ತಪ್ಪು ಮಾಹಿತಿ.

**ಶ್ರೀ ಎಸ್.ಆರ್.ಬೊಮ್ಮಾಯಿ:** ನಾನು ವಿಧಾನ ಪರಿಷತ್ತಿನ ಸದಸ್ಯನಾಗಿದ್ದಾಗ ಪ್ರಶ್ನೆಯನ್ನು ಕೇಳಿದ್ದೇನೆ. ಮುನ್ಸೀಫ್ ಇದ್ದಾಗ ಆದಂಥ ತೀರ್ಮಾನವನ್ನು ಹೇಳಿ, ರಿಕಾರ್ಡ್ ಇಲ್ಲದೇ ಇದ್ದರೆ ನಾಳೆ ನಾಡಿದ್ದು ಹೇಳಿ. ತಪ್ಪಾಗಿದ್ದರೆ ನಾನು ಕರೆಕ್ಷನ್

ಮಾಡಿಕೊಳ್ಳುತ್ತೇನೆ. 90 ಪರ್ಸೆಂಟ್ ಡಿಸ್‌ಮಿಸ್ ಆಗಿದೆ. ಇದಕ್ಕೆ ನಾನು ಸಲಹೆ ಕೊಡುತ್ತೇನೆ. ಏನೆಂದರೆ, ಟ್ರಿಬ್ಯೂನಲ್ಸ್ ಮಾಡುವ ಬಗ್ಗೆ ಸರ್ಕಾರ ಕೊಟ್ಟಂಥ ಆಶ್ವಾಸನೆ ಏನಿದೆ ಅದರಂತೆ ಕೂಡಲೇ ಟ್ರಿಬ್ಯೂನಲ್‌ಗಳನ್ನು ಮಾಡಬೇಕು. ಕಳೆದ 2 ತಿಂಗಳುಗಳಿಂದ ಟ್ರಿಬ್ಯೂನಲ್ಸ್ ಇಲ್ಲದೆ ಅನೇಕ ಜನರಿಗೆ ತೊಂದರೆಯಾಗುತ್ತಾ ಇದೆ. ಯಾವುದೇ ಒಬ್ಬ ಟೆನೆಂಟ್ ಸಿವಿಲ್ ಕೋರ್ಟಿಗೆ ಹೋಗುವುದಕ್ಕಾಗುವುದಿಲ್ಲ. ಅನೇಕ ಕಡೆ ಜಮೀನಿನ ಬಗ್ಗೆ ಹೊಡೆದಾಟಗಳಾಗಿವೆ, ಇಂತಹ ಸಂದರ್ಭಗಳಲ್ಲಿ ಅವರು ಎಲ್ಲಿಗೆ ಹೋಗಬೇಕು. ಟ್ರಿಬ್ಯೂನಲ್ಸ್‌ಗೆ ಹೋಗಿ ಇನ್‌ಜಂಕ್ಷನ್ ತೆಗೆದುಕೊಳ್ಳತಕ್ಕ ಅವಕಾಶವಿಲ್ಲ. ಆದುದರಿಂದ ಟ್ರಿಬ್ಯೂನಲ್‌ಗಳನ್ನು ಕೂಡಲೆ ಮಾಡಬೇಕು ಎಂದು ನಾನು ಒತ್ತಾಯ ಮಾಡುತ್ತೇನೆ. ಕೊಟ್ಟ ಮಾತಿನಂತೆ ಪ್ರತಿಪಕ್ಷದ ಸದಸ್ಯರನ್ನು ಟ್ರಿಬ್ಯೂನಲ್‌ನಲ್ಲಿ ಹಾಕಬೇಕು. ಇದರ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ಮತ್ತು ರೆವಿನ್ಯೂ ಮಂತ್ರಿಗಳು ಮಾತು ಕೊಟ್ಟಿದ್ದಾರೆ. ಪ್ರತಿಪಕ್ಷದ ಒಬ್ಬ ಸದಸ್ಯರನ್ನು ಟ್ರಿಬ್ಯೂನಲ್ಸ್‌ನಲ್ಲಿ ಹಾಕುವುದಕ್ಕೆ ಒಪ್ಪಿಕೊಂಡಿದ್ದಾರೆ. ಅದನ್ನು ಆದಷ್ಟು ಬೇಗ ಮಾಡಬೇಕೆಂದು ನಾನು ಈ ಸಂದರ್ಭದಲ್ಲಿ ಒತ್ತಾಯ ಮಾಡುತ್ತೇನೆ.

ಇನ್ನು ಬ್ಯಾಕ್‌ವರ್ಡ್ ಕ್ಯಾಸ್ಟ್, ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಹಿಂದುಳಿದ ವರ್ಗಗಳ ಬಗ್ಗೆ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿರುವ ಬಗ್ಗೆ ಬಜೆಟ್‌ನಲ್ಲಿ ಉಲ್ಲೇಖವಿದೆ. ಜನತಾ ಮನೆಗಳ ಬಗ್ಗೆ ಸೈಟುಗಳನ್ನು ಹಂಚತಕ್ಕ ಬಗ್ಗೆ ಮತ್ತು ಸ್ಕಾಲರ್‌ಶಿಪ್ ಕೊಡತಕ್ಕ ಬಗ್ಗೆ ವಿಚಾರಗಳನ್ನು ಹೇಳಿದ್ದಾರೆ. ಜನತಾ ಮನೆಗಳ ಯೋಜನೆ ಒಂದು ಒಳ್ಳೆಯ ಕಾರ್ಯ ಈ ಮನೆಗಳನ್ನು ಕಟ್ಟತಕ್ಕ ವಿಧಾನ, ಕಟ್ಟತಕ್ಕ ರೀತಿ ಮತ್ತು ಕಟ್ಟಡದ ವ್ಯವಸ್ಥೆಯನ್ನು ನೋಡಿದಾಗ ಮಾತ್ರ ಮನಸ್ಸಿಗೆ ಬಹಳ ವೇದನೆಯಾಗುತ್ತದೆ. ಅನೇಕ ಕಡೆ ಮನೆಗಳನ್ನು ಕಟ್ಟಲು ಕಾಂಟ್ರಾಕ್ಟರ್‌ಗೆ ಕೊಟ್ಟಿದ್ದಾರೆ. ಕಾಂಟ್ರಾಕ್ಟ್‌ದಾರರು ಇವರು ಕೊಡತಕ್ಕ 2000 ರೂಪಾಯಿ ಹಣದಲ್ಲಿ ತನಗೆ ಉಳಿಸಿಕೊಂಡು, ಅಧಿಕಾರಿಗಳಿಗೆ ಕೊಟ್ಟು ಇನ್ನೆಂತಹ ಮನೆಗಳನ್ನು ಕಟ್ಟಬಹುದು. ಇವತ್ತು ಅನೇಕ ಕಡೆ ಮನೆಗಳು ಬೀಳುತ್ತಾ ಇವೆ, ವಾಸಕ್ಕೆ ಸರಿಯಾದ ವ್ಯವಸ್ಥೆಯಿಲ್ಲ. ಕನಿಷ್ಠಪಕ್ಷ 10 ವರ್ಷಗಳಾದರೂ ವಾಸಕ್ಕೆ ಅನುಕೂಲವಾಗುವ ರೀತಿ ಮನೆಗಳನ್ನು ಕಟ್ಟಬೇಕು ಎಂದು ನಾನು ಅನೇಕ ಸಲ ಹೇಳಿದ್ದೇನೆ. ಈ ಬಗ್ಗೆ ನಾನು ಹೆಚ್ಚು ಹೇಳುವುದಕ್ಕೆ ಇಷ್ಟಪಡುವುದಿಲ್ಲ. ಕಳೆದ 6 ವರ್ಷಗಳಲ್ಲಿ ಹರಿಜನರ ಮತ್ತು ಹಿಂದುಳಿದವರ ಆರ್ಥಿಕಮಟ್ಟ ಏನಾದರೂ ಸುಧಾರಣೆಯಾಗಿದೆಯೇ ಎಂದು ನಾನು ಕೇಳುತ್ತಾ ಇದ್ದೇನೆ.

ಕಳೆದ 6 ವರ್ಷಗಳಲ್ಲಿ ಈ ಜನರ ನಿರುದ್ಯೋಗ ಸಮಸ್ಯೆ ಬಿಡುಗಡೆ ಆಗಿದೆಯೇ? ಇವತ್ತು ಹಳ್ಳಿಗಳಿಗೆ ಹೋಗಿ ನೋಡಿದರೆ, ಪಟ್ಟಣಗಳಲ್ಲಿ ನೋಡಿದರೆ

ಆ ಜನರು ಇನ್ನೂ ಬಡವರು ಆಗುತ್ತಾ ಹೋಗುತ್ತಿದ್ದಾರೆ ಶ್ರೀಮಂತರು ಇನ್ನೂ ಶ್ರೀಮಂತರಾಗುತ್ತಾ ಹೋಗುತ್ತಿದ್ದಾರೆ. ಪರಿಸ್ಥಿತಿಯನ್ನು ಕೆಲವರು ಮಾತ್ರ ಜಮೀನುಗಳನ್ನು ಇಟ್ಟುಕೊಂಡು ವ್ಯವಹಾರಗಳನ್ನು ಮಾಡುತ್ತಾ. ಬಡ್ಡಿ ವ್ಯವಹಾರಗಳನ್ನು ಮಾಡುತ್ತಾ ಇವರು ಇನ್ನೂ ಶ್ರೀಮಂತರಾಗುತ್ತಿದ್ದಾರೆ. ರಾಜಕೀಯ ಪಟ್ಟಭದ್ರ ಹಿತಾಸಕ್ತಿಗಳೆಂದು ಏನು ಹೇಳುತ್ತೀರಿ ಅವರು ಸರ್ಕಾರದಿಂದ ಬರತಕ್ಕ ಎಲ್ಲಾ ಸೌಕರ್ಯಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಪಡೆದುಕೊಳ್ಳುತ್ತಿದ್ದಾರೆ, ಅದು ಬಡವರಿಗೆ ಸಿಗದ ಹಾಗೆ ತಾವೇ ಎಲ್ಲಾ ಸೌಕರ್ಯವನ್ನು ಪಡೆದುಕೊಳ್ಳುತ್ತಿದ್ದಾರೆ. ಸರ್ಕಾರದವರು ಯಾವುದೇ ಒಂದು ಯೋಜನೆ ಹಾಕಿದರೆ ಅದು ಸಾಮಾನ್ಯ ಜನತೆಗೆ ತಲುಪುವುದಿಲ್ಲ. ಈ ಪಟ್ಟಭದ್ರ ಹಿತಾಸಕ್ತಿಗಳೇನಿದ್ದಾರೆ ಅವರು ನಮ್ಮ ಪಕ್ಷದಲ್ಲಿಯೂ ಇದ್ದಾರೆ ನಿಮ್ಮ ಪಕ್ಷದಲ್ಲಿಯೂ ಇದ್ದಾರೆ, ಇದನ್ನು ರಾಜಕೀಯ ದೃಷ್ಟಿಯಿಂದ ಹೇಳುತ್ತಿಲ್ಲ. ಅವರೇ ಎಲ್ಲಾ ಸೌಕರ್ಯವನ್ನು ಪಡೆದುಕೊಳ್ಳುತ್ತಿದ್ದಾರೆ. ಆದುದರಿಂದ ಅದು ಆಗದ ಹಾಗೆ ವ್ಯವಸ್ಥೆಯನ್ನು ಮಾಡಬೇಕಾಗಿದೆಂದು ಒತ್ತಾಯ ಪೂರ್ವಕವಾಗಿ ಹೇಳುತ್ತೇನೆ.

*****

# ನೀರಾವರಿ ಯೋಜನೆಯ ಮೇಲಿನ ಚರ್ಚೆ

ದಿನಾಂಕ: 27–7–1978

**ನೀರಾವರಿ ಮತ್ತು ವಿದ್ಯುತ್ ಯೋಜನೆ ಅನುಷ್ಠಾನದಲ್ಲಿ ಪಕ್ಷಪಾತ ಧೋರಣೆ ಅನುಸರಿಸಿದರೆ ನಾಡಿನ ಪ್ರಗತಿ ಅಸಾಧ್ಯ ಎಂದು ಪ್ರತಿಪಾದಿಸುವ ಬೊಮ್ಮಾಯಿ ಅವರು ಸಮರ್ಥವಾಗಿ ಕಾರ್ಯ ನಿರ್ವಹಿಸುವ ಅಧಿಕಾರಿಗಳನ್ನು ಪ್ರೋತ್ಸಾಹಿಸಬೇಕೆಂದು ಹೇಳುತ್ತಾರೆ. ಸರ್ಕಾರ ನೀರಾವರಿ ಮತ್ತು ವಿದ್ಯುತ್ ಯೋಜನೆಯನ್ನು ಸಮರ್ಥವಾಗಿ ಮತ್ತು ಸಮಯೋಚಿತವಾಗಿ ನಿರ್ವಹಿಸಲು ಇಲ್ಲಿ ಕೆಲವು ಸಲಹೆಗಳನ್ನು ನೀಡಿದ್ದಾರೆ.**

**ಶ್ರೀ ಎಸ್.ಆರ್. ಬೊಮ್ಮಾಯಿ (ಹುಬ್ಬಳ್ಳಿ ಗ್ರಾಮಾಂತರ):** ಮಾನ್ಯ ಅಧ್ಯಕ್ಷರೇ, ಮಾನ್ಯ ಮುಖ್ಯಮಂತ್ರಿಗಳು ಡಿಮ್ಯಾಂಡ್‌ಗಳನ್ನು ಮೂವ್ ಮಾಡುವಾಗ ಮಾನ್ಯ ಜೆ.ಹೆಚ್. ಪಟೇಲ್ ಒಟ್ಟು ಹಣ ಎಷ್ಟು ಎಂದು ಕೇಳಿದರು. ನಾನು ಲೆಕ್ಕ ತೆಗೆದಿದ್ದೇನೆ. ಅದರ ಪ್ರಕಾರ 370.21 ಲಕ್ಷ ರೂಪಾಯಿಗಳ ಡಿಮ್ಯಾಂಡ್ಸ್ ಆಗುತ್ತದೆ. ಮಾನ್ಯ ಮುಖ್ಯಮಂತ್ರಿಗಳು ವಹಿಸಿಕೊಂಡಂಥ ಖಾತೆ ಹಣ ಎಂಟೈರ್ ಬಜೆಟ್‌ನ ಶೇಕಡ 46ರಷ್ಟು ಆಗುತ್ತದೆ. ಪ್ರಥಮದಲ್ಲಿ ಹೇಳುವುದಾದರೆ ಪುನಾ ಎರಡನೆಯ ಬಾರಿಗೆ ಮಾನ್ಯ ಮುಖ್ಯಮಂತ್ರಿಗಳು ಚುನಾಯಿತರಾಗಿ ಮುಖ್ಯಮಂತ್ರಿ ಪದವಿಯನ್ನು ಅಲಂಕರಿಸಿದಾಗ ನನಗೆ ಒಂದು ಆಸೆ ಮೂಡಿತ್ತು. ಕಳೆದ 6 ವರ್ಷಗಳಲ್ಲಿ ನಾವು ಈ ಮನೆಯಲ್ಲಿ ಮತ್ತು ಮೇಲ್ಮನೆಯಲ್ಲಿ ಅನೇಕ ಆಪಾದನೆಗಳನ್ನು ಅವರ ಸರ್ಕಾರದ ಮೇಲೆ ಮತ್ತು ಅವರ ಮೇಲೆ ಮಾಡಿದ್ದೇವೆ. ಈ ಬಗ್ಗೆ ಕೇಂದ್ರ ಸರ್ಕಾರಕ್ಕೂ ದೂರು ಹೋಗಿ, ಈಗ ಎನ್‌ಕ್ವೇರಿ ನಡೆಯುತ್ತಿದೆ. ಇದು ಹಿಂದಿನ ಕಥೆಯಾಯಿತು. ಎನ್‌ಕ್ವೇರಿ ಇನ್ನೂ ನಡೆಯುತ್ತಾ ಇದೆ. ಆದರೆ ನಾನು ಒಂದು ಆಸೆಯನ್ನು ಇಟ್ಟುಕೊಂಡಿದ್ದೆ. ಏನೆಂದರೆ, ಎರಡನೇಯ ಸಲ ಕರ್ನಾಟಕದ ಜನತೆ ಇದೇ ಮುಖ್ಯಮಂತ್ರಿಗಳಿಗೆ ಅಧಿಕಾರವನ್ನು ಕೊಟ್ಟ ಅವರು ಈ ರಾಜ್ಯದ ಆಡಳಿತದಲ್ಲಿ ಒಂದು ಹೊಸ ಚೈತನ್ಯ ಒಂದು ಹೊಸ ರೂಪ ಮತ್ತು ಒಂದು ಹೊಸ ಕಳೆಯನ್ನು ಕೊಡುತ್ತಾರೆ ಎಂದು ನಾನು ಆಸೆ ಇಟ್ಟುಕೊಂಡಿದ್ದೆ. ಈ ಬಗ್ಗೆ ವಿವರವಾಗಿ ಮುಂದಿನ ಹಂತದಲ್ಲಿ ಹೇಳುತ್ತೇನೆ. ಈಗ ಮೊಟ್ಟ ಮೊದಲನೆಯದಾಗಿ, ತೆಗೆದುಕೊಳ್ಳತಕ್ಕ ವಿಚಾರ ಅಂದರೆ ಮಾನ್ಯ ಮುಖ್ಯಮಂತ್ರಿಗಳಿಗೆ ಸಂಬಂಧಪಟ್ಟಂಥ ಮೇಜರ್ ಇರಿಗೇಷನ್ ಪ್ರಾಜೆಕ್ಟ್ಸ್ ಮತ್ತು ಮೈನರ್ ಇರಿಗೇಷನ್ ಪ್ರಾಜೆಕ್ಟ್ಸ್. ನಾನು ಅಂಕಿ ಸಂಖ್ಯೆಗಳನ್ನು ಅಭ್ಯಾಸ ಮಾಡಿದ್ದೇನೆ. ಅದರ ಪ್ರಕಾರ ಹೇಳುವುದಾದರೆ. ಘಟಪ್ರಭಾ ಮೂರನೇ ಹಂತಕ್ಕೆ ರೂ. 85.67 ಕೋಟಿಗಳನ್ನು ಅಂದಾಜು ಮಾಡಲಾಗಿದೆ.

ಪ್ರಸಕ್ತ ವರ್ಷದ ನಿರೀಕ್ಷಣಾ ವೆಚ್ಚ 50.07 ಕೋಟಿ ರೂ.ಗಳಾಗಿದೆ. ಇನ್ನು 80.59 ಕೋಟಿ ರೂ. ಹಣ ಅಗತ್ಯವಿದೆ. ಈ ಯೋಜನೆಯ ಒಟ್ಟು ವೆಚ್ಚ 520 ಕೋಟಿ ರೂ.ಗಳಿದ್ದು ಇದರಿಂದ 1.78 ಲಕ್ಷ ಹೆಕ್ಟೇರ್ ಪ್ರದೇಶವನ್ನು ನೀರಾವರಿಯಾಗಿ ಮಾರ್ಪಡಿಸುವ ಗುರಿ ಹೊಂದಲಾಗಿದೆ. ಪ್ರತಿ ವರ್ಷ ಈ ಯೋಜನೆಗೆ 5 ಕೋಟಿ ರೂ. ವೆಚ್ಚ ಮಾಡಿದರೆ 15 ವರ್ಷಗಳಲ್ಲಿ ಈ ಯೋಜನೆ ಮುಗಿಯುತ್ತದೆ.

ಮಲಪ್ರಭಾ ಯೋಜನೆಗೆ ರೂ. 156.8 ಕೋಟಿಗಳನ್ನು ಅಂದಾಜು ಮಾಡಲಾಗಿದೆ. ಪ್ರಸಕ್ತ ವರ್ಷದ ನಿರೀಕ್ಷಣಾ ವೆಚ್ಚ 75.65 ಕೋಟಿ ರೂ.ಗಳಾಗಿದೆ. ಈ ಯೋಜನೆ ಪೂರ್ಣಗೊಳ್ಳಲು ಇನ್ನು 76.06 ಕೋಟಿ ರೂ. ಹಣ ಅಗತ್ಯವಿದೆ. 2650 ಹೆಕ್ಟೇರ್ ಪ್ರದೇಶವನ್ನು ನೀರಾವರಿಯಾಗಿ ಮಾರ್ಪಡಿಸುವ ಗುರಿ ಹೊಂದಲಾಗಿದೆ. ಬೇರೆ ಯೋಜನೆಗಳಿಗೆ ನಿಗದಿಗೊಳಿಸಿರುವ ಬಜೆಟ್ ಮೊತ್ತಕ್ಕೆ ತಾಳೆ ಹಾಕುವ ಸಲುವಾಗಿ ನಾನು ಇಲ್ಲಿ ಈ ಅಂಕಿ ಅಂಶಗಳನ್ನು ಹೇಳುತ್ತಿದ್ದೇನೆ. ಇಲ್ಲಿ ನಾವು ಕೇವಲ ಶೇ. 50ರಷ್ಟನ್ನು ಮಾತ್ರ ಸಾಧಿಸಿದ್ದೇವೆ.

ಕೃಷ್ಣಾ ಮೇಲ್ದಂಡೆ ಒಂದನೇ ಹಂತಕ್ಕೆ ರೂ. 266.11 ಕೋಟಿಗಳನ್ನು ಅಂದಾಜು ಮಾಡಲಾಗಿದೆ. ಪ್ರಸಕ್ತ ವರ್ಷದ ನಿರೀಕ್ಷಣಾ ವೆಚ್ಚ 44.68 ಕೋಟಿ ರೂ.ಗಳಾಗಿದೆ. ಇನ್ನು 221.42 ಕೋಟಿ ರೂ. ಹಣ ಅಗತ್ಯವಿದೆ. ಪ್ರಸಕ್ತ ವರ್ಷ ಈ ಯೋಜನೆಗೆ 27 ಕೋಟಿ ರೂ.ಗಳನ್ನು ಖರ್ಚು ಮಾಡಲಾಗುವುದು. ಈ ಯೋಜನೆಯ ಒಟ್ಟು ವೆಚ್ಚ 4.80 ಕೋಟಿ ರೂ. ಇದರಿಂದ 1510 ಹೆಕ್ಟೇರ್ ಪ್ರದೇಶವನ್ನು ನೀರಾವರಿಯಾಗಿ ಮಾರ್ಪಡಿಸುವ ಗುರಿ ಹೊಂದಲಾಗಿದೆ.

ಹೇಮಾವತಿ ಯೋಜನೆಗೆ ರೂ. 128 ಕೋಟಿ ರೂ.ಗಳನ್ನು ಅಂದಾಜು ಮಾಡಲಾಗಿದೆ. ಇದರ ನಿರೀಕ್ಷಣಾ ವೆಚ್ಚ 18.36 ಕೋಟಿ ರೂ.ಗಳು. ಅಗತ್ಯವಿರುವ ಮೊತ್ತ 79.53 ಕೋಟಿ ರೂ.ಗಳು. ಪ್ರಸಕ್ತ ವರ್ಷ 10 ಕೋಟಿ ರೂ.ಗಳನ್ನು ವೆಚ್ಚ ಮಾಡಿ 4000 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಕಲ್ಪಿಸಬಹುದಾಗಿದೆ. ಹಾರಂಗಿಯಿಂದ 6,078 ಹೆಕ್ಟೇರ್ ಮತ್ತು ಕಬಿನಿಯಿಂದ 8060 ಹೆಕ್ಟೇರ್ ಪ್ರದೇಶವನ್ನು ನೀರಾವರಿಯನ್ನಾಗಿಸುವ ಗುರಿ ಹೊಂದಲಾಗಿದೆ. ಈಗ ಇವುಗಳಿಗೆ ನೀಡಿರುವ ಹಣ ಸಹ ಸಣ್ಣ ಮೊತ್ತವಾಗಿದ್ದು ಇವು ಪೂರ್ಣಗೊಳ್ಳಲು ಇನ್ನೂ 12 ವರ್ಷಗಳಾಗಬೇಕು. ಕೃಷ್ಣಾ ಯೋಜನೆ ವಿಷಯದಲ್ಲಿ ಹೇಳುವುದಾದರೆ ಈ ಯೋಜನೆ ಪೂರ್ಣಗೊಳ್ಳಲು ಎಷ್ಟು ವರ್ಷಗಳಾಗಬೇಕು ತಿಳಿಯದಾಗಿದೆ. ನನ್ನ ಅನುಭವದಲ್ಲಿ ಹೇಳುವುದಾದರೆ ಕಳೆದ 45 ವರ್ಷಗಳಿಂದ ಈ ಯೋಜನೆಗಳಿಗೆ

2 ರಿಂದ 3 ಕೋಟಿ ರೂ.ಗಳನ್ನು ವೆಚ್ಚ ಮಾಡಲಾಗುತ್ತದೆ. ಇದು ಆಡಳಿತ ನಿರ್ವಹಣೆಗೆ ವೆಚ್ಚವಾಗಿ ಯೋಜನೆ ಪ್ರಗತಿ ಕುಂಠಿತವಾಗುತ್ತಿದೆ. ಅಲ್ಲಿ ಯಾವುದೇ ರೀತಿಯ ಕೆಲಸ ನಡೆಯುತ್ತಾ ಇಲ್ಲ. ನಾವು ಮೇಜರ್ ಇರಿಗೇಷನ್ ಪ್ರಾಜೆಕ್ಟ್ಸ್ ಅನ್ನು ನೋಡಿದಾಗ ಒಂದು ವಿಚಾರ ಸ್ಪಷ್ಟವಾಗಿ ಕಂಡು ಬರುತ್ತದೆ. ಮಲಪ್ರಭಾ ಮತ್ತು ಘಟಪ್ರಭಾ ಯಾವ ರೀತಿಯಾಗಿ ಕಾರ್ಯಗತವಾಗಿದೆ ಎನ್ನುವ ಬಗ್ಗೆ ಉದಾಹರಣೆ ಕೊಡುತ್ತೇನೆ. ಮಲಪ್ರಭಾ ಡ್ಯಾಂ ಇನ್ನು ಕಾಳಿ ಯೋಜನೆಯ ಬಗ್ಗೆ ಹೇಳುವುದಾದರೆ 1972ರಲ್ಲಿ ಮಾನ್ಯ ಮುಖ್ಯಮಂತ್ರಿಗಳು ಮಾಡಿದ ಭಾಷಣವನ್ನು ಮತ್ತು ಆಗಿನ ಅರ್ಥಮಂತ್ರಿಗಳು ಮಾಡಿದಂತಹ ಭಾಷಣಗಳನ್ನು ನಾವು ನೋಡಿದಾಗ ಕೇಂದ್ರ ಸರ್ಕಾರದಿಂದ ಸಂಪೂರ್ಣವಾಗಿ ಸಹಾಯ ಬರುತ್ತದೆ ಎನ್ನುವ ಮಾತನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಅದನ್ನು ನಾನು ಪುನಃ ಓದುವುದಕ್ಕೆ ಹೋಗುವುದಿಲ್ಲ. ಎಲ್ಲಾ ಆರ್ಥಿಕ ನೆರವುಗಳು ಭಾರತ ಸರ್ಕಾರದಿಂದಲೇ ಬರಬೇಕು ಎನ್ನುವ ಮಾತನ್ನು ಅಂದಿನ ಅರ್ಥಮಂತ್ರಿಗಳಾಗಿದ್ದ ಶ್ರೀಮಾನ್ ಘೋರ್ಪಡೆಯವರು ತಮ್ಮ ಬಡ್ಜೆಟ್ ಭಾಷಣದಲ್ಲಿ ಹೇಳಿದ್ದಾರೆ. ಆಮೇಲೆ ಆ ಬಗ್ಗೆ ಇದುವರೆಗೆ ಆದಂತಹ ಪ್ರಗತಿಯನ್ನು ನೋಡುವುದಾದರೆ ಬಹಳ ನಿರಾಶೆಯಾಗುತ್ತದೆ. ಯೋಜನೆ ಪ್ರಕಾರ ಎಂದು ಸಂಪೂರ್ಣವಾಗಿ ಮುಗಿದು ವಿದ್ಯುಚ್ಛಕ್ತಿ ಬರಬೇಕಾಗಿತ್ತೋ ಆ ಪ್ರಕಾರ ಅದು ನಡೆಯುತ್ತಿಲ್ಲ. ಇದಕ್ಕೆ ಅನೇಕ ಕಾರಣಗಳು ಉಂಟು. ಇವತ್ತು ಕೇಂದ್ರ ಸರ್ಕಾರದ ಸಹಾಯ ಯಾವ ರೀತಿ ಬರಬೇಕೆಂದು ನಿಗದಿಯಾಗಿತ್ತೋ ಆ ಬಗ್ಗೆ ವಿಮರ್ಶೆ ಮಾಡುವುದಕ್ಕೆ ಹೋಗುವುದಿಲ್ಲ. ಮತ್ತೆ ಈ ಯೋಜನೆಗೆ ವಿಶ್ವ ಬ್ಯಾಂಕಿನಿಂದ ಸಾಲ ತೆಗೆದುಕೊಳ್ಳುವುದಕ್ಕೆ ವ್ಯವಹಾರ ಮಾಡಿದ್ದರೂ ಕಾಲದ ವ್ಯಯ ಆಯಿತು. ಅದನ್ನು ತ್ವರಿತಗತಿಯಿಂದ ಆಚರಣೆಗೆ ತರುವುದಕ್ಕಾಗುವುದಿಲ್ಲ ಎನ್ನುವ ಮಾತನ್ನು ಹೇಳುತ್ತೇನೆ. ಮುಖ್ಯವಾಗಿ ಪಿ.ಡಬ್ಲ್ಯೂ.ಡಿ. ಪವರ್ ಕಾರ್ಪೊರೇಷನ್ ರೆವಿನ್ಯೂ ಯಾವುದೇ ಇರಲಿ ಅಲ್ಲಿ ಕೆಲಸಕಾರ್ಯಗಳು ಸರಿಯಾಗಿ ನಡೆದುಕೊಂಡು ಹೋಗಬೇಕಾದರೆ ನಿಮ್ಮ ಆಡಳಿತ ಯಂತ್ರ ಸರಿಯಾಗಿ ಇರಬೇಕು. ಇವತ್ತು ನೀವು ಕಷ್ಟಪಟ್ಟು ಹಣವನ್ನು ಶೇಖರಣೆ ಮಾಡಬಹುದು. ಈ ಹಣದ ಬಗ್ಗೆ ಹೇಳುವಾಗ ಒಂದು ಮಾತನ್ನು ಹೇಳಬೇಕಾಗುತ್ತದೆ. ಕಳೆದ 6 ವರ್ಷಗಳಲ್ಲಿ ನಮ್ಮ ರಾಜ್ಯದ ನಾಗರಿಕನ ಮೇಲೆ ಎಷ್ಟು ಹೆಚ್ಚಿನ ಕರಭಾರ ಎಂಬುದನ್ನು ನೋಡುವುದಾದರೆ 1977ನೇ ಇಸವಿಯವರೆಗೆ ಸುಮಾರು 226.7 ಕೋಟಿ ರೂಪಾಯಿಗಳನ್ನು ಟ್ಯಾಕ್ಸ್ ರೂಪದಲ್ಲಿ ಕರ್ನಾಟಕ ಪ್ರತಿಯೊಬ್ಬ ನಾಗರಿಕನು ಕೊಟ್ಟಿದ್ದಾನೆ. ತಾವು ಒಂದು ರೀತಿಯಿಂದ ರಿಸೋರ್ಸಸ್ ಹೆಚ್ಚು ಮಾಡುವುದಕ್ಕೆ ಎಂಬುದಾಗಿ ಹೇಳಬಹುದು. ಆದರೆ ಪ್ರತಿಯೊಬ್ಬ ಕನ್ನಡಿಗನ ಮೇಲೂ 75 ರೂಪಾಯಿಗಳು ಟ್ಯಾಕ್ಸ್ ಹೆಚ್ಚಾಗಿದೆ.

**ಶ್ರೀ ದೇವರಾಜ ಅರಸು:** ಈ ಯೋಜನೆಗಳಿಗೆ ಕೇಂದ್ರದಲ್ಲಿರುವ ಜನತಾ ಪಕ್ಷದ ಸರ್ಕಾರ ಒಪ್ಪಿಗೆ ನೀಡಿದೆ. ಅದಕ್ಕೆ ಅಭಿನಂದನೆ ಸಲ್ಲಿಸಲಾಗಿದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಕೇಂದ್ರ ಸರ್ಕಾರದವರು ಮೊಬಲೈಜೇಶನ್ ಮಾಡತಕ್ಕಂಥಾದ್ದು ಒಳ್ಳೆಯದೆಂದು ಹೇಳಿದ್ದಾರೆ. ಆದರೆ ಅದರ ಪ್ರತಿಫಲ ಜನರಿಗೆ ಸಿಕ್ಕಿದೆಯೇ? ನಾವು ಎಷ್ಟು ಹಣ ಕೊಟ್ಟಿದ್ದೇವೆ. ಅದರಿಂದ ಬರುವ ಪ್ರತಿಫಲ ಮುಖ್ಯ ಎಷ್ಟು ಟ್ಯಾಕ್ಸ್ ಹಾಕಿದ್ದೀರೆಂದು ಲೆಕ್ಕಾಚಾರ ಹಾಕಿ ನೋಡಿ. ಈ ರಾಜ್ಯದಲ್ಲಿ ಹಾಕಿರತಕ್ಕಂಥ ಹೆಚ್ಚು ಟ್ಯಾಕ್ಸ್ ಬೇರೆ ಯಾವುದೇ ರಾಜ್ಯದಲ್ಲಿ ಹಾಕಿಲ್ಲ, ಅಷ್ಟು ಹೆಚ್ಚಿನ ಕರಭಾರ ಹಾಕಿದ್ದೀರಿ. ಕನ್ನಡಿಗ ಅದನ್ನು ಕೊಟ್ಟಿದ್ದಾನೆ. ಆದರೆ ಅದರಿಂದ ಆತನಿಗೆ ಪ್ರತಿಫಲ ಸಿಕ್ಕಿದೆ? ದುಡ್ಡು ಕೊಟ್ಟಿದ್ದಾನೆ. ಕೊಟ್ಟಮೇಲೆ ಏನು ಪ್ರಗತಿಯಾಗಿದೆ? ಅದು ಮುಖ್ಯ ಇವತ್ತು 1972 ರಿಂದ 1977 ರವರೆಗೆ ಪರ್ ಕ್ಯಾಪಿಟಾ ಇನ್‌ಕಂ ಎಷ್ಟಾಗಿದೆ ಎಂಬುದನ್ನು ಹೇಳುವುದಾದರೆ ರೂಪಾಯಿ ಪರ್ ಕ್ಯಾಪಿಟಾ ಇನ್‌ಕಂ ಹೆಚ್ಚಾಗಿದೆ.

ಈ ಮಾತನ್ನು ಹೇಳುವಾಗ ಹಣವನ್ನು ಟ್ಯಾಕ್ಸ್ ರೂಪದಲ್ಲಿ ಕೊಟ್ಟಿದ್ದರೂ ರಾಜ್ಯದ ಪ್ರಗತಿ ಏಕೆ ಆಗಿಲ್ಲ. ಈ ಪ್ರಗತಿ ಇನ್ನೂ ಹೆಚ್ಚಿನ ಗತಿಯಲ್ಲಿ ಏಕೆ ಆಗಲಿಲ್ಲ?

ಇನ್ನೂ ಜನರಲ್ ಅಡ್ಮಿನಿಸ್ಟ್ರೇಷನ್ ಮತ್ತು ಪೋಲೀಸ್ ಇಲಾಖೆಯ ಬಗ್ಗೆ ಹೇಳುವುದಾದರೆ ಇವು ಎಲ್ಲ ಮುಖ್ಯಮಂತ್ರಿಗಳಿಗೆ ಸಂಬಂಧಪಟ್ಟ ಖಾತೆಗಳು. ಈ ರಾಷ್ಟ್ರದಲ್ಲಿ ಬ್ರಿಟೀಷರು ಹೋದ ಮೇಲೆ ಐ.ಎ.ಎಸ್., ಐ.ಪಿ.ಎಸ್. ಮತ್ತು ಐ.ಎಫ್.ಎಸ್. ಈ ಕೇಡರ್‌ಗಳನ್ನು ಈ ಒಂದು ರಾಷ್ಟ್ರಕ್ಕೆ ಉತ್ತಮವಾದ ಆಡಳಿತವನ್ನು ನಿಷ್ಠೆಯಿಂದ ಹಾಗೂ ದಕ್ಷತೆಯಿಂದ ಸರ್ಕಾರದ ಕಾರ್ಯಗಳನ್ನು ನಡೆಸಿಕೊಂಡು ಹೋದರೆ ರಾಷ್ಟ್ರಕ್ಕೂ ಒಳ್ಳೆಯದು, ಈ ರಾಜ್ಯಕ್ಕೂ ಒಳ್ಳೆಯದು, ಆದರೆ ಆ ರೀತಿ ಅವರು ನಿಷ್ಠೆಯಿಂದ ಕೆಲಸ ಮಾಡತಕ್ಕಂಥ ವಾತಾವರಣವನ್ನು ನಿರ್ಮಾಣ ಮಾಡತಕ್ಕಾಂಥದ್ದು ಸಾರ್ವಜನಿಕರ ಹಾಗೂ ಎಲ್ಲರ ಕರ್ತವ್ಯ. ಅದರಲ್ಲೂ ರಾಜಕಾರಣಿಗಳ ಆದ್ಯ ಕರ್ತವ್ಯ. ಮತ್ತಷ್ಟು ಹೆಚ್ಚಿನ ಕರ್ತವ್ಯ ಯಾರದು ಎಂದರೆ ಅಧಿಕಾರದಲ್ಲಿರತಕ್ಕಂಥಾವರದ್ದು ರಾಜಕೀಯ ನಾಯಕರೆನಿಸಿದ್ದಾರೆ. ಪ್ರಧಾನ ಮಂತ್ರಿಗಳೇ ಇರಲಿ ಮುಖ್ಯಮಂತ್ರಿಗಳೇ ಇರಲಿ, ಮಂತ್ರಿಗಳೇ ಇರಲಿ, ಅವರ ಜವಾಬ್ದಾರಿ ಹೆಚ್ಚಿನ ರೀತಿಯಲ್ಲಿದೆ. ಈವತ್ತು ಈ ರಾಜ್ಯದಲ್ಲಿ ಉತ್ತಮ ದರ್ಜೆಯ ಅಧಿಕಾರಿ ಹೆಚ್ಚು ನಿಷ್ಠೆಯಿಂದ ಕೆಲಸ ಮಾಡತಕ್ಕಂಥ ವಾತಾವರಣ ಇಲ್ಲ. ಮಂತ್ರಿಗಳು ಬರುತ್ತಾರೆ. ಹೋಗುತ್ತಾರೆ. ಮುಖ್ಯಮಂತ್ರಿಗಳು ಬರುತ್ತಾರೆ ಹೋಗುತ್ತಾರೆ ಆದರೆ ಈ ರಾಜ್ಯದ ಈ ರಾಷ್ಟ್ರದ ಆಡಳಿತವನ್ನು ನಡೆಸತಕ್ಕಂಥ ಅಧಿಕಾರವರ್ಗ ಏನಿದೆ. ಅಲ್ಲಿ ಒಳ್ಳೆಯ

ಮೇಲ್ಮಟ್ಟದ ಕಾರ್ಯವನ್ನು ಮಾಡತಕ್ಕಂಥಹ ವ್ಯವಸ್ಥೆ ಇರಬೇಕು. ಆ ಒಂದು ವ್ಯವಸ್ಥೆಯನ್ನು ಇಂದು ನಾವು ಕಾಣುತ್ತಿಲ್ಲ.

**ಶ್ರೀ ಡಿ. ದೇವರಾಜ ಅರಸ್;** ಈ ಪರ್ ಕ್ಯಾಪಿಟಾ ಇನ್‌ಕಂ ಬಗ್ಗೆ ವಿವರ ಕೊಡಬೇಕೆಂದರೆ 1972–73 ರಲ್ಲಿ 587 ರೂ.ಗಳಿದ್ದರೆ 1977–78 ರಲ್ಲಿ 820 ರೂ.ಗಳಾಗಿವೆ. ಅಂದರೆ ಕಳೆದ 5 ವರ್ಷಗಳಲ್ಲಿ 40 ಪರ್ಸೆಂಟಿನಷ್ಟು ಹೆಚ್ಚಾಗಿದೆ.

**ಶ್ರೀ ಜೆ.ಎಚ್. ಪಟೇಲ್:** ತಾವು ಅವರೇಜ್ ಇನ್‌ಕ್ರೀಜ್ ಹೇಳುತ್ತಿದ್ದೀರೊ. ರಿಯಲ್ ಇನ್‌ಕ್ರೀಜ್ ಏನಿದೆ ಎಂಬುದನ್ನು ಹೇಳುತ್ತಿಲ್ಲ.

**ಶ್ರೀ ಎಸ್.ಆರ್.ಬೊಮ್ಮಾಯಿ:** 1956–57 ರಲ್ಲಿ ಪ್ರೈಸಸ್ ಏನಿತ್ತು ಎಂಬ ಕಲಂ ಇಲ್ಲಿ ನನಗೆ  ಗೊತ್ತಿಲ್ಲ.

**ಶ್ರೀ ಡಿ. ದೇವರಾಜ ಅರಸ್:** ಅದರ ಒಂದು ಆಧಾರದ ಮೇಲೆ ಹೇಳಬೇಕೆಂದರೆ 1972–73ರಲ್ಲಿ ರೂಪಾಯಿ ಇದ್ದರೆ ಅದು 1977–78 ರಲ್ಲಿ 362 ರೂಪಾಯಿಗಳಾಗಿದೆ. ಅಂದರೆ 30 ರೂಪಾಯಿಗಳು ಜಾಸ್ತಿಯಾಯಿತು.

**ಶ್ರೀ ಎಸ್.ಆರ್. ಬೊಮ್ಮಾಯಿ:** 70 ರೂಪಾಯಿಗಳನ್ನು ಟ್ಯಾಕ್ಸ್ ಕೊಟ್ಟಿದ್ದೇವೆ ಎಂದು ನಾನು ಈ ಮೊದಲು ಹೇಳಿದ್ದು.

**ಶ್ರೀ ಜೆ.ಎಚ್. ಪಟೇಲ್:** ಈ ಮೊದಲು ಟಾಟಾ ಅವರ ಆಸ್ತಿ 57 ಕೋಟಿ ರೂಪಾಯಿಗಳಷ್ಟು ಇದ್ದರೆ ಅದು ಈಗ ರೂ. 1200 ಕೋಟಿಗಳಷ್ಟಾಗಿದೆ. ನನ್ನ ಆಸ್ತಿ ಆಗ ಬಹುಶಃ 50 ಸಾವಿರದಷ್ಟು ಇದ್ದರೆ ಈಗ ಅದು ರೂ. 2 ಲಕ್ಷದಷ್ಟು ಆಗಿರಬಹುದು.  ಈ ಎರಡನ್ನೂ ಸೇರಿಸಿ ತಾವು ಪರ್ ಕ್ಯಾಪಿಟ್ ಇನ್‌ಕಂ ಲೆಕ್ಕ ಹಾಕುತ್ತೀರಿ. ಸರ್ಕಾರಕ್ಕೆ  ಎಕ್ಸೈಜ್ ಕಂಟ್ರಾಕ್ಟರ್ ಕಡೆಯಿಂದಲೂ ಇನ್‌ಕಂ ಬರುತ್ತದೆ. ವ್ಯವಸಾಯ ಕೂಲಿಗಾರರ ಕಡೆಯಿಂದಲೂ ಆದಾಯ ಬರುತ್ತದೆ. ಈಗ ತಾವು ಇಲ್ಲದವರ ಹತ್ತಿರ ತೆಗೆದುಕೊಂಡು ಇರುವವರಿಗೆ ಕೊಟ್ಟು, ಒಂದು ಆಧಾರದ ಮೇಲೆ ಇದು ಅಂಕಿ ಅಂಶಗಳನ್ನು ಕೊಟ್ಟರೆ ಅದು ಮಿಸ್‌ಲೀಡ್ ಮಾಡಿದಂತೆ ಆಗುವುದಿಲ್ಲವೇ?

**ಶ್ರೀ ಡಿ. ದೇವರಾಜ್ ಅರಸ್:** ಕೇಂದ್ರ ಸರ್ಕಾರದವರು ಕೊಡುವುದು ಸಹ ಇದೇ ರೀತಿಯ ಲೆಕ್ಕ.

**ಶ್ರೀ ಎಸ್.ಆರ್.ಬೊಮ್ಮಾಯಿ:** ನಾನು ಆಡಳಿತ ಯಂತ್ರದ ಬಗ್ಗೆ ಹೇಳುತ್ತಿದ್ದೆ. ಈಗಿನ  ಆಡಳಿತ ಯಂತ್ರ ಕುಸಿದು ಬಿದ್ದಿದೆ. ಈ ಒಂದು ಅಭಿಪ್ರಾಯಕ್ಕೆ ನಾನು

ಬರಲು ಕಾರಣವೇನು ಎಂದು ಕೇಳಬಹುದು. ಇದಕ್ಕೆ ಒಂದೇ ಒಂದು ಉದಾಹರಣೆ ಕೊಡುತ್ತೇನೆ. ಕಳೆದ 6 ತಿಂಗಳ ನಿಮ್ಮ ಆಡಳಿತವನ್ನು ನೋಡಿದಾಗ ನಮಗೆ ನಿರಾಶೆಯಾಗಿದೆ.

**ಶ್ರೀ ಡಿ. ದೇವರಾಜ ಅರಸ್:** ನಾವು ಅಧಿಕಾರದಲ್ಲಿರುವವರೆಗೂ ನಿಮಗೆ ನಿರಾಶೆಯಾಗಬಹುದು.

**ಶ್ರೀ ಎಸ್.ಆರ್. ಬೊಮ್ಮಾಯಿ:** ನಾನು ಆ ರೀತಿ ತಿಳಿದುಕೊಳ್ಳುವುದಿಲ್ಲ. ಜನತೆ ತಮಗೆ ಅಧಿಕಾರ ಕೊಟ್ಟಿದೆ. ಇಲ್ಲವೆಂದು ನಾನು ಹೇಳುವುದಿಲ್ಲ. ಎರಡನೇ ಸಲ ನಿಮಗೆ ಅಧಿಕಾರ ಸಿಕ್ಕಿದ ಮೇಲೆ ನಾನು ಬಹಳ ಆಸೆ ಮಾಡಿದ್ದೆ. ಇನ್ನು ನಾನು ರಾಜಕೀಯ ದೃಷ್ಟಿಯಿಂದ ಹೇಳುತ್ತಿಲ್ಲ. ಪುನಃ ಮುಖ್ಯಮಂತ್ರಿಗಳಾದ ಮೇಲೆ ಈ ರಾಜ್ಯದಲ್ಲಿ ಒಂದು ಒಳ್ಳೆಯ ಆಡಳಿತವನ್ನು ಕಟ್ಟತಕ್ಕಂಥ ವ್ಯವಸ್ಥೆ ಮಾಡಬೇಕೆಂದು ಹೇಳುತ್ತಿದ್ದೇನೆ. ಈ ಮಾತನ್ನು ಟೀಕೆ ಮಾಡಬೇಕೆಂದು ನಾನು ಹೇಳುತ್ತಿಲ್ಲ ಅಂತಹ ಒಂದು ಅವಕಾಶ ಜೀವನದಲ್ಲಿ ಎಲ್ಲರಿಗೂ ಸಿಗುವುದಿಲ್ಲ. ಈ ರೀತಿ ಸಿಕ್ಕಿದ ಸುವರ್ಣಾವಕಾಶವನ್ನು ಉಪಯೋಗಿಸಿಕೊಂಡು ಕರ್ನಾಟಕದ ಜನತೆಗೆ ಒಳ್ಳೆಯ ನಿಚ್ಚಳವಾದ ಹಾಗೂ ಸ್ವಚ್ಛವಾದ ಆಡಳಿತವನ್ನು ಕೊಡುತ್ತೀರಾ ಎನ್ನತಕ್ಕಂಥ ಆಶೆ ನನಗೆ ಮೂಡಿತ್ತು. ಆದರೆ ಇಂದು ನನಗೆ ನಿರಾಶೆಯಾಗಿದೆ. ನಮ್ಮ ರಾಜ್ಯದಲ್ಲಿ ಗೌರ್ನರ್ ರೂಲ್ ಬಂದಾಗ ಎಲ್ಲ ಕಮಿಟಿಗಳ ಅಧ್ಯಕ್ಷರನ್ನು ತೆಗೆದುಹಾಕಿದರು. ಮಂತ್ರಿ ಮಂಡಲವನ್ನು ತೆಗೆದು ಹಾಕಿದರು. ಅಧಿಕಾರಿಗಳನ್ನು ವರ್ಗ ಮಾಡಿದರು. ಅದು ಸರಿಯೋ ತಪ್ಪೋ ಎಂದು ನಾನು ಹೇಳುತ್ತಿಲ್ಲ. ಆದರೆ ನೀವು ಪುನಃ ನೇಮಕ ಮಾಡುವ ಸಂದರ್ಭ ಬಂದಾಗ ಹಿಂದೆ ಆಗಿದ್ದನ್ನ ನೆನಸಿಕೊಂಡು ಮುಂದೆಯಾದರು ಒಳ್ಳೆಯ ರೀತಿಯಿಂದ ಕಾರ್ಯಮಾಡಬೇಕಾಗಿತ್ತು. ಆದರೆ ಆ ರೀತಿ ಮಾಡಲಿಲ್ಲ. ಇದಕ್ಕೆ ಒಂದು ಸ್ಪಷ್ಟವಾದ ಉದಾಹರಣೆ ಕೊಡುತ್ತೇನೆ. ಮೈಸೂರು ಪವರ್ ಕಾರ್ಪೊರೇಷನ್‌ನಲ್ಲಿ ಸಿವಿಲ್ ಬೋರ್ಡು ಎಂದು ಇದೆ. ಅದು ಸಿವಿಲ್ ಬೋರ್ಡು ಆಗಿದೆ. ಪ್ರೆಸಿಡೆಂಟ್ ರೂಲ್ ಇದ್ದಾಗ ಅಲ್ಲಿಂದ ಯಾರನ್ನು ತೆಗೆಯಲಾಗಿತ್ತೋ ಅಂತಹವರನ್ನೇ ಪುನಃ ಅಲ್ಲಿಗೆ ಹಾಕಿದ್ದೀರಿ. ಶ್ರೀ ಕೆ.ರಾಮರಾವ್ ಎಂಬುವರನ್ನು ಅಲ್ಲಿಗೆ ಹಾಕಿದ್ದೀರಿ. ಅವರ ಜೊತೆಗೆ ಇನ್ನೊಬ್ಬ ರಾವ್ ಎನ್ನುವರನ್ನು ಸಹ ಹಾಕಿದ್ದೀರಿ. ಈ ಕೆ.ರಾಮರಾವ್ ಎನ್ನುವವರ ಇತಿಹಾಸವಾದರು ಏನು ತುರ್ತುಪರಿಸ್ಥಿತಿ ಜಾರಿಯಲ್ಲಿದ್ದಾಗ ಅವರ ಮನೆ ಮೇಲೆ ರೈಡ್ ಆಯಿತು. ಇದು ಸಾರ್ವಜನಿಕರಿಗೂ ಗೊತ್ತಿಲ್ಲ. ಆ ಸಮಯದಲ್ಲಿ ಅವರು ಅನ್‌ಅಕೌಂಟೆಡ್ ಹಣವನ್ನೆಲ್ಲಾ ಸರ್ಕಾರಕ್ಕೆ ಕೊಟ್ಟು ತಾವಿದ್ದ ಜಾಗಕ್ಕೆ ರಾಜೀನಾಮೆ ಕೊಟ್ಟು ಹೊರಗೆ ಬಂದರು.

ಅವರ ಮೇಲೆ ಅನೇಕ ದೂರುಗಳಿವೆ. ಅಂತಹವರನ್ನು ಪುನಃ ಅಲ್ಲಿಗೆ ನೇಮಕ ಮಾಡಿದ್ದೀರಿ ಅವರನ್ನು ಬಿಟ್ಟು ತಮಗೆ ಬೇರೆ ಯಾರೂ ಈ ರಾಜ್ಯದಲ್ಲಿ ನಂಬಿಕೆಯಿರುವವರು ಸಿಗಲಿಲ್ಲವೇ ಈ ರಾಜ್ಯದಲ್ಲಿ ಅನೇಕ ಬುದ್ಧಿವಂತ ಜನರಿದ್ದಾರೆ. ಅವರನ್ನೆಲ್ಲಾ ಬಿಟ್ಟು ಇವರನ್ನೇ ಹಾಕಲು ಕಾರಣವೇನು? ಅವರ ಜೊತೆಗೆ ಶ್ರೀಮಾನ್ ಮುದ್ದಂ ನಿವೃತ್ತ ಚೀಪ್ ಇಂಜಿನಿಯರ್ ಅವರನ್ನು ಸಹ ಪುನಃ ನೇಮಕ ಮಾಡುವುದಕ್ಕೆ ಕಾರಣವೇನು ? ಇವರ ಮೇಲೂ ಸಹ ಅನೇಕ ದೂರುಗಳು ಬಂದಿವೆ. ಪಬ್ಲಿಕ್ ಅಕೌಂಟ್ಸ್ ಕಮಿಟಿಯಲ್ಲಿ ಸಹ ಇವರ ಬಗ್ಗೆ ಹೇಳಲಾಗಿದೆ. ಇಷ್ಟು ವಿಚಾರ ಈ ಮನೆಯಲ್ಲಿ ಸಹ ಚರ್ಚೆಯಾಗಿದೆ. ಅದರೂ ಅವರನ್ನೇ ನೇಮಕ ಮಾಡಲು ಕಾರಣವೇನು. ಶ್ರೀ ಚಾರ್ ಎನ್ನುವ ಚೀಫ್ ಇಂಜಿನಿಯರ್ ಅವರ ಬಗ್ಗೆ ಒಳ್ಳೆಯ ಅಭಿಪ್ರಾಯವಿತ್ತು. ಅವರ ಮೇಲೆ ಯಾವ ದೂರುಗಳು ಇರಲಿಲ್ಲ. ಅಂತಹವರನ್ನು ತೆಗೆದು ಹಾಕಿದ್ದೀರಿ. ಶ್ರೀ ಬಾಳೆಕುಂದ್ರಿ ಅವರನ್ನು ನಮ್ಮ ಭಾಗದ ವಿಶ್ವೇಶ್ವರಯ್ಯ ಎಂದು ಹೇಳುತ್ತಿದ್ದಾರೆ. ಒಳ್ಳೆಯ ಸೇವೆ ಸಲ್ಲಿಸಿದಂಥ ಹಿರಿಯ ಅಧಿಕಾರಿ ಅವರು ಇಂತಹವರಿಗೆ ರಾಜೀನಾಮೆ ಕೊಡಿ ಎಂದು ಕೇಳತಕ್ಕಂಥ ಒಂದು ಮಟ್ಟಕ್ಕೆ ನಿಮ್ಮ ಸರ್ಕಾರ ಹೋಗಿದೆ ಅವರ ಟರ್ಮ್ ಇನ್ನು ಮುಗಿದಿರಲಿಲ್ಲ. ಇದರ ಬಗ್ಗೆ ಹಿನ್ನೆಲೆಯಾದರೂ ಏನು ಇವೊತ್ತು ಅಧಿಕಾರದಲ್ಲಿರತಕ್ಕಂಥ ಚೀಫ್ ಸೆಕ್ರೆಟರಿ ಅವರು ಏನಿದ್ದಾರೆ. ಅವರ ಬಗ್ಗೆ ಹೇಳಬೇಕೆಂದರೆ ಅವರು ಮುಖ್ಯಮಂತ್ರಿಗಳ ಕೈಗೊಂಬೆಯಾಗಿದ್ದಾರೆ. ಟೆಲಿಫೋನ್ ಮೂಲಕ ರಾಜೀನಾಮೆ ಕೊಡಿ ಎಂದು ಹೇಳುವ ಮಟ್ಟಕ್ಕೆ ಅವರು ಹೋಗಿದ್ದಾರೆ. ಶ್ರೀ ಚಾರ್ ಮತ್ತು ಶ್ರೀ ಬಾಳೆಕುಂದ್ರಿ ಇವರಿಬ್ಬರೂ ಸಹ ಏನು ತಪ್ಪು ಮಾಡಿದ್ದಾರೆಂದು ಆ ರೀತಿ ಹೇಳುತ್ತಿದ್ದೀರಿ. ಅವರಿಗೇನು ಬುದ್ಧಿ ಇಲ್ಲವೇ ಜ್ಞಾನವಿಲ್ಲವೇ ಒಳ್ಳೆಯ ಚಾರಿತ್ರ್ಯವಿಲ್ಲವೇ ರಾಜೀನಾಮೆ ಕೇಳುವ ಮಟ್ಟಕ್ಕೆ ತಾವು ಹೋಗುವುದಕ್ಕೆ ಕಾರಣವಾದರು ಏನು?

ಪವರ್ ಕಾರ್ಪೊರೇಷನ್‌ನಲ್ಲಿ ಮ್ಯಾನೇಜಿಂಗ್ ಡೈರೆಕ್ಟರ್ ಆಗಿದ್ದ ಇಬ್ಬರು ಅಧಿಕಾರಿಗಳನ್ನು ಬದಲಾವಣೆ ಮಾಡತಕ್ಕಂಥ ವ್ಯವಸ್ಥೆ ಹಾಗೂ ಹಿನ್ನೆಲೆ ಏನು ? ಈ ಅಧಿಕಾರಿಗಳು ಬಹಳ ಉತ್ತಮ ಅಧಿಕಾರಿಗಳು ಎಂದು ಬಹಳ ಹೆಸರಾಗಿದ್ದವರು ಅದು ಸಾರ್ವಜನಿಕರಿಗೂ ಗೊತ್ತಿದ್ದ ವಿಚಾರ. ಇವತ್ತು ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಇಂದು ಪವರ್ ಕಾರ್ಪೊರೇಷನ್ನಿನಲ್ಲಿ ಏನು ಒಂದು ಸಿವಿಲ್ ಬೋರ್ಡು ಎಂದು ಇದೆ ಇದು ಯಾವ ರೀತಿಯಾಗಿದೆ ಹಾಗೂ ಹೇಗೆ ಕೆಲಸ ಮಾಡುತ್ತಿದೆ ಎಂಬುದನ್ನು ನೋಡಿದಾಗ

**ಶ್ರೀ ಕೆ. ಭಾಸ್ಕರ್ ನಾಯಿಡು:** ಇದಕ್ಕೆ ಒಂದು ಕಮೀಷನ್ ನೇಮಕ ಮಾಡಿ?

**ಒಬ್ಬ ಸದಸ್ಯರು :** ಈಗ ಮಾಡಿರುವುದಕ್ಕೆ ಉತ್ತರ ಹೇಳಿ?

**ಶ್ರೀ ಎಸ್.ಆರ್.ಬೊಮ್ಮಾಯಿ:** ನೀವು ಪಾರ್ಲಿಮೆಂಟ್‌ಗೆ ಹೋಗಿ ಕೇಳಿ ಅದಕ್ಕೆ ಸಿಕ್ಕುತ್ತೆ?

**ಚೇರ್‌ಮನ್‌ರವರು:** ಮಾನ್ಯ ವಿರೋಧಪಕ್ಷದ ನಾಯಕರು ಒಪ್ಪಿದರೆ ಮಾತ್ರ ತಾವು ಯಾರಾದರೂ ಮಾತನಾಡಬಹುದು. ಇಲ್ಲದೆ ಇದ್ದರೆ ದಯಮಾಡಿ ಯಾರು ಮಾತನಾಡಬಾರದು. ಇವತ್ತು ಏನು ಈ ಸಿವಿಲ್ ಬೋರ್ಡ್ಸ್ ಇದೆ ಇದರ ಉಪಯೋಗ ಯಾವ ರೀತಿ ಆಗುತ್ತಿದೆ ಯಾವ ಕಾನೂನಿನ ಚೌಕಟ್ಟಿನಲ್ಲಿ ವ್ಯವಸ್ಥಿತ ರೀತಿಯಲ್ಲಿ ಹೇಗೆ ಸರ್ಕಾರದ ಹಣ ಲೂಟಿ ಮಾಡುವುದಕ್ಕೆ ಹೊರಟಿದ್ದಾರೆ ಎನ್ನುವುದರ ಬಗ್ಗೆ ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಇದಕ್ಕೆ ಉದಾಹರಣೆಯಾಗಿ ದೊಡ್ಡ ದೊಡ್ಡ ಪ್ರಾಜೆಕ್ಟ್‌ಗಳನ್ನು ಕಟ್ಟುವ ವಿಚಾರದಲ್ಲಿ ಹೆಚ್ಚಿಗೆ ವಿವರಣೆಯನ್ನು ಕೊಡುವುದಕ್ಕೆ ನಾನು ಬಯಸುವುದಿಲ್ಲ. ಅಲ್ಲಿನ ಚೀಫ್ ಇಂಜಿನಿಯರ್ ಕೊಟ್ಟ ಅಭಿಪ್ರಾಯವನ್ನು ಕಸದ ಬುಟ್ಟಿಗೆ ಒಗೆದು ಬೇರೆ ನಿರ್ಣಯವನ್ನು ತೆಗೆದುಕೊಳ್ಳುತ್ತಿದ್ದಾರೆ. ನಮ್ಮ ಕಮಿಷನರ್ ಏನು ಇದ್ದಾರೆ. ಚೀಫ್ ಇಂಜಿನಿಯರ್ ಏನು ಇದ್ದಾರೆ. ಅವರು ಡಿಸಿಷನ್ ತೆಗೆದುಕೊಳ್ಳಲಿ ಅದಕ್ಕೆ ನಮ್ಮದು ಅಡ್ಡಿಯಿಲ್ಲ. ಆದರೆ ಈಗ ಅಲ್ಲಿ ಎಲ್ಲಾ ಇಲ್ಲೀಗಲ್ ಆಗಿ ನಡೆಯುತ್ತಿದೆ. ಅಲ್ಲಿರುವ ಬೋರ್ಡ್ಸ್ ಬರೀ ಕರಪ್ಷನ್‌ನಲ್ಲಿ ತೊಡಗಿದೆ. ಅದಕ್ಕೆ ತಾವು ಉತ್ತೇಜನ ಮಾಡುತ್ತಿದ್ದಿರಿ ಎಂದು ತಮಗೆ ಹೇಳಬೇಕಾಗುತ್ತದೆ ಅವರು ಇದನ್ನು ಏತಕ್ಕೆ ಮಾಡಿದರೋ ನನಗೆ ಗೊತ್ತಿಲ್ಲ. ಇದನ್ನು ಯಾವ ಘನ ಉದ್ದೇಶದಿಂದ ಮಾಡಿದ್ದರೋ ಅದು ವಿಫಲವಾಗಿದೆ.

**ಶ್ರೀ ಡಿ. ದೇವರಾಜ್ ಅರಸ್:** ನಾನು ಮಾಡಿರುವುದು ಸರಿಯಿಲ್ಲದಿದ್ದರೆ ತಾವು ಹೇಳಿ, ನಾನು ಬೇಡವೆಂದು ಹೇಳುವುದಿಲ್ಲ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮೊದಲು ಅಲ್ಲಿ ಏನು ಚೀಫ್ ಇಂಜಿನಿಯರ್ಸ್ ಇದ್ದರು. ಅವರಲ್ಲಿ ಈಗ ಒಬ್ಬರೂ ಇಲ್ಲ. ನಮ್ಮ ಚೀಫ್ ಇಂಜಿನಿಯರ್ಸ್ ಏನು ಇದ್ದಾರೆ. ಅವರನ್ನು ಬೇಕಾದರೆ ಸದಸ್ಯರನ್ನಾಗಿ ಮಾಡಿ ಬೇಕಾದಷ್ಟು ಬುದ್ಧಿವಂತರು ನಮ್ಮಲ್ಲಿ ಇದ್ದಾರೆ. ಆದರೆ ಈಗ ಯಾರನ್ನು ಕಮಿಟಿಯಲ್ಲಿ ಹಾಕಿದ್ದೀರಿ ಯಾವ ಕಾರಣಕ್ಕಾಗಿ ಹಾಕಿದ್ದೀರೆಂದು ನಾನು ಹೇಳುತ್ತಿದ್ದೇನೆ. ಇನ್ನು ಅಧಿಕಾರಿಗಳ ವರ್ಗಾವರ್ಗಿ ಬಗ್ಗೆ ಹೇಳಬೇಕೆಂದರೆ ನಮ್ಮ ಪವರ್ ಕಾರ್ಪೊರೇಷನ್ ಡೈರೆಕ್ಟರ್ ಏನು ಇದ್ದರು. ಅವರು ತಮ್ಮ ಕಣ್ಣುಸನ್ನೆ ನೋಡಿಕೊಂಡು ಕೆಲಸ ಮಾಡದೆ

ಹೋಗಿದ್ದಕ್ಕೆ ಅವರನ್ನ ಅಲ್ಲಿಂದ ವರ್ಗಮಾಡುತ್ತೀರಿ. ಯಾರೇ ಅಧಿಕಾರಿಗಳು ತಮ್ಮ ಕಣ್ಣುಸನ್ನೆ ಪ್ರಕಾರ ಕೆಲಸ ಮಾಡಲಿಲ್ಲವೆಂದರೆ ಅವರು ಅಲ್ಲಿ ಒಂದು ವರ್ಷ ಉಳಿಯಲಿಕ್ಕೂ ಸಾಧ್ಯವಿಲ್ಲ. ಇನ್ನು ಅಲ್ಲಿದ್ದ ಒಬ್ಬ ಮ್ಯಾನೇಜಿಂಗ್ ಡೈರೆಕ್ಟರ್ ತಾವು ಹೇಳಿದ ರೀತಿಯಲ್ಲಿ ಕಂಟ್ರಾಕ್ಟ್‌ಗೆ ಅನುಕೂಲ ಮಾಡಿಕೊಡಲಿಲ್ಲವೆಂದು ಅವರನ್ನು ಅಲ್ಲಿಂದ ಹೊರಗೆ ಹಾಕಿದ್ದೀರಿ ? ಇದು ಸರಿಯೇ ಎಂದು ಕೇಳಬಯಸುತ್ತೇನೆ. ಯಾವುದೇ ಅಧಿಕಾರಿಗಳನ್ನು ಟ್ರಾನ್ಸ್‌ಫರ್ ಮಾಡಬೇಕಾದರೆ ಅದಕ್ಕೆ ಪ್ರಬಲವಾದ ಕಾರಣವಿರಬೇಕು. ಸುಮ್ಮನೆ ಏಕಾಏಕಿ ತಮ್ಮ ಮನಸ್ಸಿನ ಪ್ರಕಾರ ನಡೆಯಲಿಲ್ಲವೆಂದು ತಾವು ಟ್ರಾನ್ಸ್‌ಫರ್ ಮಾಡಿದರೆ ಅವರ ನೈತಿಕತೆಯ ಮೇಲೆ ಪರಿಣಾಮ ಬೀರುತ್ತದೆ. ಇನ್ನು ನಮ್ಮ ಹೋಂ ಸೆಕ್ರೆಟರಿಯವರ ಬದಲಾವಣೆಯಾಗುತ್ತಾರೆಂದು ತಿಳಿದು ಬಂದಿದೆ. ಇನ್ನೂ ಅವರು ಅಲ್ಲಿಗೆ ಬಂದು 6 ತಿಂಗಳಾಗಿಲ್ಲ ನನಗೆ ವೈಯಕ್ತಿಕವಾಗಿ ಅವರ ಬಗ್ಗೆ ಬಹಳ ಗೌರವವಿದೆ. ಅವರನ್ನು ನಾನು ಬಲ್ಲೆ ಅವರು ಒಳ್ಳೆಯ ಅಧಿಕಾರಿ. ಅವರ ಜಾಗಕ್ಕೆ ಬರತಕ್ಕಂಥವರು ಒಬ್ಬ ಕಂಟ್ರಾಕ್ಟರ್ ಸಂಬಂಧಿಯೆಂದು ಕೇಳಲ್ಪಟ್ಟಿದ್ದೇನೆ ಮತ್ತು ಅವರು ತಮ್ಮ ಬಲಗೈ ಎಂದು ಕೇಳಲ್ಪಟ್ಟಿದ್ದೇನೆ.

**ಶ್ರೀ ಬಿ. ಬಸವಲಿಂಗಪ್ಪ:** ಯಾರನ್ನೂ ಬದಲಾವಣೆ ಮಾಡಿದರೂ ಸಹ ಸಂಬಂಧಿಗಳು ಎಂದು ಹೇಳುತ್ತೀರಾ. ಸೀನಿಯಾರಿಟಿ ಹಾಗೂ ಮೆರಿಟ್ ಪ್ರಕಾರ ಮಾಡಬೇಕಾಗುತ್ತದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಸೀನಿಯಾರಿಟಿ ಪ್ರಕಾರ ಅವರವರ ಮೆರಿಟ್ ಪ್ರಕಾರ ಸ್ಥಾನಮಾನಗಳನ್ನು ಕೊಡಲಿಕ್ಕೆ ನಮ್ಮ ಅಭ್ಯಂತರವಿಲ್ಲ. ಯಾವುದೇ ಒಂದು ಉದ್ದೇಶ ಇಟ್ಟುಕೊಂಡು ಅವರನ್ನು ಟ್ರಾನ್ಸ್‌ಫರ್ ಮಾಡುವುದು ಸರಿಯಲ್ಲವೆಂದು ಹೇಳಬೇಕಾಗುತ್ತದೆ. ಮುಖ್ಯವಾಗಿ ಹೇಳಬೇಕಾದರೆ ಮೆನ್ ಆಫ್ ದಿ ಟಾಪ್ ಷುಡ್ ಬಿ ಹಾನೆಸ್ಟ್, ಇಂಟಿಗ್ರೆಟಿ ಅಂಡ್ ಎಫಿಷಿಯೆಂಟ್ ಅಂತಹವರನ್ನು ಎನ್‌ಕರೇಜ್ ಮಾಡಿ, ಯಾರೂ ಬೇಡವೆಂದು ಹೇಳುವುದಿಲ್ಲ. ಅಂತಹವರಿಗೆ ನೀವು ಪ್ರೋತ್ಸಾಹ ಕೊಟ್ಟರೆ ಅಡ್ಮಿನಿಸ್ಟ್ರೇಷನ್ ಕೂಡಾ ಚೆನ್ನಾಗಿರುತ್ತದೆ. ಆದರೆ ಅದನ್ನು ತಾವು ಅನುಸರಣೆ ಮಾಡುತ್ತಿಲ್ಲ. ಅಂತಹವರು ಇಲ್ಲವೆಂದು ಹೇಳುವುದಕ್ಕೆ ಬರುವುದಿಲ್ಲ, ಬೇಕಾದಷ್ಟು ಇದ್ದಾರೆ ಆದರೆ ಹುಡುಕಬೇಕಾಗುತ್ತದೆ. ಆಂಧ್ರದ ಮುಖ್ಯಮಂತ್ರಿಯವರಾದ ಶ್ರೀ ವೆಂಗಲ್ ರಾವ್‌ರವರು ವಿಮಲದಾಸ್‌ರವರ ವರದಿ ಬಂದ ಕೂಡಲೇ ತಮ್ಮ ಅಸೆಂಬ್ಲಿ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟಿದ್ದಾರೆ. ಅದರಲ್ಲೂ ಅವರ ಮೇಲೆ ಇದ್ದ ಆರೋಪಣೆಯಾದರೂ ಏನು? ಕೇವಲ ಸಂಜಯಗಾಂಧಿಯವರು ಆಂಧ್ರಕ್ಕೆ ಪ್ರವಾಸ ಬಂದಾಗ ಸರ್ಕಾರದ ಅಧಿಕಾರವನ್ನು ದುರುಪಯೋಗ ಮಾಡಿಕೊಂಡಿದ್ದಾರೆಂದು ಅಷ್ಟೆ.

ಈ ಸರ್ಕಾರದ ಬಗ್ಗೆ ಕಮಿಟಿ ರಿಪೋರ್ಟ್ ಇದೆ, ಇದರಲ್ಲಿ ಸ್ಪೆಸಿಫಿಕ್ ಚಾರ್ಜೆಸ್ ಇದೆ. ಈ ಬಗ್ಗೆ ಇನ್‌ವೆಸ್ಟಿಗೇಷನ್ಮಾಡುವ ವ್ಯವಸ್ಥೆ ಏನು ಮಾಡಿದ್ದೀರಿ ಗೊತ್ತಿಲ್ಲ. ಹಿಂದೆ ಶ್ರೀಮಾನ್ ಕಿತ್ತೂರ್ ಅವರ ಮೇಲೆ ಒಂದು ಚಿಕ್ಕ ಆಪಾದನೆ ನಿಜವಲ್ಲವೆಂದು ತಿಳಿದ ಮೇಲೆ ಮತ್ತೆ ಅವರನ್ನು ವಾಪಸ್ಸು ತೆಗೆದುಕೊಂಡಿರಿ, ಅದೇ ರೀತಿ ಈ ಮಂತ್ರಿಗಳಿಂದ ರಾಜೀನಾಮೆ ತೆಗೆದುಕೊಂಡು ಅವರ ವಿಚಾರಣೆ ಆದ ಮೇಲೆ ಅವರ ಮೇಲೆ ಆರೋಪ ಇಲ್ಲ ಎಂದು ತೀರ್ಮಾನವಾದ ಮೇಲೆ ಅವರನ್ನು ಮತ್ತೆ ಅಧಿಕಾರಕ್ಕೆ ತೆಗೆದುಕೊಳ್ಳಬಹುದಿತ್ತು. ಅದನ್ನು ಬಿಟ್ಟು ಕಡಿಮೆ ಮಟ್ಟದಿಂದ ಮೇಲ್ದರ್ಜೆಗೆ ಏರಿಸಿದ್ದೀರಿ. ಪುನಃ ಇವರನ್ನು ಏತಕ್ಕೆ ತೆಗೆದುಕೊಂಡಿರಿ ಎಂದು ನನಗೆ ಆಶ್ಚರ್ಯವಾಗುತ್ತದೆ. ಇದು ಒಂದು ಆಡಳಿತ ಕಾನೂನಿನ ನೀತಿಯೇ ಎಂದು ಕೇಳುತ್ತೇನೆ. ಇನ್ನು ಬಿ.ಡಿ.ಎ. ಅಧ್ಯಕ್ಷರನ್ನಾಗಿ ಯಾರನ್ನು ನೇಮಕ ಮಾಡಿದ್ದಾರೆ ಅವರು ಮುಖ್ಯಮಂತ್ರಿಗಳ ಆಪ್ತ ಮಿತ್ರರು ಎಂದು ಕೇಳಿದ್ದೇನೆ. ಅವರ ಬಗ್ಗೆ ಅನೇಕ ಆರೋಪಗಳು ಇವೆ. ಅಪಾರ ಸಂಪತ್ತನ್ನು ಅವರು ಗಳಿಸಿದ್ದಾರೆ ಅನ್ನುವ ಆಪಾದನೆ ಇದೆ. ಅವರ ಮೇಲೆ ಆಪಾದನೆಗಳು ಇರುವಾಗ ಮತ್ತೆ ಅವರನ್ನೇ ಬಿ.ಡಿ.ಎ. ಅಧ್ಯಕ್ಷರನ್ನಾಗಿ ಮಾಡುವ ಕಾರಣ ಏನಿತ್ತು ? ಇವೊತ್ತು ನಿಮ್ಮ ಪಕ್ಷದಲ್ಲೇ ಬಹಳ ಜನ ಒಳ್ಳೆಯವರು ಇದ್ದಾರೆ, ಅಂತಹ ಒಳ್ಳೆಯ ಜನರನ್ನು ನೇಮಿಸಿದರೆ ನಾನು ಸ್ವಾಗತ ಮಾಡುತ್ತೇನೆ. ಆದರೆ ಇಂತಹ ಆಪಾದನೆ ಇರತಕ್ಕಂತಹ ಜನರನ್ನು ನೇಮಿಸಲಿಕ್ಕೆ ಕಾರಣ ಏನು? ನಾನು ಕೈರಾನ್ ಅವರ ಬಗ್ಗೆ ಉದಾಹರಣೆ ಕೊಟ್ಟೆ. ಇವೊತ್ತು ಮುಖ್ಯಮಂತ್ರಿಗಳಿಗೆ ಜನರು ಅಧಿಕಾರ ಕೊಡುವಾಗ ಅವರಿಗೆ ಅಧಿಕಾರ ಬಿಡಬೇಕು ಎಂದು ಹೇಳತಕ್ಕ ನೈತಿಕ ಹಕ್ಕು ನನಗೆ ಇಲ್ಲ. ಆದರೆ ಅವರಿಗೆ ಒಳ್ಳೆಯ ಆಡಳಿತ ಕೊಡಿ ಎಂದು ಕೇಳತಕ್ಕ ಹಕ್ಕು ನನಗೆ ಇದೆ. ಸಾರ್ವಜನಿಕರಿಗೆ ಒಳ್ಳೆಯ ಅಭಿಪ್ರಾಯ ಮೂಡತಕ್ಕ ಆಡಳಿತ ಕೊಡಿ ಎಂದು ಕೇಳಲಿಕ್ಕೋಸ್ಕರ ಜನರು ನಮಗೆ ಮತ ಕೊಟ್ಟು ಕಳುಹಿಸಿದ್ದಾರೆ. ಈಗ ತಾವು ಕಳೆದ 6 ವರ್ಷಗಳಿಂದ ಮುಖ್ಯಮಂತ್ರಿಗಳಾಗಿರಬಹುದು ಪುನಃ ಆಗಿರಬಹುದು ಆದರೆ ತಾವು ನಡೆದ ರೀತಿ ಕೊಟ್ಟ ಆಡಳಿತ ಐತಿಹಾಸಿಕವಾಗಿ ಉಳಿಯುತ್ತದೆ. ಅದಕ್ಕಾಗಿ ನಾನು ಈ ವಿಚಾರವನ್ನು ಹೇಳುತ್ತೇನೆ. ಉತ್ತಮ ಆಡಳಿತ ಬರುವುದಕ್ಕೆ ಇನ್ನು ಮುಂದಾದರೂ ಇಂತಹ ಜನರಿಗೆ ಅವಕಾಶ ಕೊಡದೇ ಒಳ್ಳೆಯ ಅಧಿಕಾರಿಗಳಿಗೆ ಒಳ್ಳೆಯ ಸಾರ್ವಜನಿಕರಿಗೆ ಒಳ್ಳೆಯ ಸ್ಥಾನಮಾನಗಳನ್ನು ಕೊಡತಕ್ಕ ವ್ಯವಸ್ಥೆ ಬರಬೇಕು ಎಂದು ನಾನು ಒತ್ತಿ ಒತ್ತಿ ಹೇಳಬಯಸುತ್ತೇನೆ.

*****

# 1979ನೇ ಸಾಲಿನ ಬಜೆಟ್ ಮೇಲಿನ ಚರ್ಚೆ

ದಿನಾಂಕ: 21.03.1979

**ವಿರೋಧ ಪಕ್ಷದ ನಾಯಕರಾಗಿ ಆಡಳಿತ ಪಕ್ಷವನ್ನು ವಿಮರ್ಶೆಗೆ ಗುರಿಪಡಿಸುವ ಅವಕಾಶವನ್ನು ಎಂದೂ ಬಿಟ್ಟುಕೊಡದ ಬೊಮ್ಮಾಯಿಯವರು ಬಜೆಟ್ ಮೇಲಿನ ಚರ್ಚೆ ಆರಂಭಗೊಂಡಿತೆಂದರೆ ಹಗಲಿರುಳೂ ಅಧ್ಯಯನ ಮಾಡಿ ಸಿದ್ಧರಾಗುತ್ತಿದ್ದರು. 1979 ರಲ್ಲಿನ ಅವರ ಮಾತುಗಳು ಸಂಪೂರ್ಣ ಅಂಕಿ ಅಂಶಗಳಿಂದ ಕೂಡಿದ್ದು ಬೊಮ್ಮಾಯಿಯವರಲ್ಲಿದ್ದ ಮುಂದಿನ ಸಮರ್ಥ ಆಡಳಿತಗಾರನ ಸಿದ್ಧತೆಯೆಂದೇ ಭಾವಿಸಬಹುದಾಗಿದೆ.**

**ಶ್ರೀ ಎಸ್.ಆರ್.ಬೊಮ್ಮಾಯಿ:** ಸ್ವಾಮಿ ನಾನು ಸರ್ಕಾರಕ್ಕೆ ಧನ್ಯವಾದಗಳನ್ನು ಅರ್ಪಿಸ ಬಯಸುತ್ತೇನೆ. ಏತಕ್ಕೆಂದರೆ ಅದರಲ್ಲೂ ಸ್ಪೆಷಲ್ ಸೆಕ್ರೆಟರಿ ಫಾರ್ ಪ್ಲಾನಿಂಗ್ ಶ್ರೀ ಡಿ.ಎಂ. ನಂಜುಂಡಪ್ಪನವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಈ ಪುಸ್ತಕವನ್ನು ಅವರು ಬರೆಯದೇ ಹೋಗಿದ್ದರೆ ಈ ಅಂಕಿಸಂಖ್ಯೆಗಳು ಸಿಕ್ಕದೇ ಹೋಗಿದ್ದರೆ ನಿಜವಾಗಿಯೂ ನಮ್ಮ ಆರ್ಥಿಕ ಆರೋಗ್ಯ ನಿಜಸ್ಥಿತಿ ಗೊತ್ತಾಗುತ್ತಾ ಇರಲಿಲ್ಲ. ಇವತ್ತು ಏನಾಗಿದೆ ಎಂದರೆ ಆರ್ಥಿಕ ಆರೋಗ್ಯ ಹದಗೆಟ್ಟಿದೆ. ನಾನು ಈಗಾಗಲೇ ಕೆಲವು ಅಂಕಿ ಸಂಖ್ಯೆಗಳನ್ನು ಕೊಟ್ಟಿದ್ದೇನೆ: ಸಮಯಾಭಾವದ ಕಾರಣ ಅಷ್ಟು ಮಾತ್ರ ಕೊಟ್ಟಿದ್ದೇನೆ. ಒಟ್ಟಿನಲ್ಲಿ ಹೇಳುವುದಾದರೆ 1960-61 ಮತ್ತು 1970-71ರಲ್ಲಿ ರಾಜ್ಯದಲ್ಲಿ ಏನೊಂದು ಅಭಿವೃದ್ಧಿಯಾಗಿತ್ತು ಅದರಂತೆ ಈಗ ಇರಿಗೇಷನ್‌ನಲ್ಲಾಗಲೀ, ಇಂಡಸ್ಟ್ರೀಸ್‌ನಲ್ಲಾಗಲೀ, ಪವರ್‌ನಲ್ಲಾಗಲೀ ಎಜುಕೇಷನ್‌ನಲ್ಲಾಗಲೀ, ಸೋಷಿಯಲ್ ವೆಲ್‌ಫೇರ್‌ನಲ್ಲಾಗಲೀ ಯಾವುದೇ ವಿಚಾರದಲ್ಲಾಗಲೀ ಹೇಳಿಕೊಳ್ಳುವಂಥ ಅಭಿವೃದ್ಧಿಯ ಹೆಚ್ಚಳವೇನೂ ಆಗಿಲ್ಲ. ಇದರಲ್ಲಿ ಸ್ಪಷ್ಟವಾಗಿ ಅಂಕಿ ಸಂಖ್ಯೆಗಳೇ ನಿಜಸ್ಥಿತಿಯನ್ನು ಹೇಳಿಕೊಳ್ಳುತ್ತಿವೆ. ಸ್ವಾಮಿ ಇದನ್ನು ನೋಡುವಾಗ ಇನ್ನೊಂದು ವಿಚಾರ ನನಗೆ ನೆನಪು ಬರುತ್ತಿದೆ. ಇವತ್ತು ಸರ್ಕಾರದವರು ಹೆಚ್ಚು ಹೆಚ್ಚಾಗಿ ಹರಿಜನ ಗಿರಿಜನರ ಅಭಿವೃದ್ಧಿಯ ಬಗ್ಗೆ ಹೇಳುತ್ತಿದ್ದಾರೆ. ಮತ್ತು ಅಭಿವೃದ್ಧಿ ಕಾರ್ಯಗಳಿಗಾಗಿ ಹೆಚ್ಚು ಕರಭಾರವನ್ನು ಹಾಕತಕ್ಕಂಥ ಅವಶ್ಯಕತೆ ಇದೆಯೆಂದು ಸಹ ಹೇಳುತ್ತಿದ್ದಾರೆ. ಅಭಿವೃದ್ಧಿಯಾಗುತ್ತಿರತಕ್ಕಂಥ ರಾಜ್ಯಗಳಲ್ಲಿ ಇದನ್ನು ಯಾರು ಅಲ್ಲಗಳೆಯುವಂತಿಲ್ಲ. ಆದರೆ ಮುಖ್ಯವಾಗಿ ನಮ್ಮ ಮುಂದೆ ಇರತಕ್ಕಂಥ ಪ್ರಶ್ನೆ ಏನೆಂದರೆ ನಾವು ಎಲ್ಲಾ ಕರಭಾರವನ್ನೂ ಕೊಟ್ಟಿದ್ದೇವೆ. ಹಣವನ್ನು ಕೊಟ್ಟಿದ್ದೇವೆ. ಇದಕ್ಕೆ ಅನುಗುಣವಾಗಿ ಅಭಿವೃದ್ಧಿ ಕಾರ್ಯಗಳು ಆಗಿದೆಯೇ, ಈ ಪ್ರಶ್ನೆಗೆ ಉತ್ತರವನ್ನು ನಾನು ಸರ್ಕಾರದವರಿಂದ ಪಡೆಯಬಯಸುತ್ತೇನೆ. ಯಾವ

ಯಾವ ರಂಗದಲ್ಲಿ ಎಷ್ಟೆಷ್ಟು ಮಟ್ಟಿಗೆ ಅಭಿವೃದ್ಧಿ ಕಾರ್ಯಗಳು ಆಗಿವೆ ಎಂಬ ಬಗ್ಗೆ ಅಂಕಿಸಂಖ್ಯೆಗಳ ಮುಖಾಂತರ ಇದರಲ್ಲಿ ಹೇಳಿದ್ದರೆ ಬಹಳ ಚೆನ್ನಾಗಿ ಇರುತ್ತಿತ್ತು. ಅದನ್ನು ಡ್ರಾಫ್ಟ್ ಫೈವ್ ಇಯರ್ ಪ್ಲಾನ್ ಪುಸ್ತಕದಲ್ಲಿ ಹೇಳಿದ್ದಾರೆಯೇ ಹೊರತು ಮಾನ್ಯ ಅರ್ಥಮಂತ್ರಿಯವರು ತಮ್ಮ ಬಜೆಟ್ ಭಾಷಣದಲ್ಲಿ ಅದನ್ನು ಹೇಳುವುದನ್ನು ಮರೆತ್ತಿದ್ದಾರೆ. ನಾನು ಒಂದೊಂದೇ ರಂಗವನ್ನು ತೆಗೆದುಕೊಂಡು ಅದನ್ನು ನಾನು ಹೇಳಬಯಸುತ್ತೇನೆ. ಸ್ವಾಮಿ ಅದನ್ನು ಹೇಳುವುದಕ್ಕೆ ಮೊದಲು ಒಂದು ಮಾತನ್ನು ಪ್ರಥಮದಲ್ಲೇ ನಾನು ಹೇಳಬೇಕಾಗುತ್ತದೆ. ಮಾನ್ಯ ಅರ್ಥಮಂತ್ರಿಯವರು 7ನೇ ಫೈನಾನ್ಸ್ ಕಮಿಷನ್ ರಿಪೋರ್ಟ್ ಬಗ್ಗೆ ಹೇಳಿದ್ದಾರೆ. ಕೇಂದ್ರ ಸರ್ಕಾರದವರಿಂದ ರಾಜ್ಯಕ್ಕೆ ಹೆಚ್ಚಿನ ಸಹಾಯ ಆಗತಕ್ಕಂಥಾದ್ದರ ಬಗ್ಗೆ ಹೇಳಿದ್ದಾರೆ. ಆದರೆ ಅವರು ಆ ಬಗ್ಗೆ ಕೇಂದ್ರ ಸರ್ಕಾರಕ್ಕೆ ಅಭಿನಂದನೆಯನ್ನು ಸಲ್ಲಿಸಿಲ್ಲ, ಇರಲಿ ಕೇಂದ್ರ ಸರ್ಕಾರದವರಿಂದ ಇತ್ತೀಚೆಗೆ 2 ವರ್ಷಗಳಲ್ಲಿ ರಾಜ್ಯ ಸರ್ಕಾರಗಳಿಗೆ ಸಹಾಯವನ್ನು ಮಾಡತಕ್ಕಂಥ ನೀತಿಯಲ್ಲಿ ಆದಂಥ ಬದಲಾವಣೆಗಳನ್ನು ನಾವು ಮೆಚ್ಚಬೇಕಾಗುತ್ತದೆ. ಅದನ್ನು ಮೆಚ್ಚಿದ್ದೇವೆ ಇವತ್ತು ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ 1006 ಕೋಟಿ ರೂಪಾಯಿಗಳ ಹೆಚ್ಚಿನ ಸಹಾಯ ದೊರೆತಿರುವುದನ್ನು ಇದರಲ್ಲಿ ಹೇಳಿದ್ದಾರೆ. ಈ ವಿಚಾರದಲ್ಲಿ ನನ್ನ ಮಿತ್ರರೂ ಹೇಳಿದ್ದಾರೆ. ಆಮೇಲೆ ಎಕ್ಸೈಸ್ ಡ್ಯೂಟಿ ಮೇಲಿನ ನಮ್ಮ ಷೇರನ್ನು ಹಿಂದಿನ ಸರ್ಕಾರದವರು 20 ಪರ್ಸೆಂಟಿನಷ್ಟು ಕೊಡುತ್ತಿದ್ದರು. ಈಗ ಅದು 40 ಪರ್ಸೆಂಟ್ ಆಗಿದೆ. ಇದು ಈಗ ಒಂದಕ್ಕೆ ಎರಡರಷ್ಟು ಆಗಿದೆ. ಇದರಿಂದ ನಮ್ಮ ರಾಜ್ಯ ಸರ್ಕಾರಕ್ಕೆ ಎಷ್ಟು ಹಣ ಬಂದಿದೆ ಎಂದರೆ 56 ಕೋಟಿ ರೂಪಾಯಿಗಳಷ್ಟು ಹೆಚ್ಚಿನ ಹಣ ಬಂದಿದೆ. ಅಲ್ಲದೇ ಇನ್‌ಕಮ್ ಟ್ಯಾಕ್ಸ್‌ನಿಂದ 6 ಕೋಟಿಗಳಷ್ಟು ಹೆಚ್ಚಿನ ಹಣ ಬಂದಿದೆ. ಇವತ್ತು ಇದು ಸಾಮಾನ್ಯವಾದ ಸಹಾಯವಲ್ಲ. ಮತ್ತು ಕೇಂದ್ರ ಸರ್ಕಾರದವರು ಅನೇಕ ಯೋಜನೆಗಳಿಗೆ ಹಣವನ್ನು ಕೊಡುತ್ತಿದ್ದಾರೆ. ಇವತ್ತು ಕುಡಿಯುವ ನೀರಿನ ಯೋಜನೆ ಇದೆ. ಹರಿಜನ ವಿದ್ಯಾರ್ಥಿಗಳಿಗೆ ಸ್ಕಾಲರ್‌ಷಿಪ್ ಕೊಡುವುದಕ್ಕಾಗಿ ರಸ್ತೆಗಳನ್ನು ಮಾಡುವುದಕ್ಕಾಗಿ ಪೀಪಲ್ಸ್ ಹೌಸಿಂಗ್ ಸ್ಕೀಮ್‌ಗಾಗಿ ಮತ್ತು ಇದರ ಜೊತೆಗೆ ಅನೇಕ ಉದ್ಯಮಗಳಿಗೆ ಹಣ ಸಹಾಯವನ್ನು ಮಾಡುತ್ತಿದ್ದಾರೆ. ಕಳೆದ ಎರಡು ವರ್ಷಗಳಲ್ಲಿ ಇವೆಲ್ಲ ಬಾಬ್ತುಗಳಿಗೆ ಹಿಂದಿನ ಸರ್ಕಾರ ಕೊಟ್ಟಿದ್ದಕ್ಕಿಂತ ಹೆಚ್ಚಿನ ಮೊತ್ತದಲ್ಲಿ ಹಣವನ್ನು ಕೇಂದ್ರ ಸರ್ಕಾರದವರು ಕೊಟ್ಟಿದ್ದಾರೆ. ಇದಕ್ಕಾಗಿ ಮಾನ್ಯ ಅರ್ಥಮಂತ್ರಿಯವರು ಕೇಂದ್ರ ಸರ್ಕಾರದವರಿಗೆ ಅಭಿನಂದನೆಯನ್ನು ಸಲ್ಲಿಸದೇ ಹೋದರೂ ಕರ್ನಾಟಕದ ಜನತೆಯ ಪರವಾಗಿ ನಾನು ಕೇಂದ್ರ ಸರ್ಕಾರದವರಿಗೆ ಅಭಿನಂದನೆಯನ್ನು ಸಲ್ಲಿಸುತ್ತಿದ್ದೇನೆ. ಇವತ್ತು ಕೇಂದ್ರದವರು ಹೆಚ್ಚಿನ ಮಟ್ಟದಲ್ಲಿ ಕೊಟ್ಟಂತಹ ಹಣಕಾಸಿನ ಸಹಾಯ ಇಲ್ಲದೇ ಹೋಗಿದ್ದರೆ ಇವತ್ತು ನಮ್ಮ ಮಾನ್ಯ ಅರ್ಥ ಮಂತ್ರಿಯವರು

ಬಜೆಟ್‌ನಲ್ಲಿ ಏನೊಂದು ಹಣವನ್ನು ಹಂಚಿಕೆ ಮಾಡಿದ್ದಾರೆ ಅಷ್ಟೊಂದು ಉದಾರವಾಗಿ ಹಣವನ್ನು ಹಂಚಿಕೆ ಮಾಡುವುದಕ್ಕೆ ಆಗುತ್ತಾ ಇರಲಿಲ್ಲ. ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಿದರೆ ಸರ್ಕಾರದವರಾಗಲೀ ಮಾನ್ಯ ಅರ್ಥಮಂತ್ರಿಯವರಾಗಲೀ ತಪ್ಪು ತಿಳಿದುಕೊಳ್ಳುವುದಿಲ್ಲವೆಂದು ನಾನಾದರೂ ಭಾವಿಸುತ್ತೇನೆ. ಮಾನ್ಯ ಯಾಹ್ಯಾರವರು ಅದೃಷ್ಟಶಾಲಿಗಳಾಗಿದ್ದಾರೆ ಅವರು ಅರ್ಥಮಂತ್ರಿಗಳಾದ ಮೇಲೆ ಕೇಂದ್ರ ಸರ್ಕಾರ ಬದಲಾಗಿದೆ. ಅಲ್ಲಿ ಕೇಂದ್ರ ಸರ್ಕಾರ ಬದಲಾದ ಮೇಲೆ ನಮ್ಮ ರಾಜ್ಯಕ್ಕೆ ಹಣದ ಸುರಿಮಳೆಯಾಗುತ್ತಿದೆ. ಒಂದು ಸಲಕ್ಕೆ ಒಬ್ಬ ಕಡುಬಡವನಿಗೆ ಲಾಟರಿ ಟಿಕೆಟ್‌ನಲ್ಲಿ ದೊಡ್ಡ ಮೊತ್ತದ ಹಣ ಸಿಕ್ಕಿದರೆ ಅವನಿಗೆ ಬಹಳಷ್ಟು ಸಂತೋಷವಾಗುತ್ತದೆ. ಅದೇ ರೀತಿಯಲ್ಲಿ ನಮ್ಮ ರಾಜ್ಯ ಸರ್ಕಾರಕ್ಕೆ ಹಣ ಬಂದಿದೆ. ಆ ಹಣವನ್ನು ಈ ಬಜೆಟ್‌ನಲ್ಲಿ ಹೇಳಿರುವಂತೆ ಖರ್ಚು ಮಾಡುವುದಕ್ಕೆ ವ್ಯವಸ್ಥೆ ಮಾಡಿದ್ದಾರೆ. ಹಾಗೆ ಬಂದ ಹಣ ಸರಿಯಾಗಿ ವಿನಿಯೋಗವಾಗಿ ಯಾವ ಯಾವ ಅಭಿವೃದ್ಧಿ ಕಾರ್ಯಗಳಿಗೆ ಮುಟ್ಟಬೇಕೋ ಅದು ಮುಟ್ಟುತ್ತಾ ಇದೆಯೇ ಎಂಬುದನ್ನು ನಾವು ಪರೀಕ್ಷೆ ಮಾಡಬೇಕಾಗಿದೆ. ಮಾನ್ಯ ಅರ್ಥಮಂತ್ರಿಯವರು ಹೆಚ್ಚಿನ ಹಣವನ್ನು ಇರಿಗೇಷನ್ ಪಿ.ಡಬ್ಲ್ಯೂ.ಡಿ. ಮತ್ತು ಎಜುಕೇಷನ್‌ಗೆ ಹಂಚಿದ್ದಾರೆ. ಅದಕ್ಕಾಗಿ ಆ ಹಣ ಮುಟ್ಟಿದೆಯೇ? ಅವರು ಏನೊಂದು ಗುರಿಯನ್ನು ಹಾಕಿಕೊಂಡಿದ್ದಾರೆ ಆ ಗುರಿ ಸಾಧನೆಯಾಗುತ್ತದೆಯೇ ಎಂದು ನಾನು ಕೇಳುವುದಕ್ಕೆ ಬಯಸುತ್ತೇನೆ. ಈ ಬಗ್ಗೆ ಗುರಿ ಸಾಧನೆಯಾಗಿಲ್ಲವೆಂದೇ ಹೇಳಬಹುದು. ಆದ್ದರಿಂದ ನಾನು ಆಗಲೇ ಹೇಳಿದ ಹಾಗೆ ಇದು ಎಕ್ಸ್‌ಪೆಂಡಿಚರ್ ಓರಿಯಂಟಲ್ ಬಜೆಟ್ ಆಗಿದೆ. ಬಜೆಟ್‌ನಲ್ಲಿ ಏನೊಂದು ಟಾರ್ಗೆಟ್ ಅನ್ನು ಅಚೀವ್ ಮಾಡಬೇಕೆಂದು ಗುರಿಹಾಕಿಕೊಂಡಿದ್ದಾರೆ. ಅದನ್ನು ಮಾಡಬೇಕು. ಈ ದೃಷ್ಟಿಯಿಂದ ನಾವು ಮುಂದೆ ಹೋಗಬೇಕಾದ ಅವಶ್ಯಕತೆ ಇದೆ. ನಾನು ಒಂದೊಂದೇ ವಿಚಾರವನ್ನು ಹೇಳುವಾಗ ತಾವು ಈ ಬಗ್ಗೆ ಆಲೋಚನೆ ಮಾಡಬೇಕು. ಮೊಟ್ಟ ಮೊದಲನೆಯದಾಗಿ ನಾನು ಆರಿಸಿಕೊಳ್ಳತಕ್ಕಂಥ ವಿಚಾರವೆಂದರೆ ಪದೇಪದೇ ಸರ್ಕಾರದವರು ಇಡೀ ರಾಷ್ಟ್ರದಲ್ಲಿ ಲ್ಯಾಂಡ್ ರಿಫಾರಂಸ್ ಬಗ್ಗೆ ಪ್ರಗತಿಪರವಾದ ಕಾನೂನನ್ನು ಮಾಡಿದಂಥ ಸರ್ಕಾರ ಬೇರೊಂದಿಲ್ಲ ಎಂದು ಎದೆ ಉಬ್ಬಿಸಿ ಹೇಳುತ್ತಿದ್ದಾರೆ. ಮಾನ್ಯ ಅರ್ಥಮಂತ್ರಿಯವರು ತಮ್ಮ ಭಾಷಣದಲ್ಲಿ 1978ರ ಡಿಸೆಂಬರ್ ಕೊನೆಯವರೆಗೆ ಸುಮಾರು 10 ಲಕ್ಷಕ್ಕೂ ಮೀರಿ ಗೇಣಿದಾರರಿಂದ ಅರ್ಜಿಗಳು ಬಂದಿದ್ದವು. ಇವುಗಳಲ್ಲಿ 4 ಲಕ್ಷ ಇಂಥ ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದೆ. ಉಳಿದವುಗಳನ್ನು ಆದಷ್ಟು ಬೇಗ ವಿಲೇವಾರಿ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ. ಎಂದು ಹೇಳಿದ್ದಾರೆ. ಇದನ್ನು ಹೇಳುತ್ತಾ ತಮ್ಮ ಭಾಷಣದಲ್ಲಿ ಅವರು ಮತ್ತೆ

ಹೆಚ್ಚುವರಿ ಭೂಮಿ ಇರುವುದಾಗಿ ಇಟ್ಟು 1.45 ಲಕ್ಷ ಘೋಷಣೆಗಳು ಬಂದಿದ್ದು, ಅವುಗಳ ಪೈಕಿ 72,619 ಘೋಷಣೆಗಳನ್ನು ವಿಲೇವಾರಿ ಮಾಡಲಾಯಿತು. ಈ ಹೆಚ್ಚುವರಿ ಭೂಮಿಯಲ್ಲಿ 37.033 ಎಕರೆಯಷ್ಟು ಭೂಮಿಯನ್ನು ಒಟ್ಟು 6,159 ಜನರಿಗೆ ಹಂಚಲಾಯಿತು. ಇವರಲ್ಲಿ 3,873 ಜನರು ಹರಿಜನ ಗಿರಿಜನರು ಇದ್ದಾರೆ ಎಂದು ಹೇಳಿದ್ದಾರೆ. ಮತ್ತು 37,555 ಜನರಿಗೆ ಅಕ್ಯುಪೆನ್ಸಿ ರೈಟ್ಸ್ ಅನ್ನು ಕೊಟ್ಟಿದ್ದೇವೆ ಎಂದು ಹೇಳಿದ್ದಾರೆ.

ಭೂ ಸುಧಾರಣೆ ಕಾಯಿದೆಯನ್ನು ಜಾರಿಗೆ ತಂದು ಗೇಣಿದಾರರನ್ನು ಒಡೆಯನನ್ನಾಗಿ ಮಾಡುವ ಉದ್ದೇಶ ಸರ್ಕಾರಕ್ಕಿಲ್ಲ ಎನ್ನುವುದನ್ನು ತೋರಿಸುವುದಕ್ಕಾಗಿ ನಾನು ಈ ಅಂಕಿ ಅಂಶಗಳನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಈಗ ಏಳು ಲಕ್ಷ ಗೇಣಿದಾರರಲ್ಲಿ ನಾಲ್ಕು ಲಕ್ಷ ಜನ ಕಾನೂನಿಗನುಗುಣವಾಗಿ ಅಕ್ಯುಪೆನ್ಸಿಯಾಗಿದ್ದಾರೆ. ಇವರುಗಳು ಭೂ ಒಡೆಯರಾಗಬೇಕಾದರೆ, ಆ ಜಮೀನಿನ ಕಂದಾಯದ 50–150 ಪಟ್ಟಿನಷ್ಟು ಹಣವನ್ನು ತುಂಬಬೇಕು. ಆ ಹಣವನ್ನು ತುಂಬದ ಹೊರತು ಅವರು ಒಡೆಯರಾಗುವುದಿಲ್ಲ. ಹಾಗಿರುವಾಗ ನೀವೆಲ್ಲಾ ಭೂ ಒಡೆಯರಾಗಿದ್ದೀರೆಂದು ಜನರಿಗೆಲ್ಲಾ ಹೇಳಿ ಏತಕ್ಕೆ ಮೋಸ ಮಾಡುತ್ತಿದ್ದೀರಿ. ಕರ್ನಾಟಕ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕಿನವರು ಸುಮಾರು ಏಳು ಕೋಟಿ ರೂಪಾಯಿಗಳನ್ನು ಸಾಲದ ರೂಪದಲ್ಲಿ ಗೇಣಿದಾರರಿಗೆ ಹಂಚುವರು ಎಂದು ಹೇಳುತ್ತಿದ್ದೀರಿ ಆದರೆ ಅನೇಕ ಗೇಣಿದಾರರೇ ಬ್ಯಾಂಕಿನಿಂದ ಸಾಲ ತೆಗೆದುಕೊಳ್ಳುವುದಕ್ಕೆ ಮುಂದೆ ಬರುತ್ತಿಲ್ಲ ಏತಕ್ಕೆ ಗೊತ್ತೆ ಪ್ರತಿ ಗೇಣಿದಾರನಿಗೆ ಎರಡು ಸಾವಿರ ರೂಪಾಯಿಗಳವರೆಗೆ ಸಾಲ ಕೊಡಲಾಗುತ್ತಿದೆ. ಸಾಲದ ಮೇಲೆ ವಿಧಿಸುವ ಬಡ್ಡಿ ದರವೆಷ್ಟೆಂಬುದು ತಮಗೆ ಗೊತ್ತೆ. ಹದಿನಾರು ಪರ್ಸೆಂಟ್ ಸಾಲ ಸಿಗಬೇಕಾದರೆ ಗೇಣಿದಾರ ಎಷ್ಟು ಸಲ ಬ್ಯಾಂಕ್‌ಗೆ ಓಡಾಡಬೇಕಾಗುತ್ತದೆ ಮತ್ತು ಅಲ್ಲಿನ ಅಧಿಕಾರಿಗಳಿಗೆ ಕೈ ಬೆಚ್ಚಗೆ ಮಾಡಬೇಕಾಗುತ್ತದೆಂಬುದು ತಮಗೆ ಗೊತ್ತೆ. ಇದನ್ನೆಲ್ಲ ಲೆಕ್ಕಾಚಾರ ಹಾಕಿ ಸಾಲವನ್ನು ಬ್ಯಾಂಕಿನಿಂದ ಪಡೆಯುವುದೇ ಬೇಡವೆಂದು ರೈತರು ಹೇಳುತ್ತಿದ್ದಾರೆ. ಇದರ ಜೊತೆಗೆ ಭೂ ಸುಧಾರಣೆಯ ಸೆಕ್ಷನ್ 44ರ ಪ್ರಕಾರ ಗೇಣಿದಾರ ಸರ್ಕಾರಕ್ಕೆ ಗೇಣಿಯನ್ನು ಕೊಡಬೇಕು ಇದೆಲ್ಲಾ ಏತಕ್ಕೆ ಸ್ವಾಮಿ ? ಇತ್ತ ಕಡೆ ಗೇಣಿದಾರ ಅಕ್ಯುಪೆನ್ಸಿ ಪ್ರೈಸ್ ಕಟ್ಟಬೇಕು. ಸರ್ಕಾರಕ್ಕೆ ಗೇಣಿ ಕೊಡಬೇಕು ಮತ್ತು ಅತ್ತ ಕಡೆ ಬ್ಯಾಂಕಿನಿಂದ ಸಾಲ ತೆಗೆದುಕೊಂಡರೆ ಅದಕ್ಕೆ ಬಡ್ಡಿ ಕೊಡಬೇಕು. ಇಷ್ಟೆಲ್ಲ ಕೊಟ್ಟು ಅವನು ಎಂದು ಒಡೆಯನಾಗುವನು? ಇದೆಲ್ಲಾ ಕನಸು, ಪ್ರಜಾಸತ್ತಾತ್ಮಕವಾಗಿ ಮಾಡುತ್ತಿರುವ ಒಂದು ತಂತ್ರ. ಗೇಣಿದಾರನಿಗೆ ಭೂ ಒಡೆತನ ಕೊಡುವ ಮನಸ್ಸು

ಸರ್ಕಾರಕ್ಕಿಲ್ಲ. ನಾನು ಮುಂಬಯಿ ಕರ್ನಾಟಕದಿಂದ ಬರುತ್ತಿರುವವನು. ಈಗಿನ ಪ್ರಧಾನ ಮಂತ್ರಿಗಳು ಆಗ ಅಲ್ಲಿ ಮುಖ್ಯಮಂತ್ರಿಗಳಾಗಿದ್ದರು. ಆ ಕಾಲದಲ್ಲಿ ಅಲ್ಲಿ ಗೇಣಿ ಶಾಸನ ಜಾರಿಗೆ ಬಂತು.

ಈ ಸರ್ಕಾರ ನಿಜವಾಗಲೂ ಗೇಣಿದಾರರ ಪರವಾಗಿದ್ದರೆ, ನಾಳೆ ಏಪ್ರಿಲ್ ಒಂದನೇ ತಾರೀಖಿನಿಂದ ಭೂ ನ್ಯಾಯಾಧೀಕರಣ ಮಂಡಳಿಗಳಲ್ಲಿ ಗೇಣಿದಾರರ ಪರವಾಗಿ ದರಖಾಸ್ತು ಇತ್ಯರ್ಥವಾದ್ದದ್ದು. ಅಕ್ಯುಪೆನ್ಸಿ ರೈಟ್ ಅನ್ನು ನ್ಯಾಯಾಧೀಕರಣ ಮಂಡಳಿಯ ತೀರ್ಮಾನದೊಂದಿಗೆ ಗೇಣಿದಾರರು ಹೊಂದಿರುವ ಮತ್ತು ಅವರೇ ಅಂದಿನಿಂದ ಭೂ ಒಡೆಯರು ಎಂದು ಘೋಷಣೆ ಮಾಡಬೇಕು. ಆದರೆ ಅದನ್ನಿವರು ಮಾಡುತ್ತಾ ಇಲ್ಲ. ಇವತ್ತು ಗೇಣಿದಾರನಿಗೆ ಹಂತ ಹಂತವಾಗಿ ಹಣ ಕಟ್ಟಿ ಒಡೆಯನಾಗಲು ಸಾಧ್ಯವಿಲ್ಲ. ಆದರೂ ಇಂತಹ ಒಂದು ಕಲಂ ಅನ್ನು ಸರ್ಕಾರದವರು ಏತಕ್ಕೆ ಇಟ್ಟುಕೊಂಡಿದ್ದಾರೆನ್ನುವುದು ನನಗೆ ಅರ್ಥವಾಗಿದೆ. ಇದರಲ್ಲಿ ರಾಜಕೀಯ ಉದ್ದೇಶವಿದೆ ಎಂದು ನಾನು ಸ್ಪಷ್ಟವಾಗಿ ಹೇಳಲೇಬೇಕಾಗಿದೆ. ಗೇಣಿದಾರನಿಗೆ ಭೂ ಒಡೆತನವನ್ನು ಕೊಟ್ಟು ಬಿಟ್ಟರೆ ಅವರು ಮುಂದೆ ನಮಗೆ ಮತ ಕೊಡುವರೋ ಇಲ್ಲವೋ ಎನ್ನುವ ಅನುಮಾನ ಇವರಿಗಿದೆ. ಆದುದರಿಂದ, ಅವರನ್ನು ಹಾಗೆ ಇಡೋಣವೆಂದು ಇವರು ಭಾವಿಸಿದ್ದಾರೆ. ನಿಮಗೆ ಒಡೆತನ ಕೊಡ್ತೀವಿ, ಕೊಡ್ತೀವಿ ಅಂತ ಇವರು ಹೇಳ್ತಾ ಇರುತ್ತಾರೆ. ಅವರು ಇವರಿಗೆ ಮತ ಕೊಡುತ್ತಾ ಕೊಡುತ್ತಾ ಇರುತ್ತಾರೆ.

**ಶ್ರೀ ಎಸ್.ಎಂ. ಯಾಹ್ಯಾ :** ನಿಮಗೇತಕ್ಕೆ ಅವರು ಮತ ಕೊಡುವುದಿಲ್ಲ ನೀವು ನಮಗಿಂತಾ ಒಂದು ಹೆಜ್ಜೆ ಮುಂದೆ ಹೋಗಿ ಹೇಳುತ್ತಿದ್ದೀರಿ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಈಗ ನಾವು ಹೇಳುತ್ತಿದ್ದೇವೆ. ಹಿಂದೆ ನಾವು ಹೀಗೆ ಹೇಳುತ್ತಿರಲಿಲ್ಲ. ನಿಮ್ಮ ಮಾತಿನ ಜಾಲ ನಮಗೆ ಗೊತ್ತಿಲ್ಲ. ಜನರನ್ನು ಮಂಕು ಮಾಡುವ ಸೂಕ್ಷ್ಮ ಬುದ್ಧಿ ನಿಮ್ಮಲ್ಲಿದೆ. ನಮ್ಮಲ್ಲಿಲ್ಲ.

**ಶ್ರೀ ಎಸ್.ಎಂ. ಯಾಹ್ಯಾ :** ಜನ ಮಂಕರಲ್ಲ ನಿಮಗಿಂತಲೂ ಜಾಣರಿದ್ದಾರೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ನೀವು ಅವರನ್ನು ಮಂಕು ಮಾಡುತ್ತಿದ್ದೀರಿ.

**ಶ್ರೀ ಜೆ.ಹೆಚ್. ಪಟೇಲ್ :** ಜನರು ಮಂಕರಲ್ಲ ಎನ್ನುವುದನ್ನು 1977ರ ಲೋಕಸಭಾ ಚುನಾವಣೆಯಲ್ಲಿ ತೋರಿಸಿರುವರಲ್ಲಾ.

**ಶ್ರೀ ಎಸ್.ಆರ್. ಬೊಮ್ಮಾಯಿ** : ಜಮೀನು ಇಲ್ಲದವರಿಗೆ ಜಮೀನು ಎಂದು ಇವರು ಹೇಳುತ್ತಿದ್ದಾರೆ. ಈ ರಾಜ್ಯದಲ್ಲಿ ಹರಿಜನರು ಎಷ್ಟಿದ್ದಾರೆನ್ನುವ ಸಂಖ್ಯೆ ಇವರಿಗೆ ಗೊತ್ತೆ, 1977–78ರ ಜನಗಣತಿ ಪ್ರಕಾರ ಈ ರಾಜ್ಯದಲ್ಲಿ ನಲವತ್ತು ನಾಲ್ಕು ಲಕ್ಷ ಹರಿಜನರಿದ್ದಾರೆ. ಭೂ ನ್ಯಾಯಾಧೀಕರಣ ಮಂಡಲಿಗಳಲ್ಲಿ ಎಲ್ಲಾ ಅರ್ಜಿಗಳನ್ನು ಇತ್ಯರ್ಥ ಮಾಡಿದ ಮೇಲೆ ನಾಲ್ಕು ಲಕ್ಷ ಎಕರೆ ಜಮೀನು ಉಳಿಯಲಿದೆ ಎಂದು ಇವರು ಆಶೆ ಇಟ್ಟುಕೊಂಡಿದ್ದಾರೆ, ಹಾಗಾದರೆ ನಲವತ್ತು ನಾಲ್ಕು ಲಕ್ಷ ಹರಿಜನರಿಗೆ ಮತ್ತು ಇತರ ಕೃಷಿ ಕಾರ್ಮಿಕರಿಗೆ ಎಲ್ಲಿಂದ ಭೂಮಿಯನ್ನು ಹಂಚುವಿರಿ ಇವರೆಲ್ಲರಿಗೂ ಜಮೀನು ಕೊಡುವ ವ್ಯವಸ್ಥೆಯನ್ನು ನೀವು ಮಾಡುವಿರಾ? ಇದನ್ನೆಲ್ಲ ಏತಕ್ಕೆ ಹೇಳುತ್ತಿದ್ದೇನೆ ಎಂದರೆ ಇವರು ಮಾಡಿರುವ ಭೂ ಸುಧಾರಣಾ ಕಾಯಿದೆಯಲ್ಲೊಂದು ಮೂಲದೋಷವಿದೆ. ಮುಖ್ಯವಾಗಿ ಅದನ್ನು ತಿದ್ದುಪಡಿಮಾಡದೆ ಹೋದರೆ ನಿಜವಾಗಿಯೂ ನಾವು ಅವರಿಗೆ ಜಮೀನನ್ನು ಹಂಚುವುದಕ್ಕಾಗುವುದಿಲ್ಲ. ಮತ್ತು ಹಂಚುವುದಕ್ಕೆ ಜಮೀನೂ ಸಹ ಉಳಿಯುವುದಿಲ್ಲ. ಹಿಂದೆ ಇದ್ದ ಕಾನೂನು ಪ್ರಗತಿಪರವಾಗಿರಲಿಲ್ಲವೆಂದು ಹೇಳುತ್ತಿದ್ದರು. ಅದರಲ್ಲಿ ಗರಿಷ್ಠ ಮಿತಿ ಒಂದು ಕುಟುಂಬಕ್ಕೆ 108 ಎಕರೆಗಳು ಆದರೆ ಈಗಿನ ಕಾನೂನು ಪ್ರಕಾರ ಮನೆಯಲ್ಲಿರುವ ಪ್ರತಿಯೊಬ್ಬ ವಯಸ್ಕನಿಗೂ ಐವತ್ತನಾಲ್ಕು ಎಕರೆ ಜಮೀನನ್ನು ಇಟ್ಟುಕೊಳ್ಳಲು ಅವಕಾಶ ಕೊಡಲಾಗಿದೆ. ಇದನ್ನು ಮಾನ್ಯ ಸಚಿವ ಶ್ರೀ ಬಂಗಾರಪ್ಪನವರು ಕೇಳಬೇಕು. ಏಕೆಂದರೆ ಅವರು ಇತ್ತಕಡೆ ಇದ್ದಾಗ ಈ ಬಗ್ಗೆ ಬಹಳವಾಗಿ ವಾದ ಮಾಡುತ್ತಿದ್ದರು. ಈಗ ತಾವು ಮಾಡಿರುವ ಕಾನೂನು ಪ್ರಕಾರ ಪ್ರತಿಯೊಬ್ಬ ವಯಸ್ಕನಿಗೂ ಐವತ್ತು ಎಕರೆ ಜಮೀನು ಇಟ್ಟುಕೊಳ್ಳಲು ಅವಕಾಶವಿರುವಾಗ ಒಂದು ಕುಟುಂಬದಲ್ಲಿ ಆರು ಜನ ವಯಸ್ಕ ಮಕ್ಕಳಿದ್ದರೆ ಅವರ ಕುಟುಂಬಕ್ಕೆ ಎಷ್ಟು ಜಮೀನು ಹೋಗುತ್ತದೆಂಬುದು ತಮಗೆ ಗೊತ್ತೆ. ಇಂದು ಒಟ್ಟು ಕುಟುಂಬದಲ್ಲಿ ಮೂರುನಾಲ್ಕು ಜನ ವಯಸ್ಕ ಮಕ್ಕಳಿದ್ದರೆ, ಪ್ರತಿ ವಯಸ್ಕನಿಗೆ ಐವತ್ತು ಎಕರೆ ಜಮೀನಿನಂತೆ ಎಷ್ಟು ಎಕರೆ ಜಮೀನು ಒಂದು ಕುಟುಂಬದಲ್ಲಿ ಉಳಿಯುತ್ತದೆಂಬುದು ತಮಗೆ ಗೊತ್ತೆ. ಇದು ಪ್ರಗತಿಪರವಾದ ಕಾನೂನೆ. ನಿಜವಾಗಲೂ ಹರಿಜನ ಗಿರಿಜನರಿಗೆ ಭೂಮಿಯನ್ನು ಕೊಡಬೇಕೆನ್ನುವ ಉದ್ದೇಶ ಸರ್ಕಾರಕ್ಕೆ ಇದ್ದಿದ್ದರೆ ಇಂತಹ ಕಾನೂನೊಂದನ್ನು ಮಾಡುತ್ತಿರಲಿಲ್ಲ. ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ, ಈ ಕಾನೂನು ಬಂದ ಮೇಲೆ ಅನೇಕ ಜನ ಭೂಮಾಲೀಕರು ಇದನ್ನು ಬಹಳ ಸಂತೋಷದಿಂದ ಸ್ವಾಗತ ಮಾಡಿದ್ದಾರೆ. ಅದರಲ್ಲೂ ಮನೆಯಲ್ಲಿ ಹೆಚ್ಚು ಮಕ್ಕಳಿದ್ದವರು ಇನ್ನು ಮತ್ತಷ್ಟು ಸಂತೋಷದಿಂದ ಸ್ವಾಗತ ಮಾಡಿದ್ದಾರೆ. ಆದುದರಿಂದ ಭೂಸುಧಾರಣೆ ಕಾಯಿದೆಯಲ್ಲಿರುವ ಈ ಮೂಲ ದೋಷವನ್ನು ತಿದ್ದುಪಡಿ ಮಾಡದೆ ಹೋದರೆ, ನೀವು ಹೇಳುವುದೆಲ್ಲಾ ಬರೀ ಘೋಷಣೆಯಾಗಿ

ಉಳಿಯುತ್ತದೆಯೇ ಹೊರತು ಬಡವರಿಗೆ ಜಮೀನು ಹಂಚುವುದಕ್ಕಾಗುವುದಿಲ್ಲ. ಕೊನೆಗೆ ಜಮೀನು ಉಳಿಯದೆ ಇದ್ದಬದ್ದ ಅರಣ್ಯವನ್ನು ಕಡಿದು ಅದನ್ನು ಸಾಗುವಳಿಗೆ ಕೊಡುವ ವ್ಯವಸ್ಥೆ ಮಾಡಬೇಕಾದೀತು. ಈ ವಿಚಾರವಾಗಿ ನನಗಿಂತಲು ಹೆಚ್ಚಾಗಿ ಶ್ರೀ ಜೆ.ಹೆಚ್. ಪಟೇಲರು ಮಾತನಾಡುವಾಗ ತಿಳಿಸುವರು. ಭೂಮಿ ಈ ದೇಶದ ಮೂಲ ಬಂಡವಾಳ, ಇದನ್ನು ಸರಿಯಾಗಿ ಜನರಿಗೆ ಹಂಚಿ ಅವರಿಗೆ ಯೋಗ್ಯ ಸಲಕರಣೆಗಳನ್ನು ಕೊಟ್ಟು ದೇಶದಲ್ಲಿ ಯಥೇಚ್ಛವಾಗಿರುವ ಮಾನವ ಶಕ್ತಿಯನ್ನು ಉಪಯೋಗಮಾಡಿಕೊಳ್ಳದೆ ಹೋದರೆ ಈ ರಾಷ್ಟ್ರಕ್ಕೆ ಉದ್ಧಾರವಿಲ್ಲ.

ರಾಷ್ಟ್ರದ ಮುಖ್ಯವಾದ ಸಂಪತ್ತು ಈ ರಾಜ್ಯದ ಮುಖ್ಯವಾದ ಸಂಪತ್ತು ಮಾನವಶಕ್ತಿ. ಈ ಮಾನವ ಶಕ್ತಿಯಾದ ಪ್ರತಿಯೊಬ್ಬ ಸದೃಢ ವಯಸ್ಕನಿಗೆ ಕೆಲಸ ಕೊಡತಕ್ಕ ಒಂದು ಕಾರ್ಯವನ್ನು ನಾವು ಮಾಡದೇಹೋದರೆ, ನಮ್ಮ ದೇಶದ ಆರ್ಥಿಕ ಸ್ಥಿತಿಯನ್ನು ಉದ್ಧಾರ ಮಾಡುವುದಕ್ಕಾಗುವುದಿಲ್ಲ. ಸರ್ಕಾರದವರೇ ಒದಗಿಸಿರುವ 1971ನೇ ಇಸವಿ ಅಂಕಿ ಸಂಖ್ಯೆಗಳ ಪ್ರಕಾರ ಬೇಸಾಯಗಾರರ ಸಂಖ್ಯೆ ಸುಮಾರು 40,52,879 ಬೇಸಾಯ ಕೂಲಿ ಕಾರ್ಮಿಕರು ಸುಮಾರು 27,17,537, ಇತರೇ ಹರಿಜನರು ಗಿರಿಜನರು ಬೇರೆ ಬೇರೆಯವರು ಇದ್ದಾರೆ. ಅಂದರೆ ಈ ರಾಜ್ಯದ ಸುಮಾರು ಅರ್ಧಕ್ಕಿಂತ ಹೆಚ್ಚು ಜನ ಇವತ್ತಿನ ದಿವಸ ಭೂಮಿಯನ್ನೇ ಅವಲಂಭಿಸಿದ್ದಾರೆ. ಭೂಮಿಯ ಮೇಲೆ ಅವಲಂಭಿಸಿದಂತ ಈ ರಾಜ್ಯದ ವಕ್ಕಲುತನದಲ್ಲಿ ನವೀಕರಣ ಒಂದು ಯಾಂತ್ರೀಕರಣ ಬರದೇ ಹೋದರೆ, ಆರ್ಥಿಕ ಉತ್ಪನ್ನ ಹೆಚ್ಚಾಗುವುದಿಲ್ಲ, ಇದರ ಜೊತೆಗೆ ಹಳ್ಳಿಯಲ್ಲಿರತಕ್ಕ ಗ್ರಾಮಾಂತರ ಪ್ರದೇಶದಲ್ಲಿರತಕ್ಕ ಬೇಸಾಯ ಕೂಲಿಗಾರರಿಗೆ ಕೈತುಂಬಾ ಕೆಲಸ ಕೊಡದೇ ಹೋದರೆ ಈ ರಾಜ್ಯದ ಉದ್ಧಾರ, ರಾಷ್ಟ್ರದ ಉದ್ಧಾರವಾಗುವುದಿಲ್ಲ. ಈ ವಿಚಾರದಲ್ಲಿ ಸರ್ಕಾರ ಯಾವ ರೀತಿಯ ಕಾರ್ಯಕ್ರಮ ಹಾಕಿಕೊಂಡಿದೆ? ಕಳೆದ 3 ವರ್ಷದಲ್ಲಿ ಏನು ಕೆಲಸ ಮಾಡಿದೆ? ನನಗೆ ಗೊತ್ತಿದೆ. ಕಳೆದ 23–28 ವರ್ಷಗಳಲ್ಲಿ ಈ ದೇಶದ ಅಭಿವೃದ್ಧಿಯಾಗಿದೆ. ಇಲ್ಲವೆಂದು ನಾನು ಹೇಳುವುದಿಲ್ಲ. ವಕ್ಕಲುತನ ಹುಟ್ಟುವಳಿಯಲ್ಲಿ ಹೆಚ್ಚುವರಿ ಆಗಿದೆ. ಔದ್ಯೋಗಿಕ ಉದ್ಯಮಗಳು ಬಂದಿವೆ. ಆದರೆ, ನಗರಗಳು ಬೆಳವಣಿಗೆಯಾಗಿವೆ, ಹಳ್ಳಿಗಳು ಮಾತ್ರ ಬೆಳವಣಿಗೆಯಾಗಿಲ್ಲ. ಇವತ್ತು ನಮ್ಮ ರಾಜ್ಯದಲ್ಲಿ ಜಮೀನಿನಲ್ಲಿ ಕೆಲಸ ಮಾಡತಕ್ಕ ಕೂಲಿಗಾರರಿಗೆ ಸಿಗತಕ್ಕ ಸಂಬಳ ಎಷ್ಟು? ಇಲ್ಲಿ ತಾವು ಸಂಖ್ಯೆ ಕೊಟ್ಟಿದ್ದೀರಿ, 2 ರೂ ನಿಂದ 3–50 ಪೈಸೆವರೆಗೆ ಕನಿಷ್ಠ ವೇತನ ಶಾಸನ ಪ್ರಕಾರ 5 ರೂಪಾಯಿ ಇದೆ, ಆದರೆ ಕೊಡತಕ್ಕದ್ದು ಬಹಳ ಕಡಿಮೆ, ಕಾಫಿ ಪ್ಲಾಂಟೇಷನ್ ಜಾಗಗಳಲ್ಲಿ, ರೇಷ್ಮೆ ಉದ್ಯೋಗ ಇರತಕ್ಕ ಜಾಗಗಳಲ್ಲಿ, ಪಟ್ಟಣಗಳಲ್ಲಿ ಪಬ್ಲಿಕ್ ಸೆಕ್ಟಾರ್‌ನಲ್ಲಿ ಕೆಲಸ ಮಾಡತಕ್ಕ ಒಬ್ಬ ಕೆಲಸಗಾರನ ದಿನದ ಸಂಬಳ

24 ರೂಪಾಯಿ 10 ಪೈಸೆಗಳು. ಅದೇ ರೀತಿ ಮತ್ತೊಂದು ಪಬ್ಲಿಕ್ ಸೆಕ್ಟಾರ್ ಇಂಡಸ್ಟ್ರೀಸ್‌ನಲ್ಲಿ ಕೆಲಸ ಮಾಡತಕ್ಕ ಕೆಲಸಗಾರನ ಒಂದು ದಿನದ ಸಂಬಳ 22 ರೂಪಾಯಿ 80 ಪೈಸೆಗಳು, ಅದೇ ಜಮೀನಿನಲ್ಲಿ ಕೆಲಸ ಮಾಡತಕ್ಕ ಬೇಸಾಯ ಕೂಲಿಗಾರನ ಒಂದು ದಿನದ ಉತ್ಪನ್ನ 3 ರೂಪಾಯಿ, ಹೆಣ್ಣು ಮಕ್ಕಳಿಗೆ 2 ರೂಪಾಯಿ, ಹುಡುಗರಿಗೆ 1 ರೂಪಾಯಿ 50 ಪೈಸೆಗಳು, ಇದನ್ನು ಬದಲಾವಣೆ ಮಾಡುವುದಕ್ಕೆ ಏನು ಪ್ರಯತ್ನ ಮಾಡಿದ್ದೀರಿ ಎಂದು ಕೇಳುತ್ತೇನೆ. ಕನಿಷ್ಠ ವೇತನ ಶಾಸನದ ಪ್ರಕಾರ ಗಂಡಸರಿಗೆ 5 ರೂಪಾಯಿ, ಹೆಣ್ಣುಮಕ್ಕಳಿಗೆ 4 ರೂಪಾಯಿ ವೇತನ ಕೊಡಬೇಕೆಂದು ಇದೆ, ವಾಸ್ತವ ಪರಿಸ್ಥಿತಿ ಕಾರ್ಯಾಚರಣೆಯಲ್ಲಿ ಇರತಕ್ಕದ್ದು ಏನು?

**ಶ್ರೀ ಡಿ. ದೇವರಾಜ ಅರಸ್** : ಧಾರವಾಡದ ಕಡೆ ಎಷ್ಟು ಕೊಡುತ್ತಿದ್ದೀರಿ?

**ಶ್ರೀ ಎಸ್.ಆರ್. ಬೊಮ್ಮಾಯಿ:** 4 ರೂಪಾಯಿ ಕೊಡುತ್ತಿದ್ದೇವೆ. ಸುಗ್ಗಿ ಕಾಲದಲ್ಲಿ 5 ರೂಪಾಯಿ ಕೊಡುತ್ತೇವೆ, ಮೊದಲಿನಿಂದಲೂ ಜೋಳ ಕೊಡತಕ್ಕಂಥ ಪದ್ಧತಿ ನಮ್ಮಲ್ಲಿ ಬಂದಿದೆ.

**ಶ್ರೀ ಡಿ. ದೇವರಾಜ ಅರಸ್:** ಎಷ್ಟು ಮಾಡೋಣ ಹೇಳಿ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಅದನ್ನು ಹೇಳುತ್ತೇನೆ. ಆದರೆ, ಇಲ್ಲಿ ಅಭಿವೃದ್ಧಿ ಏನಾಗಿದೆ? ವಕ್ಕಲುತನದ ಅಭಿವೃದ್ಧಿಯಲ್ಲಿ ಕೆಲವು ರೈತರುಗಳಿಗೆ ಲಾಭವಾಗಿರಬಹುದು. ಪಟ್ಟಣದ ಕಾರ್ಮಿಕರಿಗೆ ಉದ್ಯಮಗಳಿಗೆ, ಹಾಗೂ ವ್ಯಾಪಾರಸ್ಥರಿಗೆ ಲಾಭವಾಗಿರಬಹುದು. ಇವೊತ್ತು ಈ ರಾಜ್ಯದಲ್ಲಿ ಬಡತನ ಹೋಗಬೇಕಾದರೆ ಒಂದು ಆರ್ಥಿಕವಾದಂಥ, ಸುಸಂಪನ್ನವಾದಂತ ಸಮಾಜವನ್ನು ನಿರ್ಮಾಣ ಮಾಡಬೇಕಾದರೆ ವಕ್ಕಲುತನಕ್ಕೆ ಹೆಚ್ಚು ಗಮನ ಕೊಡಬೇಕು. ಹಾಗೆ ಗಮನ ಕೊಡುವಾಗ ಬೇಸಾಯ ಕೂಲಿಗಾರರ ಬಗ್ಗೆ ಎಚ್ಚರ ವಹಿಸಬೇಕೆಂದು ಹೇಳುತ್ತೇನೆ. ತಾವು ಹೇಳಬಹುದು ಭೂ ಸುಧಾರಣ ಕಾನೂನನ್ನು ಜಾರಿಗೆ ತಂದಿದ್ದೇವೆಂದು, ಇವೊತ್ತು ಸಾವಿರಾರು ಮಂದಿ ಗೇಣಿದಾರರು ಭೂಮಿಯ ಒಡೆಯರಾಗಿಲ್ಲ, ಇಲ್ಲಿ ಪರಿಹಾರ ಕೊಡುವುದು ಬಿಡುವುದು ಪ್ರಶ್ನೆಯಲ್ಲ, ಗೇಣಿದಾರನನ್ನು ಭೂಮಿಯ ಒಡೆಯನನ್ನಾಗಿ ಮಾಡಬೇಕು. ಇವೊತ್ತು ಗೇಣಿದಾರ ಕಂದಾಯದ 150 ಪಟ್ಟು ಹಣ ಕಟ್ಟದ ಹೊರತು ಭೂಮಿಯ ಒಡೆಯನಾಗುವುದಕ್ಕಾಗುವುದಿಲ್ಲ, ನಾನು ಅದರ ಬಗ್ಗೆ ವಿವರವಾಗಿ ಹೇಳುವುದಕ್ಕೆ ಇಚ್ಛೆ ಪಡುವುದಿಲ್ಲ.

**ಶ್ರೀ ದೇವರಾಜ ಅರಸ್:** ನೀವು ಸತ್ತ ಕುದುರೆಯನ್ನು ಹೊಡೆಯುತ್ತಿದ್ದೀರ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಸಣ್ಣ ರೈತರಿಗೆ ಹಾಗೂ ಮಧ್ಯಮ ವರ್ಗದ ರೈತರಿಗೆ ಆರ್ಥಿಕವಾಗಿ ಸಹಾಯ ಕೊಡತಕ್ಕ ವ್ಯವಸ್ಥೆ ಆಗಬೇಕು. ಇವೊತ್ತು ರೈತರ ಸ್ಥಿತಿ ಏನಾಗಿದೆ? ರೈತ ಬೆಳೆಯತಕ್ಕ ಧಾರಣೆ ಬೆಲೆ ಯಾವ ಮಟ್ಟದಲ್ಲಿದೆ. ಮೊದಲು ಯಾವ ರೀತಿ ಇತ್ತು. ಇವೊತ್ತಿನ ಪರಿಸ್ಥಿತಿ ಹೇಗಿದೆ ?

ಈಗ ರೈಸ್ 3.357, 1974ರಲ್ಲಿ 456.07, 1975 ರಲ್ಲಿ 486–27, 1976ರಲ್ಲಿ 384.68, ವೀಟ್ 1974ರಲ್ಲಿ 284.67, 1975 ರಲ್ಲಿ 328.00, 1976ರಲ್ಲಿ 228.68 ಜೋಳ, ರಾಗಿ ಇವುಗಳ ಬೆಲೆ ಅರ್ಧದಷ್ಟು ಕಡಿಮೆಯಾಗಿದೆ. 1974ರಲ್ಲಿ ಇದ್ದಂತಹ ಒಂದು ಬೆಲೆ ಈ ಆಹಾರ ಧಾನ್ಯಗಳ ಬೆಲೆಗಳು ಬಿದ್ದು ಹೋಗಿ ಅದರ ಅಂಕಿ ಅಂಶಗಳನ್ನು ಸರ್ಕಾರದವರೇ ಪ್ರಕಟಣೆ ಮಾಡಿದ್ದಾರೆ. ನಮ್ಮ ಕಡೆ ಚಕ್ಕಡಿ ಎಂದು ಹೇಳುತ್ತೇವೆ. ಈರುಳ್ಳಿ ತೆಗೆದುಕೊಂಡು ಬಂದರೆ ಅವನಿಗೆ ಸಿಕ್ಕತಕ್ಕದ್ದು. 25–30 ರೂಪಾಯಿ ಈ ರೀತಿ ಬೆಲೆ ಕಡಿಮೆಯಾದಾಗ ರೈತನನ್ನು ಉಳಿಸಲಿಕ್ಕೆ ರಾಜ್ಯ ಸರ್ಕಾರ ಏನು ಮಾಡಿದೆ ಅನ್ನುವುದೇ ನನ್ನ ಮುಂದೆ ಇರತಕ್ಕ ಮುಖ್ಯ ಪ್ರಶ್ನೆ. ಸರ್ಕಾರ ಕೊಡತಕ್ಕ ಸಪೋರ್ಟ್ ಪ್ರೈಸ್‌ನಲ್ಲಿ 510 ಕೋಟಿ ರೂಪಾಯಿ ಹಣ ಕಳೆದುಕೊಳ್ಳುತ್ತಿದ್ದಾನೆ. ಕಬ್ಬು ಬೆಳೆದಂತಾದ್ದು ಆಗಲಿ ಮೆಣಸಿನಕಾಯಿ ಬೆಳೆದಂತಾದ್ದು ಆಗಲಿ ಇವೊತ್ತು ಕರ್ನಾಟಕ ರೈತ ಸುಮಾರು 1,000 ಕೋಟಿ ರೂಪಾಯಿ ಹಣದ ಹಾನಿಗೊಳಗಾಗಿದ್ದಾನೆ. ಇವೊತ್ತು ಸಾವಿರಾರು ಕೋಟಿ ರೂಪಾಯಿ ಕಳೆದುಕೊಂಡಿರತಕ್ಕಂತಹ ರೈತರಿಗೆ ಸರ್ಕಾರದಿಂದ ಯಾವ ರೀತಿಯ ಸಹಾಯ ಮಾಡಿದ್ದೀರಾ? ರೈತರು ಕೊಡತಕ್ಕಂತಹದ್ದು ಕಡಿಮೆ ಬೆಲೆ ಇದೆ. ಅವರು ಕೊಳ್ಳತಕ್ಕಂತಹದ್ದು ಮಾತ್ರ ಜಾಸ್ತಿ ಬೆಲೆ ಇದೆ. ಹತ್ತಿ ಬೆಲೆ ಮಾತ್ರ ಕಡಿಮೆ ಇದೆ. ಆದರೆ ಬಟ್ಟೆ ಬೆಲೆ ಮಾತ್ರ ಕಡಿಮೆಯಾಗಲಿಲ್ಲ. ಅವನಿಗೆ ಬೇಕಾಗತಕ್ಕಂತಹ ಸಿಮೆಂಟ್ ಆಗಲಿ, ಸೀಮೆಎಣ್ಣೆ ಆಗಲಿ ಇತರ ಯಾವುದೇ ವಸ್ತುಗಳ ಬೆಲೆಯೂ ಕೂಡ ಕಡಿಮೆಯಾಗಿಲ್ಲ. ಇನ್ನು ತಾವು ಈ ಸಪೋರ್ಟ್ ಪ್ರೈಸ್ ವಿಚಾರ ಹೇಳಿದ್ದೀರಿ. ಇದರ ಅಂಕಿಅಂಶ ನನಗೆ ಬೇಕು. ಏಕೆಂದರೆ ಎಷ್ಟು ಜನ ರೈತರಿಂದ ಎಷ್ಟು ಕ್ವಿಂಟಾಲ್ ರಾಗಿ, ಜೋಳ ಖರೀದಿ ಮಾಡಿದ್ದೀರಾ ಅದರ ಬಗ್ಗೆ ಏನು ಹೇಳಿಲ್ಲ. ಈಗಾಗಲೇ ತಮ್ಮ ಹತ್ತಿರ ಎರಡು ಲಕ್ಷ ಟನ್ ಸ್ಟಾಕ್ ಇದೆ. ಇರುವುದರಿಂದ ಅದನ್ನೇ ಪಬ್ಲಿಕ್‌ಗೆ ಡಿಸ್ಟ್ರಿಬ್ಯೂಷನ್ ಮಾಡಲಿಕ್ಕೆ ಸಾಧ್ಯವಿದೆ. ಆದುದರಿಂದ ಇನ್ನು ಹೆಚ್ಚು ಕೊಳ್ಳತಕ್ಕ ಮನಸ್ಸು ಸರ್ಕಾರಕ್ಕೆ ಇಲ್ಲ. ಏಕೆಂದರೆ ಇದನ್ನು ನಾನು ಸ್ವಂತ

ಅನುಭವದಿಂದ ಹೇಳುತ್ತಾ ಇದ್ದೇನೆ. ಹಳ್ಳಿಯ ಲೆವೆಲ್‌ನಲ್ಲಿಯಾಗಲಿ, ತಾಲ್ಲೂಕು ಲೆವೆಲ್‌ನಲ್ಲಿಯಾಗಲಿ ಈವನ್ ಲೆವಿ ಪ್ಯಾಡಿ ಮಾಡಿಕೊಳ್ಳತಕ್ಕ ಸ್ಥಿತಿಯಲ್ಲಿ ತಹಶೀಲ್ದಾರರು ಇಲ್ಲ. ಒಂದೊಂದು ತಾಲ್ಲೂಕಿನಲ್ಲಿ ಸಾವಿರಾರು ಜನ ರೈತರು ಭತ್ತ ತೆಗೆದುಕೊಂಡು ಬಂದು ಮೂರು ನಾಲ್ಕು ದಿವಸ ಕಛೇರಿ ಮುಂದೆ ಕುಳಿತು ವಾಪಸ್ಸು ಹೋಗಿದ್ದಾರೆ. ಇನ್ನು ಹೈಬ್ರಿಡ್ ಜೋಳ ಒಂದು ಕ್ವಿಂಟಾಲ್ ಕೂಡಾ ಪರ್ಚೇಸ್ ಮಾಡಿಲ್ಲ. ರೈತರನ್ನು ಉಳಿಸಲಿಕ್ಕೆ ಸರ್ಕಾರ ಎಷ್ಟು ಖರೀದಿ ಮಾಡಿದ್ದಾರೆ ಎಂದು ತಿಳಿಸಬೇಕು. ಇವೊತ್ತು ರೈತ ಏನಾದರೂ ಮುಳುಗಿ ಹೋದ ಅಂದರೆ ದೇಶ ಮುಳುಗಿ ಹೋಗುತ್ತದೆ ಎಂದು ನನ್ನ ಭಾವನೆ. ಇವೊತ್ತು ರೈತ ಅಂದರೆ ಜಮೀನಿನ ಒಡೆಯನೇ ಅಲ್ಲ. ಇವೊತ್ತು ರೈತರ ಒಂದು ಆರ್ಥಿಕ ಸ್ಥಿತಿಯ ಮೇಲೆ ಇಡೀ ಗ್ರಾಮದಲ್ಲಿರತಕ್ಕ ಪ್ರತಿಯೊಬ್ಬ ಕಾರ್ಮಿಕನ ಅಥವಾ ನಾಗರಿಕನ ಭವಿಷ್ಯ ಅವಲಂಬಿಸಿರುತ್ತದೆ. ನಮ್ಮ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಬೇಕಾದರೆ ರೈತರ ಪರಿಸ್ಥಿತಿ ಉತ್ತಮಗೊಳ್ಳಬೇಕು. ರೈತನಿಂದ ಸಮನಾದ ಪಾಲು ಕಾರ್ಮಿಕರಿಗೆ ಸಿಕ್ಕಬೇಕು. ದೊಡ್ಡ ರೈತರಿಗೆ ಹಂಚಿಹಾಕುವ ವ್ಯವಸ್ಥೆ ಆಗಬಾರದು. ಅದರಲ್ಲಿ ಚಿಕ್ಕ ರೈತರಿಗೂ ಅನುಕೂಲವಾಗಬೇಕು. ಆದುದರಿಂದ ರೈತರಿಗೆ ಪ್ರತಿಯೊಂದರಲ್ಲೂ ಒಂದು ಯೋಗ್ಯವಾದ ಬೆಲೆಯನ್ನು ನಿಗದಿ ಮಾಡುವ ವ್ಯವಸ್ಥೆ ಮಾಡಬೇಕು. ಇವೊತ್ತು ಸಣ್ಣ ಕೈಗಾರಿಕೆ ನಡೆಸುವ ಒಬ್ಬ ಒಡೆಯ, ದೊಡ್ಡ ಕೈಗಾರಿಕೆ ನಡೆಸುವ ಒಡೆಯ ತನ್ನ ಕಾರ್ಖಾನೆಯಲ್ಲಿ ತಯಾರಾಗತಕ್ಕ ವಸ್ತುವಿನ ಬೆಲೆಯನ್ನು ನಿಗದಿ ಮಾಡುತ್ತಾನೆ. ಅವನು ಬಂಡವಾಳದಲ್ಲಿ ಎಷ್ಟು ಹಣ ಹಾಕಿದ್ದಾನೆ. ಕಾರ್ಮಿಕರಿಗೆ ಕೊಡತಕ್ಕ ಸಂಬಳ, ತನ್ನ ಲಾಭ, ಬ್ಯಾಂಕಿಗೆ ಕೊಡತಕ್ಕ ಬಡ್ಡಿ, ಇವೆಲ್ಲವನ್ನು ಲೆಕ್ಕಾಚಾರ ಮಾಡಿ ಒಂದು ಮೀಟರ್ ಬಟ್ಟೆಗೆ 5 ಅಥವಾ 6 ರೂಪಾಯಿ ಬೆಲೆ ನಿಗದಿ ಮಾಡುವ ಹಕ್ಕು ಇರುತ್ತದೆ. ರೈತ ಸಾಲ ತೆಗೆದುಕೊಂಡು ಕಷ್ಟಪಟ್ಟು ಬೇಸಾಯ ಮಾಡುತ್ತಾನೆ. ಆದರೆ ಅವನ ಬೇಸಾಯ ಅನಿಶ್ಚಿತ, ಏಕೆಂದರೆ ಮಳೆ ಬಂದು ಸರಿಯಾದ ಹವಾಮಾನ ಇದ್ದರೆ ಅವನಿಗೆ ಬೆಳೆ ಕೈಸೇರುತ್ತದೆ, ಇಲ್ಲದೇ ಹೋದರೆ ಅವನಿಗೆ ಬೆಳೆ ಕೈ ಸೇರುವುದಿಲ್ಲ. ಇಂತಹ ಅನಿಶ್ಚಿತ ಪರಿಸ್ಥಿತಿಯಲ್ಲಿ ಇರತಕ್ಕ ರೈತರು ಶ್ರಮಪಟ್ಟು ಬೆಳೆದಿದ್ದಕ್ಕೆ ಒಂದು ನಿಗದಿಯಾದ ಬೆಲೆ ಇಲ್ಲದಿದ್ದರೆ ಅವನ ಜೀವನ ಯಾವ ರೀತಿ ಉದ್ಧಾರವಾಗುತ್ತದೆ, ಅವನು ಯಾವಾಗ ಪೇಟೆ ಧಾರಣೆ ಏನಾಗುತ್ತದೋ ಎನ್ನುವ ಚಿಂತೆಯಲ್ಲಿಯೇ ಮುಪ್ಪಾಗುತ್ತಾನೆ. ಆದುದರಿಂದ ರೈತರು ಬೆಳೆಯತಕ್ಕ ಆಹಾರ ಪದಾರ್ಥಗಳಿಗೆ ಸರಿಯಾದ ಬೆಲೆಯನ್ನು ನಿಗದಿ ಮಾಡಬೇಕು. ಅದರ ಬಗ್ಗೆ ಯಾವ ರೀತಿ ಮಾಡಬೇಕು ಎಂದು ಅನೇಕ ರೀತಿಯಲ್ಲಿ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರದಲ್ಲಿ ಚರ್ಚೆಯಾಗಿದೆ. ಅದರ ವಿವರಗಳನ್ನು ನಾನು ಹೇಳುವುದಕ್ಕೆ ಹೋಗುವುದಿಲ್ಲ. ಇವೊತ್ತು ರೈತ ಬೆಳೆದಂತಾದ್ದು

ಖರ್ಚು ಹೋಗಿ ಅವನ ಜೊತೆಯಲ್ಲಿ ಕೆಲಸ ಮಾಡಿದಂತಹ ಕಾರ್ಮಿಕನಿಗೂ ಸರಿಯಾದಂತಹ ರೀತಿಯಲ್ಲಿ ಅನುಕೂಲವಾಗುವಂತಹ ವ್ಯವಸ್ಥೆ ಮಾಡಬೇಕು. ಇದೆಲ್ಲಾ ಸರಿಹೋಗಬೇಕಾದರೆ ಮೊದಲನೆಯದಾಗಿ ಪ್ಯಾರಿಟಿ ಪ್ರೈಸ್ ನಿಗದಿ ಮಾಡಬೇಕು ಎಂದು ಹೇಳುತ್ತೇನೆ.

ಇನ್ನೂ ಎರಡನೆಯದಾಗಿ ಹೇಳುವುದಾದರೆ ಗ್ರಾಮಾಂತರ ಪ್ರದೇಶಗಳಲ್ಲಿ ಸುಮಾರು 10 ಮೈಲಿಯೊಳಗೆ ಒಂದೊಂದರಂತೆ ಉಗ್ರಾಣಗಳಿರಬೇಕು. ಇಲ್ಲಿ ಯಾವ ರೈತನೇ ಆಗಲಿ ತಾನು ಬೆಳೆದ ಮಾಲನ್ನು ತಂದು ಇಡುವುದಕ್ಕೆ ಅವಕಾಶ ಇರಬೇಕು. ಅವನ ಮಾಲಿಗೆ ಶೇಕಡ 7ರಷ್ಟು ಹಣವನ್ನು ಕೂಡಲೇ ಕೊಡುವಂತಿರಬೇಕು. ತಾವು ಇದಕ್ಕೆ ಗ್ರಾಮ ಕೇಂದ್ರವೆಂದು ಬೇಕಾದರೂ ಕರೆಯಿರಿ, ಅಥವಾ ಅಭಿವೃದ್ಧಿ ಕೇಂದ್ರವೆಂದು ಬೇಕಾದರೂ ಕರೆಯಿರಿ. ಒಟ್ಟಿನಲ್ಲಿ ಅಲ್ಲಿ ರೈತನು ತರತಕ್ಕ ಮಾಲನ್ನು ಇಡಿಸಿಕೊಳ್ಳುವ ವ್ಯವಸ್ಥೆ ಆ ಮಾಲಿಗೆ ಶೇಕಡ 75ರಷ್ಟು ಹಣವನ್ನು ಕೊಡುವ ವ್ಯವಸ್ಥೆ ಹಾಗೂ ಯೋಗ್ಯ ಬೆಲೆ ಬಂದಾಗ ಆ ಮಾಲನ್ನು ಮಾರಾಟಮಾಡುವ ವ್ಯವಸ್ಥೆ ಈ ಮೂರನ್ನು ಸರ್ಕಾರದವರು ಮಾಡಬೇಕು. ಈ ವ್ಯವಸ್ಥೆಯನ್ನು ಸರ್ಕಾರ ಎಲ್ಲಿಯವರೆಗೆ ಮಾಡುವುದಿಲ್ಲ ಅಲ್ಲಿಯವರೆಗೆ ಈ ರೈತ ಉದ್ಧಾರವಾಗುವುದಿಲ್ಲ ನಾನು ಈ ಮಾತನ್ನು ಹೇಳಲು ಕಾರಣವಾದರೂ ಇಷ್ಟೆ. ಸಣ್ಣ ರೈತರು ತಮ್ಮಲ್ಲಿ ಹಣವಿಲ್ಲದಾಗ ತಮ್ಮಲ್ಲಿರತಕ್ಕ ಮಾಲನ್ನು ವ್ಯಾಪಾರಗಾರರಿಗೆ ಮಾರಾಟ ಮಾಡಿಬಿಡುತ್ತಾರೆ. ಅದು ಮಾರಾಟವಾಗಿ ಬೆಲೆ ಜಾಸ್ತಿಯಾದಾಗ ಆ ದುಡ್ಡು ವ್ಯಾಪಾರಿಗೆ ಹೋಗುತ್ತದೆಯೇ ಹೊರತು ರೈತನಿಗೆ ಬರುವುದಿಲ್ಲ.

ಮಾನ್ಯ ಅಧ್ಯಕ್ಷರೆ, ಇಷ್ಟೆ ಅಲ್ಲದೆ ರೈತನಿಗೆ ಅವಶ್ಯಕವಾಗಿ ಬೇಕಾಗತಕ್ಕ ವ್ಯವಸಾಯೋಪಕರಣಗಳು ಔಷಧಿ, ಬಟ್ಟೆ, ಸೀಮೆಎಣ್ಣೆ, ಸೋಪು ಇತ್ಯಾದಿಗಳೂ ಕೂಡ ಆ ಕೇಂದ್ರದಲ್ಲಿ ಸಿಕ್ಕುವಂತೆ ವ್ಯವಸ್ಥೆ ಮಾಡಬೇಕು. ಏಕೆಂದರೆ ಅವನು ಪ್ರತಿಯೊಂದಕ್ಕೂ ಅಲೆಯುವುದು ತಪ್ಪಬೇಕು. ನಾನು ಆಗಲೇ ಹೇಳಿದಂತೆ ಈ ಕೇಂದ್ರಕ್ಕೆ ಅಭಿವೃದ್ಧಿ ಕೇಂದ್ರವೆಂದಾದರೂ ಕರೆಯಿರಿ. ಗ್ರಾಮ ಕೇಂದ್ರವೆಂದಾದರೂ ಕರೆಯಿರಿ, ಅಥವಾ ಭಾಗ್ಯಜ್ಯೋತಿ ಕೇಂದ್ರವೆಂದಾದರೂ ಕರೆಯಿರಿ. ಒಟ್ಟಿನಲ್ಲಿ ಇಂದು ಒಂದು ಉಗ್ರಾಣದ ವ್ಯವಸ್ಥೆ ಮೊದಲು ಆಗಬೇಕು. ಇನ್ನು ಮೂರನೆಯದಾಗಿ ಹೇಳುವುದಾದರೆ ರೈತನಿಗೆ ಅವಶ್ಯಕವಾಗಿ ಬೇಕಾಗಿರತಕ್ಕ ಸಾಲದ ವ್ಯವಸ್ಥೆ ಸಕಾಲದಲ್ಲಿ ಹಾಗೂ ಸುಲಭದಲ್ಲಿ ದೊರೆಯಬೇಕು. ಅದೂ ಕೂಡ ಆ ಕೇಂದ್ರದಲ್ಲೇ ಇರಬೇಕು. ನಾನು ಇದನ್ನು ಏತಕ್ಕೆ ಹೇಳುತ್ತಿದ್ದೇನೆ ಎಂದರೆ ಸರ್ಕಾರಿ ಸೊಸೈಟಿಗಳ ಮೂಲಕ ರೈತನಿಗೆ ಸಾಲದ ವ್ಯವಸ್ಥೆ ಮಾಡಿದ್ದೇವೆಂದು ಹೇಳುತ್ತೀರಿ. ಅಲ್ಲಿ ಹೋಗಿ ನೋಡಿದರೆ ನೂರಕ್ಕೆ 70ರಷ್ಟು ಕೂಡ ಅದರ ಲಾಭವನ್ನು ರೈತ ಪಡೆದುಕೊಳ್ಳುವುದಕ್ಕಾಗುತ್ತಿಲ್ಲ.

ಇದಕ್ಕೆ ಕಾರಣ ಆ ಸೊಸೈಟಿಗಳಲ್ಲಿರತಕ್ಕ ಲಂಚಗುಳಿತನ, ಅವ್ಯವಸ್ಥೆ, ದುರಾಡಳಿತ ಇನ್ನೂ ಮುಂತಾದ್ದು, ರೈತ ಸಾಲಕ್ಕೆ ಅರ್ಜಿ ಹಾಕಬೇಕಾದರೆ ಒಂದು ಪತ್ರವನ್ನು ತಯಾರು ಮಾಡಬೇಕು. ಅದಕ್ಕೆ ಹಕ್ಕಿನ ಪತ್ರ ಹಾಕಬೇಕು. ಅದನ್ನು ತರಬೇಕಾದರೆ ಎಷ್ಟು ಕಷ್ಟವಿದೆ ಎಂಬುದು ತಮಗೂ ಗೊತ್ತಿದೆ. ಕಾರ್ಯದರ್ಶಿಗೆ ಕಾಸು ಕೊಡದಿದ್ದರೆ ಯಾವ ಕೆಲಸವೂ ಆಗುವುದಿಲ್ಲ, ಪ್ರತಿವರ್ಷವೂ ಈ ಪತ್ರವನ್ನು ತಯಾರು ಮಾಡಬೇಕಾಗುತ್ತದೆ. ಅದೂ ಅಲ್ಲದೆ ರೈತ ಇಷ್ಟೆಲ್ಲಾ ದುಡ್ಡು ಖರ್ಚು ಮಾಡಿ ಪತ್ರ ತಯಾರಿಸಿದರೂ ಆ ಸಾಲಿನ ಸೌಲಭ್ಯ ಆತನಿಗೆ ಸಕಾಲದಲ್ಲಿ ಸಿಕ್ಕುವುದಿಲ್ಲ. ಅನೇಕ ಲೇವಾದೇವಿಗಾರರು ಅವನಿಗೆ ದುಡ್ಡು ಕೊಟ್ಟಿದ್ದು ಅವನ ಸಾಲ ಬಂದ ಮೇಲೆ ಬಡ್ಡಿ ಸಮೇತ ಅದನ್ನು ತೆಗೆದುಕೊಳ್ಳುತ್ತಾರೆ. ಆದ್ದರಿಂದ ಈ ಸಂದರ್ಭದಲ್ಲಿ ಒಂದು ಮಾತು ಹೇಳುವುದಾದರೆ, ಸರ್ಕಾರದವರು ಕೈಗಾರಿಕೋದ್ಯಮಿಗಳಿಗೆ ಯಾವ ರೀತಿ ಸಾಲದ ವ್ಯವಸ್ಥೆ ಮಾಡಿದ್ದಾರೋ ಅದೇ ರೀತಿ ಸಣ್ಣ ರೈತ ಅಂದರೆ 5–10 ಎಕರೆ ಜಮೀನು ಇಟ್ಟುಕೊಂಡಿರತಕ್ಕವನಿಗೂ ಕೂಡ ಇಂತಿಷ್ಟು ಸಾಲವನ್ನು ಸಹಕಾರ ಸಂಘದವರಾಗಲಿ, ಅಥವಾ ಬ್ಯಾಂಕ್‌ಗಳಾಗಲೀ ಕೊಡಬೇಕೆಂದು ಒಂದು ನಿಗದಿ ಮಾಡಿ, ಆತನಿಗೆ ಒಂದು ಪಾಸ್ ಬುಕ್ ಅನ್ನು ಕೊಡಿ ಆ ರೈತ ತನಗೆ ಅಗತ್ಯ ಬಿದ್ದಾಗ ತನಗೆ ಬೇಕಾದ ಬೀಜ, ಗೊಬ್ಬರ, ಔಷಧಿ, ಬಟ್ಟೆ ಮುಂತಾದವುಗಳನ್ನು ತೆಗೆದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಆದರೆ ಈ ರೀತಿ ಪ್ರತಿವರ್ಷವು ಸಾಲಕ್ಕಾಗಿ ಅರ್ಜಿ ಹಾಕುವುದಾಗಲಿ ಅದಕ್ಕೆ ಹಕ್ಕುಪತ್ರವನ್ನು ಒದಗಿಸುವ ಪದ್ಧತಿಯನ್ನಾಗಲೀ ವಿಧಿಸುವುದು ಸರಿಯಲ್ಲ. ತಾವು ಈ ನೀತಿಯನ್ನು ಅನುಸರಿಸಿದರೆ ಸೊಸೈಟಿಯ ಕಾರ್ಯದರ್ಶಿಗೆ ಲಂಚಕೊಡುವುದು, ಬ್ಯಾಂಕ್‌ಗಳಿಗೆ ಅಲೆಯುವುದು ತಪ್ಪುತ್ತದೆ. ತಾವು ಇನ್ನೂ ಒಂದು ಕೆಲಸ ಮಾಡುವುದಾದರೆ ರೈತನಿಗೆ ಗೊಬ್ಬರಕ್ಕಾಗಿ ಔಷಧಿಗಾಗಿ ದುಡ್ಡನ್ನು ಕೊಡುವ ಬದಲು ಗೊಬ್ಬರ ಔಷಧಿ ಇವುಗಳನ್ನೇ ಕೊಟ್ಟರೆ ಇನ್ನೂ ಹೆಚ್ಚಿನ ಸಹಾಯ ಮಾಡಿದಂತಾಗುತ್ತದೆ. ಈ ಒಂದು ಪದ್ಧತಿಯನ್ನು ಕೆಲವು ಸ್ಟೇಟ್ ಬ್ಯಾಂಕ್ ಹಾಗೂ ರಿಜರ್ವ್ ಬ್ಯಾಂಕ್‌ನವರು ತಮ್ಮ ಕೆಲವು ಬ್ರಾಂಚ್‌ಗಳಲ್ಲಿ ಅನುಸರಿಸಲು ಒಪ್ಪಿಗೆಯನ್ನು ಕೊಟ್ಟಿದ್ದಾರೆಂದು ತಿಳಿದುಬಂದಿದೆ. ಒಂದು ವೇಳೆ ಇದರ ಬಗ್ಗೆ ರಿಜರ್ವ್ ಬ್ಯಾಂಕ್‌ನವರ ಕಟ್ಟಳೆಗಳೇನಾದರು ಇದ್ದರೆ ಅವುಗಳನ್ನು ಬದಲಾವಣೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಮಾನ್ಯ ಸಭಾಧ್ಯಕ್ಷರೆ ಇಲ್ಲಿ ಒಂದು ಮಾತನ್ನು ಹೆಮ್ಮೆಯಿಂದ ಹೇಳಬಯಸುವುದೇನೆಂದರೆ ಕೇಂದ್ರದಲ್ಲಿ ಚೌದರಿ ಚರಣಸಿಂಗ್‌ರವರು ಅರ್ಥಮಂತ್ರಿಗಳಾಗಿ ಬಂದ ಮೇಲೆ ಆರ್ಥಿಕ ನೀತಿಯಲ್ಲಿ ಬದಲಾವಣೆ ಮಾಡಿ ನೂರಕ್ಕೆ 40 ಭಾಗದಷ್ಟು ಹಣವನ್ನು ಗ್ರಾಮಾಂತರ ಪ್ರದೇಶದ ಅಭಿವೃದ್ಧಿಗಾಗಿ

ಇಡತಕ್ಕ ವ್ಯವಸ್ಥೆ ಮಾಡಿದ್ದಾರೆ. ಇದನ್ನು ಮಾನ್ಯ ಮುಖ್ಯಮಂತ್ರಿಯವರೂ ಸ್ವಾಗತ ಮಾಡಿದ್ದಾರೆ. ಅವರ ಸ್ವಾಗತಕ್ಕೆ ನನ್ನ ಅಭಿನಂದನೆಯನ್ನು ಸಲ್ಲಿಸಿದ್ದೇನೆ.

ಇನ್ನು ನಾಲ್ಕನೆಯದಾಗಿ ಹೇಳುವುದಾದರೆ, ಸಣ್ಣ ಕೈಗಾರಿಕೋದ್ಯಮಿಗಳಿಗೆ ಕೊಡುತ್ತಿರುವಂತೆ 6 ಪರ್ಸೆಂಟ್ 8 ಪರ್ಸೆಂಟ್‌ನಂತೆ ಸಣ್ಣ ರೈತರಿಗೂ ಕಡಿಮೆ ಬಡ್ಡಿ ದರದಲ್ಲಿ ಸಾಲವನ್ನು ಒದಗಿಸಿಕೊಡಬೇಕು. ಆದರೆ, ನಾನು ದೊಡ್ಡ ದೊಡ್ಡ ರೈತರಿಗೆ ಈ ಅವಕಾಶವನ್ನು ಕಲ್ಪಿಸಿಕೊಡಿ ಎಂದು ಕೇಳುವುದಿಲ್ಲ. ಇಷ್ಟೇ ಅಲ್ಲದೆ, ರೈತನಿಗಿರತಕ್ಕ ಕಷ್ಟ ದೂರವಾಗಬೇಕಾದರೆ ಮೊಟ್ಟ ಮೊದಲನೆಯದಾಗಿ ಪವರ್ ಚಾರ್ಜಸ್ ಅನ್ನು ಎಷ್ಟು ಕಡಿಮೆ ಮಾಡುವುದಕ್ಕೆ ಸಾಧ್ಯವೋ ಅಷ್ಟನ್ನೂ ಕಡಿಮೆಮಾಡಬೇಕು. ಬೇರೆ ರಾಜ್ಯಗಳಲ್ಲಿ ಈಗಾಗಲೇ ಈ ನೀತಿಯನ್ನು ಅನುಸರಿಸಿದ್ದಾರೆ.

ಈವತ್ತಿನ ದಿವಸ ನಮ್ಮ ರಾಜ್ಯದಲ್ಲಿ ಷುಗರ್ ಕೇನ್ ಮೇಲೆ ಮೂವತ್ತಾರು ಪರ್ಸೆಂಟ್ ಟ್ಯಾಕ್ಸ್ ಅನ್ನು ವಿಧಿಸಿದ್ದೀರಿ. ಕಬ್ಬನ್ನು ಬೆಳೆದಂತೆ ರೈತನೂ ರೆಗ್ಯುಲೇಟೆಡ್ ಮಾರ್ಕೆಟ್‌ಗೆ ತೆಗೆದುಕೊಂಡು ಹೋದರೆ ಆತನು ರೋಡ್ ಸೆಸ್ ಅನ್ನು ಕೊಡಬೇಕು. ಪ್ರಾಜೆಕ್ಟ್ ಸೆಸ್ ಕೊಡಬೇಕು. ಹೆಲ್ತ್‌ಸೆಸ್ ಅನ್ನು ಕೊಡಬೇಕು ಇನ್ನೂ ಅನೇಕ ಸೆಸ್‌ಗಳನ್ನು ಕೊಡಬೇಕಾಗಿರುತ್ತದೆ. ಸೆಸ್‌ಗಳನ್ನು ಕಡಿಮೆ ಮಾಡತಕ್ಕ ಪ್ರಯತ್ನವನ್ನು ಸರ್ಕಾರದವರು ಮಾಡಲೇ ಇಲ್ಲ. ಅಗ್ರಿಕಲ್ಚರಿಸ್ಟ್ ಇವರಿಂದಲೇ ಸುಮಾರು 13 ಕೋಟಿ ರೂಪಾಯಿಗಳಷ್ಟು ಸೆಸ್ ಮುಖಾಂತರ ವಸೂಲು ಮಾಡುತ್ತಿದ್ದೀರಿ. ಅರ್ಥಮಂತ್ರಿಗಳು ಹೇಳುತ್ತಾರೆ ಕಾನೂನನ್ನು ಮೇಲ್‌ಮಟ್ಟದಲ್ಲಿ ತಂದಲ್ಲಿ ಇನ್ನೂ ಎರಡರಿಂದ ಮೂರು ಕೋಟಿ ರೂಪಾಯಿಗಳಷ್ಟು ಜಾರಿಗೆ ಬರುತ್ತದೆಂದು ಹೇಳುತ್ತಾರೆ.

**ಶ್ರೀ ಎಸ್. ಎಂ. ಯಾಹ್ಯಾ :** ಕಾಫಿ ಪ್ಲಾಂಟರ್ಸ್ ಇವರಿಂದ 11 ಕೋಟಿ ರೂಪಾಯಿಗಳು ಬರುತ್ತದೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಬರಲಿ ಬಹಳ ಸಂತೋಷ. ಆದರೆ ನಾನು ಹೇಳುತ್ತಿರುವುದೇನೆಂದರೆ ಬಹಳ ಮುಗ್ಗಟ್ಟಿನ ಪರಿಸ್ಥಿಯಲ್ಲಿರತಕ್ಕಂಥ ರೈತರಿಗೆ ಅವನು ಕೊಡತಕ್ಕಂಥ ಟ್ಯಾಕ್ಸ್ ವಿಚಾರವಾಗಿಯಾಗಲೀ ಅವನು ಕೊಡತಕ್ಕಂಥ ಬೆಟರ್‌ಮೆಂಟ್ ಲೆವಿ ವಾಟರ್ ರೇಟ್ ಇವುಗಳನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆಮಾಡುವ ಬಗ್ಗೆ ಏನಾದರೂ ಒಂದು ವ್ಯವಸ್ಥೆಯನ್ನು ಮಾಡಬೇಕೆಂದು ಹೇಳುತ್ತೇನೆ.

**ಶ್ರೀ ಡಿ. ದೇವರಾಜ್ ಅರಸ್ :** ಯಾರಿಂದಲೂ ಯಾವ ವಿಧವಾದ ಟ್ಯಾಕ್ಸ್ ಅನ್ನು ತೆಗೆದುಕೊಳ್ಳಬಾರದೆಂದು ಹೇಳುತ್ತೀರಾ ?

**ಶ್ರೀ ಎಸ್.ಆರ್. ಬೊಮ್ಮಾಯಿ :** ರೈತರಿಂದ ಟ್ಯಾಕ್ಸ್ ಎಂದರೆ ಬೆಟರ್ ಮೆಂಟ್ ಲೆವಿ ಕಂದಾಯ ಇವೆ ಮುಂತಾದವನ್ನು ವಸೂಲು ಮಾಡಲೇಬಾರದೆಂದು ಹೇಳುತ್ತಿಲ್ಲ. ಯಾರು ರೈತರು ನೀರು ಸಿಗದೆ ಬೆಳೆಯನ್ನು ಬೆಳೆಯಲು ಸಾಧ್ಯವಿಲ್ಲದೆ ತೊಂದರೆಗೆ ಒಳಗಾಗಿರುತ್ತಾರೋ ಅಂಥವರಿಂದ ಟ್ಯಾಕ್ಸ್ ಅನ್ನು ತೆಗೆದುಕೊಳ್ಳಬಾರದೆಂದು ಹೇಳುತ್ತೇನೆ. ಮಲಪ್ರಭಾ, ಘಟಪ್ರಭಾ ಪ್ರದೇಶಗಳಲ್ಲಿರತಕ್ಕಂಥ ರೈತರಿಗೆ ತಮ್ಮ ಅಧಿಕಾರಿಗಳು ನೋಟಿಸುಗಳನ್ನು ಕಳುಹಿಸಿಕೊಟ್ಟಿರುತ್ತಾರೆ. ನೋಟಿಸ್ ಕಳುಹಿಸಿರುವುದೆಲ್ಲ ಇಂಗ್ಲಿಷ್‌ನಲ್ಲಿರುತ್ತವೆ. ರೈತರು ಇದನ್ನು ಓದಿ ಅರ್ಥಮಾಡಿಕೊಂಡು ಉತ್ತರ ಕೊಡುವುದಕ್ಕೆ ಸಾಧ್ಯವಾಗದೆ ಈವತ್ತಿನ ದಿವಸ ಸರ್ಕಾರ ಏನು ತೀರ್ಮಾನ ತೆಗೆದುಕೊಂಡಿರುತ್ತದೋ ಅದು ಎಕ್ಸ್‌ಪಾರ್ಟಿಯಾಗಿರುತ್ತದೆ. ಓದು ಬರಹ ಬಾರದ ರೈತರಿಗೆ ಇಂಗ್ಲಿಷ್ ನೋಟಿಸುಗಳನ್ನು ಕಳುಹಿಸಿ ಕೊಟ್ಟರೆ ಏನು ಪ್ರಯೋಜನವೆಂದು ಕೇಳುತ್ತೇನೆ. ಕನ್ನಡದಲ್ಲಿ ನೋಟಿಸುಗಳನ್ನು ಕಳುಹಿಸಿ ಎಂದು ಹೇಳಿದರೆ ಅವು ಇನ್ನೂ ಕನ್ನಡದಲ್ಲಿ ಪ್ರಿಂಟ್ ಆಗುವವರೆಗೂ ನೋಟಿಸುಗಳನ್ನು ಕಳುಹಿಸಬೇಡಿ. ಇಲ್ಲ ರೈತನು ಇಂಗ್ಲಿಷ್ ಕಲಿಯುವವರೆಗೂ ಈ ರೀತಿಯಾದ ನೋಟಿಸುಗಳನ್ನು ಕಳುಹಿಸುವುದನ್ನು ನಿಲ್ಲಿಸಿ, ಎರಡರಲ್ಲಿ ಯಾವುದಾದರೂ ಒಂದನ್ನು ಮಾಡಿದರೆ ಉತ್ತಮವೆಂದು ಭಾವಿಸುತ್ತೇನೆ. ಇದರ ಪರಿಣಾಮ ಏನಾಗಿದೆ ಎಂದರೆ 4 ಸಾವಿರ ಜನ ರೈತರಿಗೆ ನೋಟಿಸ್ ಹೋಗಿ ಅವರಿಗೆ ಅದು ಅರ್ಥವಾಗದೇ ಅದನ್ನು ಮನೆಯಲ್ಲಿಟ್ಟುಕೊಂಡು ಕುಳಿತಿರುತ್ತಾರೆ.

ಇನ್ನು ಬೆಟರ್‌ಮೆಂಟ್ ಲೆವಿ ವಿಧಿಸಿರತಕ್ಕಂಥದ್ದನ್ನು ನೋಡಿದರೆ ಒಂದೊಂದು ಗ್ರಾಮದಲ್ಲಿ ಒಂದೊಂದು ರೀತಿಯಾಗಿರುತ್ತದೆ. ಒಂದು ಗ್ರಾಮದಲ್ಲಿ ಎಕರೆ ಒಂದಕ್ಕೆ ಒಂದು ಸಾವಿರ ರೂಪಾಯಿಗಳನ್ನು ವಿಧಿಸಿದ್ದರೆ ಮತ್ತೊಂದು ಗ್ರಾಮಕ್ಕೆ ಏಳುನೂರು ರೂಪಾಯಿಗಳನ್ನು ವಿಧಿಸಿರುತ್ತಾರೆ. ಏತಕ್ಕೆ ಈ ರೀತಿಯಾದ ಒಂದು ವ್ಯತ್ಯಾಸವೆಂದು ಕೇಳಿದರೆ ಆಯಾ ಊರಿನ ಜಮೀನು ಮಾರಾಟದ ಬೆಲೆಯ ಮೇಲೆ ಈ ರೀತಿಯಾದ ತೆರಿಗೆಯನ್ನು ವಿಧಿಸಲಾಗುತ್ತದೆಂದು ಹೇಳುತ್ತಾರೆ. ಆದ್ದರಿಂದ ನಾನು ಹೇಳುವುದೇನೆಂದರೆ ಯಾವುದೇ ಒಂದು ಕಾನೂನು ಜಾರಿಗೆ ತಂದರೂ ಅದನ್ನು ಸರಿಯಾಗಿ ವಿಚಾರಣೆ ಮಾಡಿ ಕಾನೂನುಬದ್ಧವಾಗಿ ಜಾರಿಗೆ ಕೊಡುವುದು ಬಹಳ ಅವಶ್ಯಕ. ಆ ರೀತಿ ಮಾಡದೆ ರೈತರನ್ನು ಹಿಂಸೆಗೆ ಒಳಪಡಿಸುವುದು ನ್ಯಾಯವಾದುದಲ್ಲವೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಇನ್ನು ರೈತ ಬೆಳೆದಂಥ ಬೆಳೆಗೆ ಸರಿಯಾದ ಬೆಲೆ ಸಿಗದೆ ಬಹಳ ಕಷ್ಟದಲ್ಲಿರುತ್ತಾನೆ. ಫೇರ್ ಪ್ರೈಸ್ ಮಾರ್ಕೆಟ್‌ನಲ್ಲಿ ಕೊಂಡುಕೊಳ್ಳತಕ್ಕಂಥ ವ್ಯವಸ್ಥೆಯನ್ನು ಮಾಡಬೇಕು. ಈಗ ಜೋಳ ಯಥೇಚ್ಛವಾಗಿ ಮಾರ್ಕೆಟ್‌ಗೆ ಹೋಗುತ್ತಾ ಇದೆ.

ಅದೆಲ್ಲ ಹೋದಮೇಲೆ ವ್ಯವಸ್ಥೆಯನ್ನು ಮಾಡಿದರೆ ಏನೂ ಪ್ರಯೋಜನವಾಗುವುದಿಲ್ಲ. ಜೋಳ ಸ್ವಲ್ಪ ಕಪ್ಪಾಗಿರುವುದರಿಂದ ಅದನ್ನು ಕೊಂಡುಕೊಳ್ಳಲು ಯಾರು ಮುಂದೆ ಬರುತ್ತಿಲ್ಲ. ಕರ್ನಾಟಕ ಫುಡ್ ಕಾರ್ಪೋರೇಷನ್‌ನವರು ಕೂಡ ಅದನ್ನು ತೆಗೆದುಕೊಳ್ಳುವುದಕ್ಕೆ ತಯಾರಿಲ್ಲ. ಈ ರೀತಿಯಾದರೆ ಬೆಳೆದಂಥ ರೈತನೂ ಏನು ಮಾಡಬೇಕು. ಇದಕ್ಕೆ ಏನಾದರೂ ಕ್ರಮ ಸರ್ಕಾರದವರು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ಇಲ್ಲವಾದರೆ ಆಹಾರ ಧಾನ್ಯಗಳನ್ನು ತೀರ ಕಡಿಮೆ ಬೆಲೆಗೆ ಮಾರಾಟ ಮಾಡಿ ರೈತನು ಏನು ಮಾಡಬೇಕು? ಇದಕ್ಕೆ ಏನಾದರೂ ಕ್ರಮ ಸರ್ಕಾರದವರು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ಇಲ್ಲವಾದರೆ ಆಹಾರ ಧಾನ್ಯಗಳನ್ನು ತೀರ ಕಡಿಮೆ ಬೆಲೆಗೆ ಮಾರಾಟ ಮಾಡಿ ರೈತನು ಕಷ್ಟಕ್ಕೆ ಒಳಗಾಗುತ್ತಾನೆ. ಇದನ್ನು ನಿಲ್ಲಿಸಿ ಆತನಿಗೆ ಸಹಾಯ ಮಾಡಬೇಕೆಂದು ಒತ್ತಾಯ ಪೂರ್ವಕವಾಗಿ ಕೇಳಿಕೊಳ್ಳುತ್ತೇನೆ.

ಇನ್ನೂ ಲ್ಯಾಂಡ್ ರಿಫಾರ್ಮ್ಸ್ ಬಗ್ಗೆ ಈಗಾಗಲೇ ಅನೇಕ ಮಿತ್ರರು ಹೇಳಿದ್ದಾರೆ. ಈ ಸಂದರ್ಭದಲ್ಲಿ ಒಂದು ವಿಚಾರವನ್ನು ಮಾತ್ರ ಹೇಳಲು ಇಷ್ಟಪಡುತ್ತೇನೆ. ನಾಲ್ಕು ಲಕ್ಷ ಎಕರೆ ಸರ್ಪ್ಲಸ್ ಲ್ಯಾಂಡ್ ಬರುತ್ತದೆಂದು ಹೇಳಿದ್ದಾರೆ. ಸುಮಾರು ಈ ನಾಲ್ಕು ಲಕ್ಷ ಎಕರೆಗಳಲ್ಲಿ ಹರಿಜನ ಗಿರಿಜನರು ಏನು ಇದ್ದಾರೆ ಅವರಿಗೆ ಏನು ಮಾಡುತ್ತೀರಿ ಎನ್ನುವ ಬಗ್ಗೆ ಉತ್ತರ ಹೇಳುವಾಗ ತಿಳಿಸಬೇಕೆಂದು ಕೇಳುತ್ತೇನೆ.

ಇನ್ನೂ ಕಲ್ಟಿವೇಟರ್ಸ್ ಅಗ್ರಿಕಲ್ಚರ್ ಲೇಬರರ್ಸ್ ಇವರಿಗೆ ಉದ್ಯೋಗವನ್ನು ಕಲ್ಪಿಸುವ ಸಲುವಾಗಿ ಏನು ವ್ಯವಸ್ಥೆಯನ್ನು ಮಾಡಿರುತ್ತೀರಿ ಎನ್ನುವ ಬಗ್ಗೆ ಪುನಃ ಪ್ರಸ್ತಾಪ ಮಾಡುತ್ತಾ ಈ ಬಗ್ಗೆ ಏನು ಒಂದು ಯೋಜನೆಯನ್ನು ಮುಂದಿಟ್ಟುಕೊಂಡಿರುತ್ತೀರೆಂದು ಕೇಳುತ್ತೇನೆ.

*****

# ನಿರುದ್ಯೋಗ ಸಮಸ್ಯೆ ಕುರಿತು

ದಿನಾಂಕ: 21.3.1979

**ನಿರುದ್ಯೋಗ ಸಮಸ್ಯೆ ವಿಚಾರದಲ್ಲಿ ಗ್ರಾಮೀಣ ಪರಿಸ್ಥಿತಿಯನ್ನು ಪ್ರತ್ಯೇಕವಾಗಿ ಅವಲೋಕಿಸಬೇಕು. ಅಲ್ಲಿನ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆ ಪಟ್ಟಣಕ್ಕಿಂತ ಭಿನ್ನವಾಗಿರುತ್ತದೆ. ಗ್ರಾಮಗಳಲ್ಲಿ ಕುಶಲಕರ್ಮಿಗಳಿಗೆ ಅನುಕೂಲವಾಗುವ ಕೈಗಾರಿಕಾ ತರಬೇತಿ ವ್ಯವಸ್ಥೆ ಸಮರ್ಥವಾಗಿ ಆಗಬೇಕೆಂದು ಬೊಮ್ಮಾಯಿ ಅವರು ತಮ್ಮ ಭಾಷಣದಲ್ಲಿ ಹೇಳಿದ್ದಾರೆ.**

**ಶ್ರೀ ಎಸ್.ಆರ್. ಬೊಮ್ಮಾಯಿ** : ಸ್ವಾಮಿ ಏಳು ವರ್ಷಗಳಿಂದಲೂ ರಾಜ್ಯದಲ್ಲಿ ನಿರುದ್ಯೋಗ ಸಮಸ್ಯೆ ಏನಾಗಿದೆ ಎಂದರೆ ಇದು ಮತ್ತಷ್ಟು ಹೆಚ್ಚಿದೆಯೇ ಹೊರತು ಸ್ವಲ್ಪಮಟ್ಟಿಗೂ ಕಡಿಮೆಯಾಗಲೇ ಇಲ್ಲ. ಏಳು ವರ್ಷಗಳಿಂದಲೂ ಕೆಲಸವಿಲ್ಲದವನಿಗೆ ಕೆಲಸ ಎನ್ನುವ ಘೋಷಣೆಯನ್ನು ಮಾಡುತ್ತಿರುವುದು ನಾನು ಕೇಳುತ್ತಲೇ ಇದ್ದೇನೆ. ತಮ್ಮ ಅಂಕಿ ಸಂಖ್ಯೆಗಳ ಪ್ರಕಾರವಾಗಿಯೇ ಹೇಳುವುದಾದರೆ ಕರ್ನಾಟಕ ರಾಜ್ಯದಲ್ಲಿ ಎಷ್ಟರ ಮಟ್ಟಿಗೆ ಬೆಳೆದಿದೆ ಎಂದರೆ ಇದು ಬೃಹದಾಕಾರವಾಗಿ ಬೆಳೆದಿದೆ. 1971–72 ರಲ್ಲಿ ಪೋಸ್ಟ್ ಗ್ರಾಜುಯೇಟ್ಸ್ ಸಂಖ್ಯೆ. 6,119 ಇದ್ದದು 1977–78ರಲ್ಲಿ 13,090 ಆಗಿರುತ್ತದೆ ಜನರಲ್ 15,694 ಇದ್ದದ್ದು 1977–78 ರಲ್ಲಿ 2,31,423ಕ್ಕೆ ಏರಿರುತ್ತದೆ. ಡಿಪ್ಲೊಮೋ ಹೋಲ್ಡರ್ಸ್ 1971–72 ರಲ್ಲಿ 5.054 ಇದ್ದು 1977–78ಕ್ಕೆ 13,354 ಆಯಿತು. ಇನ್ನು ವ್ಯವಸಾಯ ಏನು ಇಲ್ಲದೆ ಇರತಕ್ಕಂಥವರ ಸಂಖ್ಯೆ. 40 ಲಕ್ಷಕ್ಕೂ ಜಾಸ್ತಿ ಇರುತ್ತದೆ. ಇದಿಷ್ಟು ತಿಳಿದಿರುವ ಸಂಖ್ಯೆ ತಿಳಿಯದೆ ಇರುವ ಅನೇಕ ಜನ ನಿರುದ್ಯೋಗಿಗಳು ಕೆಲಸವಿಲ್ಲದೆ ಇರತಕ್ಕಂಥ ಸಂಖ್ಯೆ ಬೇಕಾದಷ್ಟು ಇರುತ್ತದೆ. ಸರ್ಕಾರದವರು ಉದ್ಯೋಗವಿಲ್ಲದವರಿಗೆ ಉದ್ಯೋಗವನ್ನು ಕಲ್ಪಿಸುವುದರತ್ತ ಏನು ಕ್ರಮವನ್ನು ತೆಗೆದುಕೊಂಡಿರುತ್ತೀರಿ ಎಂದು ಕೇಳುತ್ತೇನೆ. ವಿದ್ಯಾವಂತ ತರುಣರು ಹಳ್ಳಿಗಳಲ್ಲಿ ಲಕ್ಷಾಂತರ ಜನರು ಇರುತ್ತಾರೆ. ಅವರೆಲ್ಲರೂ ಬೇರೆ, ಅವರ ಸಮಸ್ಯೆಯೇ ಬೇರೆಯದಾಗಿರುತ್ತದೆ. ಅವರಿಗೆ ಕೆಲಸ ಕೊಡತಕ್ಕಂಥ ಏನಾದರೂ ಒಂದು ಯೋಜನೆಯನ್ನು ಮಾಡಿದ್ದೀರಾ. ಮುಂದೆ ಮಾಡುತ್ತೀರಾ ಎಂದು ಕೇಳುತ್ತೇನೆ. ಇವರಿಗೆ ಕೆಲಸ ಕೊಡತಕ್ಕ ಯೋಜನೆಯನ್ನು ಏನು ಮಾಡುತ್ತಿದ್ದೀರಿ?

**ಶ್ರೀ ಡಿ. ದೇವರಾಜ ಅರಸ್** : ನಿಮಗೇನಾದರೂ ಗೊತ್ತಿದ್ದರೆ ಹೇಳಿ.

**ಶ್ರೀ ಎಸ್.ಆರ್. ಬೊಮ್ಮಾಯಿ** : ನಾನು ಮಂತ್ರಿಯಾಗಿಲ್ಲ ಮಂತ್ರಿಯಾಗಿದ್ದರೆ ಅದನ್ನು ನಾನು ಹೇಳಬಹುದಾಗಿತ್ತು. ನನ್ನ ದುರ್ದೈವವೋ ಸುದೈವವೋ ಏನೊ ನನಗೆ ಆ ಅವಕಾಶ ಸಿಕ್ಕಿಲ್ಲ ಆದರೂ ನಾನು ಹೇಳುತ್ತಿದ್ದೇನೆ.

**ಶ್ರೀ ಡಿ. ದೇವರಾಜ ಅರಸ್ :** ನಿಮಗೆ ಗೊತ್ತಿರುವುದನ್ನು ನಮಗಾದರೂ ಹೇಳಿ.

**ಶ್ರೀ ಎಸ್.ಆರ್. ಬೊಮ್ಮಾಯಿ:** ನಾನು ಭಾಷಣದ ಪ್ರಥಮದಲ್ಲಿಯೇ ಹೇಳಿದ್ದೇನೆ. ನಾನು ರಾಜಕೀಯವಾಗಿ ಈ ಬಜೆಟ್ಟಿನ ಮೇಲೆ ಮಾತನಾಡುತ್ತಿಲ್ಲ ಎಂದು, ನಾನು ವ್ಯವಸಾಯದ ಬಗ್ಗೆ ಪರ್ಯಾಯ ವ್ಯವಸ್ಥೆ (ಅಲ್ಟರ್ನೇಟೀವ್)ಏನು ಮಾಡಬೇಕು ಎಂಬುದನ್ನು ಹೇಳಿದ್ದೇನೆ. ಅದೇ ರೀತಿ ಈ ನಿರುದ್ಯೋಗ ಸಮಸ್ಯೆಯ ಬಗ್ಗೆಯೂ ನಾನು ಹೇಳುತ್ತಿದ್ದೇನೆ. ನಾನು ಹೇಳಲೇಬೇಕಾಗಿದೆ ಈಗಾಗಲೇ ಕೇಂದ್ರ ಸರ್ಕಾರ ಈ ಬಗ್ಗೆ ಆಲೋಚನೆ ಮಾಡಿದೆ. ಯೋಜನೆಗಳನ್ನು ಹಾಕಿಕೊಂಡಿದೆ. ಡೀಸೆಂಟ್ರಲೈಸೇಷನ್ ಆಫ್ ಇಂಡಸ್ಟ್ರೀಸ್, ರೂರಲ್ ಬೇಸ್ಡ್ ಇಂಡಸ್ಟ್ರೀಸ್ ಮುಂತಾದ ಯೋಜನೆಗಳೇನಿವೆ?

**ಶ್ರೀ ಡಿ. ದೇವರಾಜ ಅರಸ್:** ಎಲ್ಲರೂ ಮಾಡೋಣ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಅದನ್ನೇ ಮಾಡಿ ಎಂದು ನಾನು ಹೇಳುತ್ತಿದ್ದೇನೆ. ಇದಲ್ಲದೆ ಈಗ ಡಿಸ್ಟ್ರಿಕ್ಟ್ ಇಂಡಸ್ಟ್ರಿಯಲ್ ಸೆಂಟರ್ಸ್ ಬಂದಿದೆ ಇದು ಕೇಂದ್ರ ಸರ್ಕಾರದ ಯೋಜನೆ ಪ್ರಕಾರ ಬಂದಿದೆ. ಆದರೆ ಈ ಯೋಜನೆಯ ಕೆಲಸ ಯಾವ ರೀತಿ ಆಗುತ್ತಿದೆ ಎಂಬುದನ್ನು ನೋಡಿದ್ದೀರಾ? ಯೋಜನೆ ಬಂದ ಮೇಲೆ ಯಾವ ರೀತಿಯಾಗಿ ರಾಜ್ಯದಲ್ಲಿ ಕೆಲಸವಾಗಿದೆ ಅವರು ಏನು ಕೆಲಸ ಮಾಡುತ್ತಿದ್ದಾರೆ ಎಂಬುದನ್ನು ನೋಡಬೇಕು. ನಿರುದ್ಯೋಗ ಸಮಸ್ಯೆ ಬಿಡಿಸುವುದಕ್ಕೆ ಕೇಂದ್ರ ಸರ್ಕಾರದವರು ಕೆಲವು ಉದ್ಯಮಗಳನ್ನು ಏನು ಮಾಡಬೇಕೆಂದು ಹೇಳಿದ್ದಾರೋ ಅದನ್ನು ತಕ್ಷಣ ಕಾರ್ಯಗತ ಮಾಡಬೇಕು. ಆಗ್ರೋ ಬೇಸ್ಡ್ ಇಂಡಸ್ಟ್ರೀಸ್, ರೂರಲ್ ಬೇಸ್ಡ್, ಇಂಡಸ್ಟ್ರೀಸ್ ಮತ್ತು ಡಿಸ್ಟ್ರಿಕ್ಟ್ ಇಂಡಸ್ಟ್ರೀಯಲ್ ಸೆಂಟರ್ಸ್ ಈ ಯೋಜನೆಗಳನ್ನು ತೀವ್ರವಾಗಿ ಕಾರ್ಯಗತ ಮಾಡದೇ ಹೋದರೆ ನಿರುದ್ಯೋಗ ಸಮಸ್ಯೆಯನ್ನು ಖಂಡಿತ ಬಿಡಿಸುವುದಕ್ಕಾಗುವುದಿಲ್ಲ. ಹಣ ಮಾತ್ರ ಖರ್ಚಾಗುತ್ತಿದೆ ಇಲ್ಲ ಎಂದು ಹೇಳುವುದಿಲ್ಲ. ಆದರೆ ಖರ್ಚಾಗತಕ್ಕ ಹಣ ಸರಿಯಾದ ರೀತಿಯಲ್ಲಿ ವಿನಿಯೋಗವಾಗುವಂತೆ ನೋಡಿಕೊಳ್ಳಬೇಕು. ಇಲ್ಲದಿದ್ದಲ್ಲಿ ಹಣ ಮಾತ್ರ ಖರ್ಚಾಗುತ್ತದೆ ಯೋಜನೆಯ ಪ್ರಯೋಜನ ಮಾತ್ರ ಸ್ವಲ್ಪವೂ ಆಗುವುದಿಲ್ಲ. ಹೀಗಾಗಿ ಅನೇಕ ಅಭಿವೃದ್ಧಿ ಕಾರ್ಯಗಳು ಯಾವ ಗುರಿಯನ್ನು ಮುಟ್ಟಬೇಕಾಗಿತ್ತೋ ಆ ಗುರಿಯನ್ನು ಮುಟ್ಟುತ್ತಿಲ್ಲ. ಆದ್ದರಿಂದ ಸರ್ಕಾರದವರು ಈ ಬಗ್ಗೆ ಹೆಚ್ಚು ಗಮನ ಹರಿಸಿ ಈ ಕೆಲಸಗಳು ಚುರುಕಾಗಿ ನಡೆಯುವಂತೆ ವ್ಯವಸ್ಥೆ ಮಾಡಬೇಕು. ಆದರೆ ನಮ್ಮಲ್ಲಿ ಆ ಕೆಲಸ ಮಾತ್ರ ಆಗಿಲ್ಲ ಎಂಬ ಮಾತನ್ನು ತಮಗೆ ಹೇಳಬಯಸುತ್ತೇನೆ.

ನಿರುದ್ಯೋಗ ಸಮಸ್ಯೆ ಇಷ್ಟು ಬೃಹದಾಕಾರವಾಗಿ ಬೆಳೆಯುತ್ತಿದ್ದರು ಕೂಡ ಅದನ್ನು ಪರಿಹರಿಸಲು ನಮ್ಮ ರಾಜ್ಯ ಸರ್ಕಾರ ಯಾವ ಕಾರ್ಯಕ್ರಮವನ್ನು ಹಾಕಿಕೊಂಡಿಲ್ಲ. ಆದ್ದರಿಂದ ಕೇಂದ್ರ ಸರ್ಕಾರ ಹಾಕಿಕೊಟ್ಟಂಥ ಅಡಿಯಲ್ಲಾದರೂ ಹೋಗಿ ಆ ಕಾರ್ಯಕ್ರಮಗಳನ್ನಾದರೂ ಜಾರಿಗೆ ತರೋಣ ಅವರ ಕಾರ್ಯಕ್ರಮಗಳನ್ನು ಆಚರಣೆಗೆ ತರಲು ಪ್ರಯತ್ನ ಮಾಡೋಣ ಎಂಬ ಮಾತನ್ನು ಹೇಳಬಯಸುತ್ತಿದ್ದೇನೆ. ರೂರಲ್ ಓರಿಯಂಟೆಡ್ ಸ್ಕೀಂ ನಮ್ಮಲ್ಲಿ ಬರಬೇಕು. ಈ ನೀತಿಯನ್ನು ಆಚರಣೆಗೆ ತಂದರೆ ನಿರುದ್ಯೋಗ ಸಮಸ್ಯೆ ಬಗೆಹರಿಯುವುದಕ್ಕೆ ಎಷ್ಟೋ ಸಹಕಾರಿಯಾಗುತ್ತದೆ. ಈ ವಿಷಯದಲ್ಲಿ ವಿವರವಾದ ಯೋಜನೆಗಳನ್ನು ಕೊಡತಕ್ಕ ಅವಕಾಶ ನಮಗಿಲ್ಲ. ಇವತ್ತು ಸರ್ಕಾರದವರು ಆ ಬಗ್ಗೆ ಆಲೋಚನೆ ಮಾಡಬೇಕು. ಕೇಂದ್ರದ ಯೋಜನೆಗಳ ಜೊತೆಗೆ ರಾಜ್ಯ ಸರ್ಕಾರದ ಯೋಜನೆಗಳನ್ನು ಸೇರಿಸಿ ಈ ನಿರುದ್ಯೋಗ ಸಮಸ್ಯೆಯನ್ನು ಬಿಡಿಸುವುದಕ್ಕೆ ನಾವು ಪ್ರಯತ್ನವನ್ನು ಮಾಡಬೇಕು. ಇಲ್ಲದಿದ್ದಲ್ಲಿ ಈ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಾಗಿ ಇವರು ಕೆಲವೇ ದಿವಸಗಳಲ್ಲಿ ಸಮಾಜಕ್ಕೆ ದೊಡ್ಡ ಹೊರೆಯಾಗುತ್ತಾರೆ. ಅವರ ಬುದ್ಧಿ ಡೆವಿಲ್ಸ್ ವರ್ಕ್‌ಶಾಪ್ ಆದ ಹಾಗಾಗುತ್ತದೆ. ಈಗಾಗಲೇ ವಿದ್ಯಾವಂತ ನಿರುದ್ಯೋಗಿಗಳು ಪೋಸ್ಟ್ ಗ್ರಾಜುಯೇಟ್ಸ್ ಮಾತನಾಡುವ ದಾಟಿಯನ್ನು ನೋಡಿದರೆ. ಸ್ಥಿತಿಯನ್ನು ಕೇಳಿದಾಗ ಮನಸ್ಸಿಗೆ ವೇದನೆಯಾಗುತ್ತದೆ. ಆ ನಿರುದ್ಯೋಗಿ ಯುವಕರು ಮುಂದಿನ ಭವಿಷ್ಯ ಗೊತ್ತಿಲ್ಲದೆ ಹುಚ್ಚರಾಗಿ ತಿರುಗುತ್ತಿದ್ದಾರೆ. ಅಂಥವರಿಗೆ ಸರಿಯಾದ ಒಂದು ದಿಕ್ಕನ್ನು ತೋರಿಸತಕ್ಕಂಥಾದ್ದು ನಮ್ಮ ಕರ್ತವ್ಯವಾಗಿದೆ. ಈ ದಿಸೆಯಲ್ಲಿ ಈ ಸರ್ಕಾರ ಏನು ಕಾರ್ಯಕ್ರಮ ತೆಗೆದುಕೊಂಡಿದೆ ಎಂಬ ಮಾತನ್ನು ಕೇಳಬಯಸುತ್ತಿದ್ದೇನೆ. ಮಾನ್ಯ ಹಣಕಾಸಿನ ಮಂತ್ರಿಗಳ 58 ಪುಟಗಳ ಭಾಷಣದಲ್ಲಿ ನಿರುದ್ಯೋಗ ಸಮಸ್ಯೆಯನ್ನು ಬಿಡಿಸುವ ಬಗ್ಗೆ ಜಿಲ್ಲಾ ಉದ್ಯೋಗ ಕೇಂದ್ರಗಳ ಬಗ್ಗೆ ಒಂದು ಶಬ್ದವನ್ನು ಹೇಳಿಲ್ಲ. ಕೇಂದ್ರ ಸರ್ಕಾರದ ಯೋಜನೆ ಈ ರೀತಿ ಇದೆ. ನಮ್ಮ ಯೋಜನೆ ಈ ರೀತಿ ಇದೆ. ಈ ಪ್ರಕಾರ ನಾವು ಕೆಲಸ ಮಾಡುತ್ತಿದ್ದೇವೆ ಎಂಬ ಬಗ್ಗೆ ಒಂದು ಮಾತೂ ಹೇಳಿಲ್ಲ. ಚುನಾವಣೆಗಿಂತ ಮೊದಲು ನಿರುದ್ಯೋಗಿಗಳಿಗೆ ಸ್ಟೈಫಂಡ್ ಕೊಟ್ಟಿದ್ದೀರಿ ನಿಜ. ಅದು ಒಳ್ಳೆಯದು ಅದನ್ನು ಯಾರೂ ಬೇಡ ಎಂದು ಹೇಳುವುದಿಲ್ಲ, ಆದರೆ ಅಷ್ಟೇ ಕೊಟ್ಟರೆ ಸಾಲದು. ಅದರಿಂದ ಪ್ರಯೋಜನವೇನೂ ಹೆಚ್ಚಾಗಿ ಆಗುವುದಿಲ್ಲ. ಅವರಿಗೆ ಕಾಯಂ ಆದ ಉದ್ಯೋಗವನ್ನು ಕೊಡಬೇಕು. ಏನು ಗತಿ ಇಲ್ಲದಿದ್ದಾಗ 150 ರೂಪಾಯಿಗಳನ್ನು ಕೊಟ್ಟರೆ ಅದರಿಂದ ಅನುಕೂಲವಾಗುತ್ತದೆ ನಿಜ. ಅದನ್ನು ನಾನು ತಪ್ಪು ಎಂದು ಹೇಳುವುದಿಲ್ಲ. ಆದರೆ ಮುಂದೆ ಇವರ ಭವಿಷ್ಯ ಏನು ಎಂಬುದನ್ನು ಯೋಚನೆ ಮಾಡಬೇಕಾಗುತ್ತದೆ. ಈಗ ಅವರ ಗತಿ ಏನಾಗಿದೆ ? ಚುನಾವಣೆ ಮುಗಿಯಿತು 6 ತಿಂಗಳಾಯಿತು ಸ್ಟೈಫಂಡ್ ಮುಗಿಯಿತು ಈಗ ಅವರ ಗತಿ ಏನಾಗಿದೆ ? ಈಗ

ಅವರೆಲ್ಲಾ ನಮ್ಮ ಮನೆ ಬಾಗಿಲಿಗೆ ಬರುತ್ತಿದ್ದಾರೆ. ನೂರಾರು ಜನ ಯುವಕರು ನಮ್ಮ ಬಾಗಿಲಿಗೆ ಬಂದು ಮುಖ್ಯಮಂತ್ರಿಗಳಿಗೆ ಹೇಳಿ ನಮಗೆ ಕೆಲಸ ಮಾಡಿಕೊಡಿ ಎಂದು ಕೇಳುತ್ತಿದ್ದಾರೆ. ಇಲ್ಲಪ್ಪಾ ಅದು ಸ್ಟೈಫಂಡ್ ತಾತ್ಕಾಲಿಕವಾಗಿ ಕೊಡುತ್ತಿದ್ದುದು, ಅದು ತಾತ್ಕಾಲಿಕ ಪರಿಹಾರ ಅಷ್ಟೇ ಎಂದು ಹೇಳಿದರೂ ಕೂಡ ಏನಾದರು ಮಾಡಿ ನಮಗೆ ಕೆಲಸ ಕೊಡಿಸಿಕೊಡಿ ಎಂದು ಹೇಳುತ್ತಿದ್ದಾರೆ. ನನ್ನ ಹತ್ತಿರ ನೂರಾರು ಅರ್ಜಿಗಳು ಬಂದಿವೆ. ಹೋಗಿ ಅವರಿಗೆ ಹಂಗಾಮಿ ಕೆಲಸಕೊಟ್ಟು ಹಂಗಾಮಿ ಉಪಯೋಗವನ್ನು ಅವರಿಂದ ತೆಗೆದುಕೊಂಡು ಈಗ ಕೈಬಿಟ್ಟರೆ ಆ ಯುವಕರ ಗತಿ ಏನು ? ಅವರಿಗೆ ದಾರಿ ತೋರಿಸುವವರು ಯಾರು? ಅವರು ರೆಗ್ಯುಲರ್ ರಿಕ್ರೂಟ್‌ಮೆಂಟಿನಲ್ಲಿ ಬರುವುದಿಲ್ಲ ದಿನಗೂಲಿ ಮೇಲೆ ಕೆಲಸ ಮಾಡಿ ಈಗ ಅವರು ತೊಂದರೆ ಈಡಾಗಿದ್ದಾರೆ. ಈ ರೀತಿಯ ತಾತ್ಕಾಲಿಕ ಯೋಜನೆಗಳಿಗಿಂತ ಕಾಯಂ ಆದ ನಿರಂತರವಾಗಿ ನಿರುದ್ಯೋಗ ಸಮಸ್ಯೆಯನ್ನು ಬಿಡಿಸತಕ್ಕ ಯೋಜನೆಯನ್ನು ಸರ್ಕಾರದವರು ಹಾಕಿಕೊಳ್ಳಬೇಕು. ಎಲ್ಲಾ ಕೆಲಸ ಒಂದೇ ದಿವಸದಲ್ಲಿ ಆಗುವುದಿಲ್ಲ. ಹಂತ ಹಂತವಾಗಿ ಇದನ್ನು ಮಾಡಬೇಕಾಗುತ್ತದೆ. ಇಂಥ ಯೋಜನೆಗಳನ್ನು ತಾವು ಹಾಕಬೇಕೆಂದು ನಾನು ಒತ್ತಾಯ ಮಾಡುತ್ತಿದ್ದೇನೆ. ರೈತರ ಉದ್ಧಾರವಾಗಬೇಕಾದರೆ ಒಕ್ಕಲುತನದಲ್ಲಿ ನವೀಕರಣವಾಗಿ ಕ್ರಾಂತಿಕಾರಕವಾದ ಬದಲಾವಣೆ ಯಾವ ರೀತಿ ಆಗಬೇಕೆಂದು ಹೇಳುತ್ತೇವೆಯೋ ಅದರಂತೆ ಔದ್ಯೋಗಿಕ ಕೇಂದ್ರದಲ್ಲಿ ಕೂಡ ಇವತ್ತು ಕ್ರಾಂತಿಕಾರಕವಾದ ಬದಲಾವಣೆಯಾಗಬೇಕು. ಎಂಪ್ಲಾಯಟ್ ಓರಿಯೆಂಟಡ್ ಆಗ್ರೋ ಬೇಸ್ಡ್ ಇಂಡಸ್ಟ್ರೀಸ್ ಮಾಡತಕ್ಕ ವ್ಯವಸ್ಥೆ ಬಗ್ಗೆ ತಮ್ಮ ಭಾಷಣದಲ್ಲಿ ಎಲ್ಲೂ ಹೇಳಿಲ್ಲ. ಇಂಥ ಉದ್ದವಾದ ಆಯವ್ಯಯ ಭಾಷಣದಲ್ಲಿ ಈ ಬಗ್ಗೆ ಒಂದು ಮಾತನ್ನು ಹೇಳದಿರುವುದರಿಂದ ನಿಜವಾಗಿಯೂ ಮನಸ್ಸಿಗೆ ತುಂಬಾ ವೇದನೆಯಾಗುತ್ತಿದೆ. ಸರ್ಕಾರಕ್ಕೆ ಈ ಬಗ್ಗೆ ಏನೂ ಆಲೋಚನೆ ಇಲ್ಲವೇ ಎಂದು ಕೇಳಬೇಕಾಗುತ್ತದೆ. ಸರ್ಕಾರ ಈ ಬಗ್ಗೆ ಆಯವ್ಯಯ ಭಾಷಣದಲ್ಲಿ ಹೇಳಬೇಕಾಗಿತ್ತು. ಸರ್ಕಾರ ಆಲೋಚನೆ ಮಾಡಬೇಕಾಗಿತ್ತು. ಏಕೆಂದರೆ ಇದೆಲ್ಲಾ ಆಡಳಿತಪಕ್ಷದ ಘೋಷಣೆಯಾಗಿತ್ತು. ಅವರ ಪಕ್ಷದ ಘೋಷಣೆಯನ್ನು ಕೈಗೂಡಿಸುವುದಕ್ಕೆ ಕೊಂಚವಾದರೂ ಪ್ರಯತ್ನ ಪಡಬೇಕಾಗಿತ್ತು. ತಾವು ಮಾಡುತ್ತಿರುವುದನ್ನು ನೋಡಿದಾಗ ಕನ್ನಡಿಯಲ್ಲಿ ಗಂಟು ತೋರಿಸಿ ಜನರಿಗೆ ಮಂಕು ಹಿಡಿಯುವಂತೆ ಮಾಡಿದ್ದೀರಿ ಎಂದು ಹೇಳಬೇಕಾಗುತ್ತದೆ. ಈಗಲಾದರೂ ಸರ್ಕಾರದವರು ಆಲೋಚನೆ ಮಾಡಿ ಈ ಬಗ್ಗೆ ಸೂಕ್ತ ಕಾರ್ಯಕ್ರಮವನ್ನು ಹಾಕಿಕೊಳ್ಳಿ ಎಂದು ಹೇಳಬಯಸುತ್ತೇನೆ.

*****

# ಬಡವರಿಗೆ ನಿವೇಶನ ಹಂಚಿಕೆ

ದಿನಾಂಕ: 21.3.1979

**ಬಡವರಿಗೆ ನೆಲೆ ಕಲ್ಪಿಸುವ ಮನೆ ಕೇವಲ ನೆಪಮಾತ್ರಕ್ಕಾಗಬಾರದು. ಬಡವನಿಗೆ ಒಂದು ಮನೆ ನಿರ್ಮಿಸಿಕೊಟ್ಟರೆ ಅದು ಕನಿಷ್ಠ 10–15 ವರ್ಷವಾದರೂ ಸುಭದ್ರವಾಗಿರಬೇಕು ಎಂದು ಹೇಳುವ ಬೊಮ್ಮಾಯಿ ಅವರು ಸರ್ಕಾರದ ಕಣ್ಣಿಗೆ ಕಾಣದ ಕೆಲವು ಭ್ರಷ್ಟತೆಯನ್ನು ಈ ಚರ್ಚೆಯಲ್ಲಿ ಬಯಲು ಮಾಡಿದ್ದಾರೆ.**

**ಶ್ರೀ ಎಸ್.ಆರ್.ಬೊಮ್ಮಾಯಿ:** ಇನ್ನೂ ಪೀಪಲ್ಸ್ ಹೌಸಿಂಗ್ ಸ್ಕೀಂ ಬಗ್ಗೆ ಹೇಳುವುದಾದರೆ ಇದು ನಮ್ಮ ಮಾನ್ಯ ಮುಖ್ಯಮಂತ್ರಿಗಳಿಗೆ ಬಹಳ ಪ್ರಿಯವಾದ ಹೃದಯಕ್ಕೆ ಸಮೀಪವಾದಂಥ ಒಂದು ಯೋಜನೆ. ಅವರಿಗೆ ಇದು ಒಂದು ಹೆಮ್ಮೆಯ ಯೋಜನೆ. ಅಷ್ಟೊಂದು ಪ್ರೀತಿ ಅವರಿಗೆ ಈ ಯೋಜನೆಯ ಬಗ್ಗೆ ಇದೆ. ಏಕೆಂದರೆ ಅವರು ಈ ಯೋಜನೆಯನ್ನು ಜಾರಿಗೆ ತಂದು ರಾಜ್ಯದಲ್ಲೇ ಅಲ್ಲ ರಾಷ್ಟ್ರದಲ್ಲೂ ಕೂಡ ಒಂದು ಕೂತೂಹಲವನ್ನು ಕೆರಳಿಸಿದ್ದಾರೆ. ಅದನ್ನು ನಾನು ಒಪ್ಪುತ್ತೇನೆ. ಏನು ಗತಿ ಇಲ್ಲದಂಥ ಬಡವನಿಗೆ ಎಂಥದ್ದೇ ಆಗಲೀ ಸ್ವಲ್ಪ ನೆರಳು ಕೊಟ್ಟರೆ ಇಷ್ಟಾದರೂ ಸಿಕ್ಕಿತಲ್ಲಾ ಎಂದು ಅವನು ಸಂತೋಷಪಡುತ್ತಾನೆ. ಇಂಥ ಒಂದು ವಾತಾವರಣ ನಿರ್ಮಾಣವಾಗಿದೆ. ಮನೆಗಳ ಬಗ್ಗೆ ಯಾವ ರೀತಿ ಕಟ್ಟಿದ್ದಾರೆ, ಮತ್ತು ಅವುಗಳು ಯಾವ ಸ್ಥಿತಿಯಲ್ಲಿವೆ ಎಂಬುದರ ಬಗ್ಗೆ ಹೆಚ್ಚು ಮಾತನಾಡುವುದಿಲ್ಲ. ಬಡವರಿಗೆ ಮನೆ ಕಟ್ಟಿಕೊಡತಕ್ಕಂಥ ಕೆಲಸ ಬಹಳ ಉತ್ತಮವಾದ ಯೋಜನೆ. ಬಹಳ ಆದರ್ಶವಾದ ಯೋಜನೆ, ಈ ಕಾರ್ಯಕ್ರಮದ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಅದಕ್ಕೆ ನಾವುಗಳೆಲ್ಲರೂ ಇದುವರೆಗೂ ಬೆಂಬಲ ಕೊಟ್ಟುಕೊಂಡು ಬಂದಿದ್ದೇವೆ ಇನ್ನೂ ಮುಂದೆಯು ಅದೇ ರೀತಿಯ ಸಹಕಾರವನ್ನು ಕೊಡುತ್ತೇವೆ. ಆದರೆ ಆ ಯೋಜನೆ ಹೇಳಿಕೊಳ್ಳುವ ರೀತಿಯಲ್ಲಿ ನಡೆಯುತ್ತಿಲ್ಲ. ಅನೇಕ ಕಡೆ ಮನೆಗಳನ್ನು ಕಟ್ಟಿದ್ದಾರೆ. ಪ್ರತಿಯೊಬ್ಬರಿಗೂ ಮನೆ ಬೇಕು. ಆದರೆ ಯಾರಿಗೆ ಆ ಮನೆಯನ್ನು ಕೊಟ್ಟಿದ್ದೇವೆಯೋ ಆತನು ಕೊನೆಯ ಪಕ್ಷ 10–15 ವರ್ಷಗಳವರೆಗಾದರೂ ಆ ಮನೆಯಲ್ಲಿ ವಾಸಮಾಡುವುದಕ್ಕೆ ಅನುಕೂಲವಾಗಿರತಕ್ಕಂಥ ಗಟ್ಟಿಮುಟ್ಟಾಗಿರತಕ್ಕಂಥ ಮನೆಗಳು ಬೇಕು. ಕೆಲವು ಕಡೆ ಮನೆಗಳು ಬಿದ್ದು ಹೋಗಿವೆ ಹೆಂಚುಗಳು ಒಡೆದು ಹೋಗಿವೆ, ಬಾಗಿಲು ಹಾಳಾಗಿವೆ. ಆ ಬಡವನು ಪುನಃ ರಿಪೇರಿ ಮಾಡತಕ್ಕಂಥ ಶಕ್ತಿ ಆತನಲ್ಲಿ ಇಲ್ಲ. ಇದನ್ನು ನಾನು ಡಿಸ್ಟ್ರಿಕ್ಟ್ ಡೆವೆಲಪ್‌ಮೆಂಟ್ ಕಮಿಟಿ ಮೀಟಿಂಗ್‌ನಲ್ಲಿ ಚರ್ಚೆ ಮಾಡಿದ್ದೇನೆ. ಬಿ.ಡಿ.ಓ.ರವರನ್ನು ಕೇಳಿದರೆ ನಮ್ಮಲ್ಲಿ ಹಣ ಇಲ್ಲವೆಂದು ಹೇಳುತ್ತಾರೆ, ಅನಂತರ ಸ್ವಲ್ಪ ಹಣ ಕೊಟ್ಟಿದ್ದರೆಂದು ತಿಳಿಯಿತು. ನಾನು

ತಮಿಳುನಾಡಿನಲ್ಲಿ ನೋಡಿದ್ದೇನೆ. ಅಲ್ಲಿ ಅವರು ಪೀಪಲ್ಸ್ ಹೌಸಿಂಗ್ ಸ್ಕೀಂನಲ್ಲಿ ಹಾಗೂ ಕ್ಲಿಯರೆನ್ಸ್ ಯೋಜನೆಯಲ್ಲಿ ಬಹಳ ಚೆನ್ನಾಗಿ ಮನೆಗಳನ್ನು ಕಟ್ಟಿದ್ದಾರೆ. ಅಲ್ಲಿ ಆ ಮನೆಗಳು ಸುಮಾರು ಕೊನೆಯ ಪಕ್ಷ 20 ವರ್ಷಗಳವರೆಗಾದರು ಬಾಳಿಕೆ ಬರತಕ್ಕಂಥ ಮನೆಗಳನ್ನು ಕಟ್ಟಿದ್ದಾರೆ ಕೆಲವು ಕಡೆ ಮಲ್ಟಿಸ್ಟೋರೈಡ್ ಕಟ್ಟಡಗಳನ್ನೂ ಕೂಡ ಕಟ್ಟಿದ್ದಾರೆ. ಇನ್ನು ಮುಂದಾದರೂ ಕೊನೆಯ ಪಕ್ಷ 10–15 ವರ್ಷಗಳವರೆಗಾದರೂ ಗಟ್ಟಿಮುಟ್ಟಾಗಿರತಕ್ಕಂಥ ಮನೆಗಳನ್ನು ಕಟ್ಟೋಣ.

ಅದೇ ರೀತಿಯಲ್ಲಿ ಮನೆ ನಿವೇಶನ ಹಂಚಿಕೆಯ ವಿಚಾರದಲ್ಲಿ ಹೇಳುವುದಾದರೆ. ನಾನು ಅನೇಕ ಕಡೆ ನೋಡಿದ್ದೇನೆ. ಊರು ಬಿಟ್ಟು ಒಂದು ಗಾವುದ ದೂರದಲ್ಲಿ ಸೈಟುಗಳನ್ನು ಕೊಟ್ಟಿದ್ದೀರಿ ಅಲ್ಲಿ ನೀರು ಇಲ್ಲ, ದೀಪ ಇಲ್ಲ. ಅಲ್ಲಿ ಜನರು ಹೇಗೆ ವಾಸ ಮಾಡಬೇಕು? ಅಷ್ಟು ದೂರದಲ್ಲಿ ಜಾಗವನ್ನು ತೋರಿಸುವುದಕ್ಕೂ ಒಂದು ಕಾರಣ ಉಂಟು. ಊರಿನ ಪಕ್ಕದಲ್ಲಿರುವ ಜಮೀನು ಸ್ವಾಧೀನ ಮಾಡಿಕೊಳ್ಳಬೇಕಾದರೆ ಆ ಜಮೀನಿನ ಒಡೆಯ ರಾಜಕೀಯ ಪುಡಾರಿಯಾಗಿರುತ್ತಾನೆ ಅಥವಾ ಆತನು ಶ್ರೀಮಂತನಾಗಿರುತ್ತಾನೆ ಆತನ ಜಮೀನನ್ನು ಸ್ವಾಧೀನ ಮಾಡಿಕೊಳ್ಳದೇ ಊರಿನಿಂದ ಬಹಳ ದೂರದಲ್ಲಿ ಸೈಟುಗಳನ್ನು ಕೊಟ್ಟು ಅಲ್ಲಿ ಮನೆಗಳನ್ನು ಕಟ್ಟಿಸಿಕೊಟ್ಟರೆ ಏನು ಪ್ರಯೋಜನ? ಅದರಿಂದ ಈ ಯೋಜನೆಯ ಕಾರ್ಯಾಚರಣೆಯಲ್ಲಿ ಅನೇಕ ನ್ಯೂನತೆಗಳಿವೆ, ಮತ್ತೆ ಮನೆಗಳನ್ನು ಕಟ್ಟತಕ್ಕಂಥಾ ಕಂಟ್ರಾಕ್ಟ್‌ದಾರರು ಹಾಗೂ ಅಲ್ಲಿರುವ ಅಧಿಕಾರಿಗಳು ಇದನ್ನು ಸರಿಯಾದ ರೀತಿಯಲ್ಲಿ ಆಚರಣೆಗೆ ತಂದಿಲ್ಲ. ಕಳೆದ 4–5 ವರ್ಷಗಳಿಂದ ನಡೆದುಕೊಂಡು ಬಂದಿರತಕ್ಕಂಥಾದ್ದರಲ್ಲಿ ಆಗಿರುವ ಕುಂದು ಕೊರತೆಗಳನ್ನು ನಿವಾರಣೆ ಮಾಡತಕ್ಕಂಥ ವ್ಯವಸ್ಥೆ ಕೂಡಲೇ ಆಗಬೇಕು. ಇಲ್ಲದಿದ್ದರೆ ತಾವು ಈ ವರ್ಷ ಒಂದು ಲಕ್ಷ ಮನೆಗಳನ್ನು ಕಟ್ಟಿಸಿಕೊಡಬೇಕೆಂದು ಏನೂ ಆಲೋಚನೆ ಮಾಡಿದ್ದೀರಿ. ಅದು ನಿಜವಾಗಿಯೂ ಪ್ರಯೋಜನಕಾರಿಯಾಗಿ ನಡೆಯುವುದಿಲ್ಲ. ಆದ್ದರಿಂದ ನಾನು ಮಾನ್ಯ ಮುಖ್ಯಮಂತ್ರಿಗಳಲ್ಲಿ ಬಿನ್ನಹ ಮಾಡಿಕೊಳ್ಳುವುದೇನೆಂದರೆ ಕಟ್ಟಿದ ಮನೆಗಳನ್ನು ಪರಿಶೀಲಿಸಿಕೊಂಡು ಬರಲು ಒಂದು ಸದನ ಸಮಿತಿ ರಚಿಸಿ. ಕಟ್ಟಿದ ಮನೆಗಳನ್ನು ಸರ್ವೆ ಮಾಡಿ ಅವುಗಳನ್ನು ನೋಡಿಕೊಂಡು ಬರಲಿ, ಎಲ್ಲೆಲ್ಲಿ ಅನಾಹುತವಾಗಿದೆ ಏನು ವ್ಯವಸ್ಥೆ ಮಾಡಬೇಕಾಗಿದೆ ಎಂಬುದನ್ನು ತಿಳಿಯಲು ಕೆಲವು ಕಡೆ ಹೋಗಿ ನೋಡಿಕೊಂಡು ಬರೋಣ, ಯಾವ ಸ್ಥಿತಿಯಲ್ಲಿ ಮನೆಗಳು ಇವೆ, ನಿಜವಾಗಿಯೂ ಜನಗಳು ಆ ಮನೆಗಳಲ್ಲಿ ವಾಸ ಮಾಡುತ್ತಿದ್ದಾರೆಯೇ? ಎಂಬುದನ್ನು ತಿಳಿದುಕೊಳ್ಳೋಣ ಮತ್ತೆ ನಿಜವಾಗಿಯೂ ಯಾವ ಹರಿಜನ ಗಿರಿಜನರಿಗೆ ಮನೆಗಳು ಸಿಕ್ಕಬೇಕೋ ಅವರಿಗೆ ಸಿಕ್ಕಿಲ್ಲ. ಪೀಪಲ್ ಹೌಸಿಂಗ್ ಸ್ಕೀಂ ಪ್ರಾರಂಭವಾದಾಗಿನಿಂದ ಅಂದರೆ

1973-74ನೇ ಇಸವಿಯಿಂದ ಇಲ್ಲಿಯವರೆಗೆ 94,655 ಮನೆಗಳನ್ನು ಕಟ್ಟಿದ್ದಾರೆ. ಅದಕ್ಕೆ ಖರ್ಚು ಮಾಡಿದ ಹಣ ಅಂದರೆ ಕಳೆದ 5 ವರ್ಷಗಳಲ್ಲಿ 21.15 ಕೋಟಿ ರೂಪಾಯಿಗಳು. ಆದರೆ ಈ ವರ್ಷದಲ್ಲಿ 20 ಕೋಟಿ ರೂಪಾಯಿ ಹಣವನ್ನು ಖರ್ಚು ಮಾಡಬೇಕೆಂದಿದ್ದೀರಿ, ಅದರಲ್ಲಿ ಜನತಾ ಗೃಹ ನಿರ್ಮಾಣ ಯೋಜನೆಗೆ ನಿಗದಿಪಡಿಸಿರುವ ಹಣವೆಷ್ಟು? ಹುಡ್ಕೋ ಯೋಜನೆಗೆ ನಿಗದಿಪಡಿಸಿರುವ ಹಣವೆಷ್ಟು ಎಂಬುದನ್ನು ವಿವರವನ್ನು ಹೇಳಬೇಕು. 20 ಕೋಟಿ ರೂಪಾಯಿಗಳಲ್ಲಿ ಹುಡ್ಕೋ ಸ್ಕೀಂನ ಕೆಳಗೆ ಬಂದಂತಹ ಹಣ 10 ಕೋಟಿ ಇರಬೇಕು. 21-22 ಕೋಟಿ ರೂಪಾಯಿಗಳನ್ನು ಕಳೆದ 5 ವರ್ಷಗಳಲ್ಲಿ ಖರ್ಚುಮಾಡಿದ್ದೀರಿ, ಆದರೆ ಈ ವರ್ಷ ಒಂದರಲ್ಲೇ 20 ಕೋಟಿ ರೂಪಾಯಿಗಳನ್ನು ಈ ಯೋಜನೆಯಲ್ಲಿ ಖರ್ಚು ಮಾಡಬೇಕೆಂದಿರುವಾಗ ಕೇಂದ್ರ ಸರ್ಕಾರದಿಂದ ಬಂದಂತಹ ಹಣ ಎಷ್ಟು? 10 ಕೋಟಿ ರೂಪಾಯಿಗಳು ಹುಡ್ಕೋ ಯೋಜನೆಗೆ ಬಿಟ್ಟರೆ ಉಳಿದ ಅನೇಕ ಯೋಜನೆಗಳಿಗೆ ಕೇಂದ್ರದಿಂದ ಹಣ ಬಂದಿದೆ. ಅದನ್ನು ತಮ್ಮ ಭಾಷಣದಲ್ಲಿ ಎಲ್ಲೂ ನಮೂದು ಮಾಡಿಲ್ಲ. ಕೇಂದ್ರ ಸರ್ಕಾರದಿಂದ ನಮ್ಮ ಹಕ್ಕಿನ ಮೇಲೆ ಬಂದಂತಹ ಹಣ ಎಷ್ಟು ಎಂಬುದನ್ನು ತಿಳಿಸಬೇಕು. ಯಾವ ಯಾವ ಬಾಬ್ತಿನ ಮೇಲೆ ಎಷ್ಟೆಷ್ಟು ಹಣವನ್ನು ಕೇಂದ್ರ ಸರ್ಕಾರದವರು ಕೊಟ್ಟಿದ್ದಾರೆಂಬುದನ್ನು ದಯಮಾಡಿ ವಿವರಗಳನ್ನು ಕೊಡಿ, ಅದು ನಮಗೆ ಗೊತ್ತಾಗಬೇಕು. ನಾವು ಸರ್ಕಾರಕ್ಕೆ ಕೊಡತಕ್ಕಂಥ ತೆರಿಗೆಯಲ್ಲಿ ಯಾವ ಯಾವ ಯೋಜನೆಗಳಿಗೆ ಕೇಂದ್ರ ಸರ್ಕಾರದಿಂದ ನೇರವಾಗಿ ಬಂದಂತಹ ಸಹಾಯ ಎಷ್ಟು? ಎಂಬುದನ್ನು ತಿಳಿಸಬೇಕು. ನನಗೆ ತಿಳಿದ ಹಾಗೆ ಕೇಂದ್ರ ಸರ್ಕಾರದ ಯೋಜನೆಗಳ ಪ್ರಕಾರ ಜನತಾ ಗೃಹ ನಿರ್ಮಾಣ ಯೋಜನೆಗೆ ಹಾಗೂ ಇತರೇ ಯೋಜನೆಗಳಿಗೆ ಹಣವನ್ನು ಕೊಡುತ್ತಿದ್ದಾರೆ.

**ಶ್ರೀ ಡಿ. ದೇವರಾಜ ಅರಸ್** : ತಾವು ಏನು ಹೇಳಿದಿರ ಅದನ್ನು ಕೊಡಿ ಸ್ವಾಮಿ, ತಾವು ಕೇಳಿದ್ದರಲ್ಲಿ ಈಗ ಯಾವುದೂ ಇಲ್ಲ, ನಿಂತು ಹೋಗಿವೆ.

**ಶ್ರೀ ಎಸ್.ಎಂ. ಯಾಹ್ಯಾ** : 14 ನಮ್ಮದು, 6 ಹುಡ್ಕೋ ಸ್ಕೀಂನಲ್ಲಿ ಬರುತ್ತದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಇದರಲ್ಲಿ ನಮ್ಮ ಹಕ್ಕು ಇದೆ. ಇಲ್ಲವೆಂದು ಹೇಳುವುದಿಲ್ಲ.

**ಶ್ರೀ ಡಿ. ದೇವರಾಜ ಅರಸ್** : ನಿಮಗೆ ಎಷ್ಟು ಗೌರವ ಬೇಕೋ ಅಷ್ಟನ್ನು ಕೊಡುತ್ತೇವೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಹಿಂದಿನ 5 ವರ್ಷಗಳಲ್ಲಿ ಕೇಂದ್ರದಿಂದ ಈ ಜನತಾ ಗೃಹ ನಿರ್ಮಾಣ ಯೋಜನೆಗೆ ಬಂದಂತಹ ಹಣ ಎಷ್ಟು? ಕಳೆದ 2 ವರ್ಷಗಳಲ್ಲಿ ಕೇಂದ್ರದಿಂದ ಬಂದಂತಹ ಹಣ ಎಷ್ಟು? ಅದನ್ನು ಹೇಳಿ, ಕೇಂದ್ರ ಸರ್ಕಾರದ ಧೋರಣೆಯಲ್ಲಿ ಬಹಳ ಬದಲಾವಣೆಯಾಗಿದೆ. ರಾಜ್ಯ ಸರ್ಕಾರಗಳಿಗೆ ಹೆಚ್ಚು ಹೆಚ್ಚು ಹಣ ಸಹಾಯವನ್ನು ಕೊಡುತ್ತಿದ್ದಾರೆ. ನನಗೆ ಗೊತ್ತಿರುವ ಅಂಕಿ ಸಂಖ್ಯೆಗಳ ಪ್ರಕಾರ ಕೇಂದ್ರದಿಂದ ಹೋದ ಸಲ 80 ಕೋಟಿಯಲ್ಲಿ 66 ಕೋಟಿ ರೂಪಾಯಿಗೂ ಸಹಾಯ ಧನದ ರೂಪದಲ್ಲಿ ಬರುತ್ತಿದೆ. ಈ ಸಾರಿ ಈಗಾಗಲೇ 56 ಕೋಟಿ ರೂಪಾಯಿಗಳನ್ನು ಕೊಟ್ಟಿದ್ದಾರೆ. ಸಾಮಾನ್ಯ ತೆರಿಗೆಯಲ್ಲಿ 6 ಕೋಟಿ ರೂಪಾಯಿಗಳು ಹೆಚ್ಚಿಗೆ ಬಂದಿದೆ. ಇದು ಕೇಂದ್ರ ಸರ್ಕಾರದ ಧೋರಣೆಯಲ್ಲಿ ಆದಂತಹ ಬದಲಾವಣೆಯಿಂದ ಬಂದಿದೆ.

**ಶ್ರೀ ಎಸ್.ಎಂ. ಯಾಹ್ಯಾ:** ಇದು ಸೆಂಟ್ರಲ್ ಫೈನಾನ್ಸ್ ಕಮಿಷನ್‌ನಿಂದ ಬಂದಿದೆ. 8ನೇ ಫೈನಾನ್ಸ್ ಕಮಿಷನ್ ಬಂದದ್ದು, ಕೇಂದ್ರದಲ್ಲಿ ಹೊಸ ಸರ್ಕಾರ ಬಂದ ಮೇಲೆ ಸ್ಟೇಟ್ ಮೆಮೋ ಅನ್ನು ಕೊಟ್ಟಿದ್ದು ನೋಡಿದ್ದೇವೆ. ಹಿಂದೆ ಇದ್ದುದನ್ನು ನೋಡಿದ್ದೇವೆ. ಒತ್ತಾಯ ಮಾಡಿದ್ದೇವೆ. ಎಷ್ಟೋ ವಿಚಾರಗಳಲ್ಲಿ ಫೈನಾನ್ಸ್ ಕಮಿಷನ್ ಮಾಡಿದ ಶಿಫಾರಸ್ಸುಗಳನ್ನು ಕೇಂದ್ರ ಸರ್ಕಾರದವರು ಒಪ್ಪಿಲ್ಲ. ಎಲ್ಲಾ ಶಿಫಾರಸ್ಸುಗಳನ್ನು ಒಪ್ಪಿರಲಿಕ್ಕೆ ಇಲ್ಲ ಈಗ ರಾಜ್ಯಕ್ಕೆ ಅಧಿಕ ಮೊತ್ತದಲ್ಲಿ ಹಣ ಬರತಕ್ಕ ವ್ಯವಸ್ಥೆಯಾಗಿದೆ. ಅಂದರೆ ಒಂದೇ ರಾಜ್ಯಕ್ಕೆ ಅಲ್ಲ, ಎಲ್ಲಾ ರಾಜ್ಯಗಳಿಗೂ ಆಗಿದೆ. ಬದಲಾದ ಆ ನೀತಿಯನ್ನು ಸ್ವಾಗತ ಮಾಡಬೇಕಾಗಿದೆ.

**ಶ್ರೀ ಡಿ. ದೇವರಾಜ ಅರಸ್ :** ಆ ನೀತಿಯನ್ನು ಬದಲಾವಣೆ ಮಾಡುವುದಕ್ಕೆ ಒತ್ತಾಯ ಮಾಡಿ ಮಾಡಿಸಲಾಗಿದೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ನೀವು ಹಿಂದೆಲ್ಲ ಎಷ್ಟೇ ಒತ್ತಾಯಗಳನ್ನು ಮಾಡಿದರೂ ಮಾಡಿರಲಿಲ್ಲ. ನಮ್ಮ ಸರ್ಕಾರ ಬಂದ ಮೇಲೆ ಮಾಡಿದೆ. ನೀವು ಮೊದಲಿನಿಂದಲೂ ಒತ್ತಾಯ ಮಾಡುತ್ತಲೇ ಇದ್ದೀರಿ ಅದಕ್ಕೆ ಆಗಿನ ಪ್ರಧಾನಿಗಳು ಒಪ್ಪಿರಲಿಲ್ಲ. ಈಗಿನ ಪ್ರಧಾನಿಗಳು ಒಪ್ಪಿದ್ದಾರೆ ಇಷ್ಟೇ ವ್ಯತ್ಯಾಸ.

****

# ಪ್ರಾಥಮಿಕ ಶಿಕ್ಷಣ ಸುಧಾರಣೆ

ದಿನಾಂಕ: 21.3.1979

**ಶ್ರೀ ಬೊಮ್ಮಾಯಿ ಅವರು ತಮ್ಮ ಬಜೆಟ್ ಭಾಷಣದಲ್ಲಿ ವಿದ್ಯಾಭ್ಯಾಸ ಕುರಿತು ಆಡಿರುವ ಮಾತುಗಳು ಹೊಸ ಆಲೋಚನೆ ಹಾಗೂ ಚಿಂತನೆಗೆ ದಾರಿ ಮಾಡಿಕೊಡುತ್ತವೆ. ದೇಶದ ವಿವಿಧ ರಾಜ್ಯಗಳಲ್ಲಿ ಪ್ರಾಥಮಿಕ ಶಿಕ್ಷಣ ಕುರಿತು ಕೈಗೊಂಡಿರುವ ಕೆಲಸಗಳನ್ನು ಉದಾಹರಿಸುತ್ತಾ ರಾಜ್ಯದಲ್ಲಿ ಅದನ್ನು ಅನುಷ್ಠಾನಗೊಳಿಸಿ ಪ್ರಾಥಮಿಕ ಶಿಕ್ಷಣವನ್ನು ಗಟ್ಟಿಗೊಳಿಸಲು ಸಲಹೆ ನೀಡಿದ್ದಾರೆ.**

**ಶ್ರೀ ಎಸ್.ಆರ್. ಬೊಮ್ಮಾಯಿ :** ಇನ್ನು ವಿದ್ಯಾಭ್ಯಾಸದ ವಿಚಾರವಾಗಿ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಮಾನ್ಯ ಹಣಕಾಸು ಸಚಿವರು ತಮ್ಮ ಭಾಷಣದಲ್ಲಿ ನಮ್ಮ ರಾಜ್ಯದಲ್ಲಿ ಓದು ಬರಹ ಬಲ್ಲವರ ಸಂಖ್ಯೆ ಶೇಕಡ 31 ಎಂದು ಹೇಳಿದ್ದಾರೆ. ಅದು ಬಹಳ ದುರ್ದೈವದ ಸಂಗತಿ. ಸ್ವಾತಂತ್ರ್ಯ ಬಂದು 32 ವರ್ಷಗಳಾದರೂ ಕೂಡ ನಮಗೆ ಪ್ರತಿಯೊಬ್ಬರಿಗೂ ಓದುಬರಹವನ್ನು ಕಲಿಸಲಿಕ್ಕೆ ಸಾಧ್ಯವಾಗಿಲ್ಲ. ಇದು ಈ ಒಂದೇ ರಾಜ್ಯದಲ್ಲಿ ಅಲ್ಲ, ಎಲ್ಲಾ ರಾಜ್ಯಗಳಲ್ಲೂ ಇದೆ. ಕೆಲವು ರಾಜ್ಯಗಳಲ್ಲಿ ಹೆಚ್ಚಾಗಿದೆ. ಈವತ್ತಿನ ದಿವಸ ನಮ್ಮ ಸಂವಿಧಾನದ ಪ್ರಕಾರ 6 ರಿಂದ 14 ವರ್ಷ ವಯೋಮಿತಿಯೊಳಗಿರುವ ಮಕ್ಕಳಿಗೆ ಕಡ್ಡಾಯವಾಗಿ ಪ್ರಾಥಮಿಕ ಶಿಕ್ಷಣವನ್ನು ಕೊಡಬೇಕಾಗಿದೆ. ಇಲ್ಲಿ ತಾವೇನು ಒಂದು ಲೆಕ್ಕವನ್ನು ಕೊಟ್ಟಿದ್ದಿರಿ ಅದರ ಪ್ರಕಾರ ಮಕ್ಕಳ ಸಂಖ್ಯೆ 1.10 ಕೋಟಿಯಾದರೆ ಶಾಲೆಗೆ ಹೋಗುತ್ತಿರುವ ಮಕ್ಕಳ ಸಂಖ್ಯೆ 46.29 ಸಾವಿರ ಅಂದರೆ ಸುಮಾರು ಶೇಕಡ 54 ರಷ್ಟು ಮಂದಿ ಮಕ್ಕಳು ಶಾಲೆಗೆ ಹೋಗುತ್ತಿಲ್ಲ. ಈ ಬಗ್ಗೆ ಏನು ಕಾರ್ಯಕ್ರಮ ತೆಗೆದುಕೊಳ್ಳುತ್ತೀರಿ? ಈ ಒಂದು ವಿಚಾರವನ್ನು ನಾನು ಪದೇ ಪದೇ ಒತ್ತಿ ಹೇಳುತ್ತಿದ್ದೇನೆ. ನಾವು ಹಸಿರು ಕ್ರಾಂತಿ, ಬಿಳಿ ಕ್ರಾಂತಿ, ಔದ್ಯೋಗಿಕ ಕ್ರಾಂತಿ ಹೀಗೆ ಎಲ್ಲಾ ಕ್ರಾಂತಿಗಳ ಬಗ್ಗೆಯೂ ಮಾತನಾಡುತ್ತೇವೆ. ಆದರೆ ನನ್ನ ತಿಳಿವಳಿಕೆ ಮಟ್ಟಿಗೆ ಮುಖ್ಯವಾಗಿ ನಮ್ಮ ದೇಶಕ್ಕೆ ಅವಶ್ಯಕವಾಗಿ ಬೇಕಾಗಿರತಕ್ಕದ್ದು ಅಕ್ಷರ ಕ್ರಾಂತಿ. ಈ ಒಂದು ಕ್ರಾಂತಿಯಾದರೆ ಮಕ್ಕಳು ತಮ್ಮ ತಮ್ಮ ಬೆಳವಣಿಗೆ ಬಗ್ಗೆ ಹಾಗೂ ಈ ಅನೇಕ ವಿಚಾರಗಳ ಬಗ್ಗೆ ಅವು ಕಾರ್ಯರೂಪಕ್ಕೆ ತೊಡಗುತ್ತದೆ ಈ ದೃಷ್ಟಿಯಿಂದ ನೋಡಿದಾಗ ಸುಮಾರು 50–60 ಲಕ್ಷ ಮಕ್ಕಳು ಶಾಲೆಗೆ ಹೋಗುತ್ತಿಲ್ಲ, ಅದಕ್ಕೆ ಕಾರಣಗಳು ಅನೇಕ ಇವೆ. ಬಡತನ, ತಂದೆ ತಾಯಿಗಳಿಗೆ ಸರಿಯಾದ ತಿಳಿವಳಿಕೆ ಇಲ್ಲದಿರುವುದು, ಶಾಲೆಗಳಿಗೆ ಹೋಗಲಿಕ್ಕೆ ಸರಿಯಾದ ವ್ಯವಸ್ಥೆ ಇಲ್ಲದಿರುವುದು, ಹೀಗಾಗಿ ಇದರಲ್ಲಿ ಬಹಳ ಹಿಂದೆ ಬೀಳಲಾಗಿದೆ. ಇದನ್ನು ಪರಿಹರಿಸತಕ್ಕ ಒಂದು ವ್ಯವಸ್ಥೆಯಾಗಬೇಕು.

ನಾವು ವಿದ್ಯಾಭ್ಯಾಸಕ್ಕಾಗಿ ಖರ್ಚು ಮಾಡುತ್ತಿರುವುದು 15 ಕೋಟಿ ರೂಪಾಯಿಗಳು ಅದರಲ್ಲಿ ಹೆಚ್ಚಾಗಿ ವಿಶ್ವವಿದ್ಯಾನಿಲಯಗಳಿಗೆ, ಕಾಲೇಜುಗಳಿಗೆ ಹಾಗೂ ಹೈಸ್ಕೂಲುಗಳಿಗೆ ಖರ್ಚು ಮಾಡತಕ್ಕದ್ದಾಗಿರುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿರತಕ್ಕ ಮಕ್ಕಳಿಗೆ ಅಕ್ಷರ ಜ್ಞಾನ ನೀಡುವುದಕ್ಕೆ ಬಹಳ ಕಡಿಮೆ ಖರ್ಚು ಮಾಡಲಾಗುತ್ತಿದೆ. ಈ ಬಾಬ್ತಿಗಾಗಿ ಶೇಕಡ 10–15ರಷ್ಟು ಮಾತ್ರ ಖರ್ಚು ಮಾಡಲಾಗುತ್ತಿದೆ. ಆದ್ದರಿಂದ ಈ ಬಾಬ್ತಿಗೆ ಹೆಚ್ಚೆಚ್ಚು ಹಣವನ್ನು ಒದಗಿಸತಕ್ಕಂಥ ವ್ಯವಸ್ಥೆ ಮಾಡಬೇಕೆಂದು ಹೇಳುತ್ತೇನೆ. ಇದರ ಜೊತೆ ಶಾಲಾ ಕಟ್ಟಡಗಳನ್ನು ನೋಡಬೇಕು. ಅವುಗಳ ವ್ಯವಸ್ಥೆಯಂತೂ ಹೇಳತೀರದು. ಉದಾಹರಣೆಗೆ ಹೇಳುವುದಾದರೆ, ನಮ್ಮ ಹುಬ್ಬಳ್ಳಿ ಏರಿಯಾದಲ್ಲಿರತಕ್ಕ ಒಂದು ಹೆಣ್ಣು ಮಕ್ಕಳ ಶಾಲೆ ಟೇಕನ್ ಓವರ್ ಆಗಿದೆ. ಅಲ್ಲಿಗೆ ಒಮ್ಮೆ ಒಬ್ಬರು ಸ್ಥಳೀಯ ಅಧಿಕಾರಿಗಳನ್ನು ಕರೆದುಕೊಂಡು ಹೋದೆ ಅಲ್ಲಿ ಇರತಕ್ಕ ವಿದ್ಯಾರ್ಥಿನಿಯರ ಸಂಖ್ಯೆ ನೋಡಿದರೆ 1200 ಆದರೆ ಅಲ್ಲಿರತಕ್ಕದ್ದು ಕೇವಲ 6 ಕೊಠಡಿಗಳು ಅದೂ ಕೂಡ ಸುಮಾರು ಒಂದು ನೂರು ವರ್ಷದ ಹಿಂದಿನ ಕಟ್ಟಡ ಅದು ಯಾವಾಗ ಬೀಳುತ್ತದೋ ಗೊತ್ತಿಲ್ಲ ಅಲ್ಲಿ ಕುಡಿಯಲಿಕ್ಕೆ ನೀರು ಇಲ್ಲ ಮೂತ್ರಿ ವ್ಯವಸ್ಥೆ ಇಲ್ಲ.

**ಶ್ರೀ ಡಿ. ದೇವರಾಜ ಅರಸ್ :** ಆ ಶಾಲೆಗೆ ತಕ್ಷಣ ಸೂಕ್ತ ವ್ಯವಸ್ಥೆ ಮಾಡುವಂತೆ ನಾನು ಅಲ್ಲಿ ಜಿಲ್ಲಾಧಿಕಾರಿಗಳೊಡನೆ ಮಾತನಾಡಿದ್ದೇನೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಸಾಮಾನ್ಯವಾಗಿ ಯಾವ ಶಾಲೆಗಳಲ್ಲಾದರೂ ಮಕ್ಕಳ ಸಂಖ್ಯೆಗೆ ಅನುಗುಣವಾಗಿ ಕಟ್ಟಡದ ವ್ಯವಸ್ಥೆ ಇರುವುದಿಲ್ಲ. ಇವತ್ತಿನ ದಿವಸ 50 ಮಕ್ಕಳಿಗೆ ಒಂದು ಕೊಠಡಿ ಇರಬೇಕೆಂಬ ನಿಯಮ ಇದೆ. ಎಷ್ಟೋ ಕಡೆ ಸಾವಿರಾರು ಮಕ್ಕಳಿಗೆ ಸರಿಯಾಗಿ ಕುಳಿತುಕೊಳ್ಳತಕ್ಕ ವ್ಯವಸ್ಥೆ ಇರುವುದಿಲ್ಲ. ಹುಬ್ಬಳ್ಳಿ ಮಟ್ಟಿಗೆ ಹೇಳುವುದಾದರೆ ಅಲ್ಲಿ ಮಕ್ಕಳ ಸಂಖ್ಯೆಗೆ ಅನುಗುಣವಾಗಿ ಸುಮಾರು 300 ಕೊಠಡಿಗಳನ್ನು ಕಟ್ಟಿಸಿ ಕೊಡಬೇಕಾದ ಪರಿಸ್ಥಿತಿ ಇದೆ. ಇಲ್ಲದಿದ್ದರೆ ಅವರು ಅಲ್ಲಿ ಕುಳಿತುಕೊಳ್ಳುವುದಕ್ಕಾಗುವುದಿಲ್ಲ. ಇದೇ ಸ್ಥಿತಿ ಹಳ್ಳಿಗಳ ಕಡೆ ಕೂಡ ಇದೆ. ಸಾಕಷ್ಟು ಕೊಠಡಿಗಳನ್ನು ಒದಗಿಸಲಿಕ್ಕೆ ಏನು ತೊಂದರೆ ಇದೆ ಎಂದು ಕೇಳುತ್ತೇನೆ. ಶಾಲಾ ಕಟ್ಟಡಕ್ಕೆ 4 ಸಾವಿರ ರೂಪಾಯಿಗಳವರೆಗೆ ಕಾಂಟ್ರಿಬ್ಯೂಷನ್ ಕೂಡ ಹೆಚ್ಚು ಮಾಡಿದ್ದೀರಿ. ಆದರೂ ಕೂಡ ಸಾಕಷ್ಟು ಸ್ಥಳಾವಕಾಶವನ್ನು ಏಕೆ ಒದಗಿಸುತ್ತಿಲ್ಲ. ಕಪ್ಪು ಭೂಮಿಯಲ್ಲೇನೋ ಕಟ್ಟಡಗಳನ್ನು ಕಟ್ಟುವುದು ಕಷ್ಟ ಆದರೂ ಕೂಡ ಕಪ್ಪು ಭೂಮಿಯಲ್ಲಿ ಕಟ್ಟುವುದಕ್ಕೆ ಬೇರೆ ವ್ಯವಸ್ಥೆ ಇದೆ ಮತ್ತು ಕೆಂಪು ಭೂಮಿಯಲ್ಲಿ ಕಟ್ಟುವುದಕ್ಕೆ ಬೇರೆ ವ್ಯವಸ್ಥೆ ಇದೆ. ಕಡಿಮೆ ಎಂದರೆ ಒಂದು ಕಟ್ಟಡಕ್ಕೆ 10 ಸಾವಿರ ರೂಪಾಯಿಗಳು ಬೇಕಾಗುತ್ತದೆ. ಅಂದರೆ ನೀವು ಸುಮ್ಮನೆ 4 ಸಾವಿರ ರೂಪಾಯಿ

ಕಾಂಟ್ರಿಬ್ಯೂಷನ್ ಎಂದು ಮಾಡಿದ್ದೀರಿ. ಅದರಲ್ಲಿ ಅವಸರವಾಗಿ 4 ಕೊಠಡಿಗಳನ್ನು ಕಟ್ಟುತ್ತಾರೆ. ಅದರಿಂದ ಆಗತಕ್ಕ ಪ್ರಯೋಜನ ಬಹಳ ಕಡಿಮೆ. ಒಟ್ಟಿನಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದ ಬಗ್ಗೆ ಸರ್ಕಾರ ನಿರ್ಲಕ್ಷಿಸಿದೆ, ತನ್ನ ಕರ್ತವ್ಯ ಚ್ಯುತಿ ಮಾಡಿದೆ ಎಂದರೆ ತಪ್ಪಾಗಲಾರದು. ಇವತ್ತಿನ ದಿವಸ ಹುಡುಗರ ಸಂಖ್ಯೆಗೆ ಅನುಗುಣವಾಗಿ ಶಾಲಾ ಕೊಠಡಿಗಳ ವ್ಯವಸ್ಥೆ ಇಲ್ಲ. ಅದನ್ನು ಮಾಡತಕ್ಕ ಜವಾಬ್ದಾರಿ ಸರ್ಕಾರದ್ದು ಅದು ಕಾನ್‌ಸ್ಟಿಟ್ಯೂಷನಲ್ ಅಬ್ಲಿಗೇಷನ್. ಆ ಒಂದು ಪವಿತ್ರ ಕರ್ತವ್ಯವನ್ನು ಮಾಡತಕ್ಕ ವಿಚಾರವನ್ನು ತಾವು ಮಾಡಬೇಕೆಂದು ಸಲಹೆ ಮಾಡುತ್ತೇನೆ. ಶಿಕ್ಷಣ ಇಲಾಖೆಯ ಬಗ್ಗೆ ವಿವರವಾಗಿ ಬೇಡಿಕೆಗಳು ಬಂದಾಗ ಹೇಳತಕ್ಕ ವಿಚಾರಗಳನ್ನು ಹೇಳುತ್ತೇನೆ. ಈಗ ಒಂದು ಮಾತನ್ನು ವಿಶ್ವವಿದ್ಯಾನಿಲಯಗಳ ಬಗ್ಗೆ ಹೇಳಬೇಕಾಗಿದೆ. ವಿಶ್ವವಿದ್ಯಾನಿಲಯಗಳ ಹಾಗೂ ಕಾಲೇಜುಗಳ ಸಂಖ್ಯೆ ಜಾಸ್ತಿಯಾಗಿದೆ. ಒಂದೊಂದು ಕಾಲೇಜಿನಲ್ಲೂ ಸುಮಾರು 2–3 ಸಾವಿರ ವಿದ್ಯಾರ್ಥಿಗಳಿದ್ದಾರೆ ಈ ಬಗ್ಗೆ ಸರ್ಕಾರದ ಒಂದು ಕರಿಕ್ಯುಲಮ್ ಏನಿದೆ ಅದನ್ನು ಬದಲಾವಣೆ ಮಾಡತಕ್ಕ ಆಲೋಚನೆ ಏನಾದರೂ ಇದೆಯೇ ಎಂದು ಕೇಳಬಯಸುತ್ತೇನೆ. ಅಥವಾ ಇದೇ ರೀತಿ ನಿರುದ್ಯೋಗಿ ಪದವೀಧರರನ್ನು ಹಾಗೂ ವಿದ್ಯಾವಂತರನ್ನು ರೂಪಿಸತಕ್ಕ ಕಾರ್ಖಾನೆಗಳಾದ ಕಾಲೇಜುಗಳನ್ನು ಹಾಗೂ ವಿಶ್ವವಿದ್ಯಾನಿಲಯಗಳನ್ನು ಮುಂದುವರೆಸಿಕೊಂಡು ಹೋಗುತ್ತೀರಾ ಇದರ ಬಗ್ಗೆ ಅನೇಕ ರಾಜ್ಯಗಳಲ್ಲಿ ಬದಲಾವಣೆ ನಡೆಯುತ್ತಿದೆ. ಅಲ್ಲಿ ಜಾಬ್ ಓರಿಯಂಟೆಡ್ ಎಜುಕೇಷನ್ ಕೊಡುತ್ತಿದ್ದಾರೆ.

ಪಂಜಾಬಿನಲ್ಲಿ ಮತ್ತು ಹರಿಯಾಣದಲ್ಲಿ ಈ ಶಿಕ್ಷಣದ ಒಂದು ಪ್ರಯೋಗ ಬಹಳ ಬದಲಾವಣೆಯಾಗುತ್ತಾ ಇದೆ. ಅಲ್ಲಿ ಕಾಲೇಜಿನಲ್ಲಿರುವ ಸಂಖ್ಯೆ ಎಷ್ಟು ಇದೆಯೋ ಅಷ್ಟು ನಮ್ಮಲ್ಲಿಲ್ಲ. ಮೆಡಿಕಲ್ ಕಾಲೇಜಿನಲ್ಲಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಮತ್ತು ಕೃಷಿ ವಿಶ್ವವಿದ್ಯಾನಿಲಯದಲ್ಲಿ ಅಲ್ಲಿ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಓದುತ್ತಾ ಇದ್ದಾರೆ. ಈವೊತ್ತಿನ ದಿವಸ ಪಂಜಾಬಿನ ಒಂದು ಕೃಷಿ ವಿಶ್ವವಿದ್ಯಾನಿಲಯ ತೆಗೆದುಕೊಂಡರೆ ಅಲ್ಲಿ ಒಬ್ಬ ರೈತನಿಗೂ ಮತ್ತು ಕೃಷಿ ವಿಶ್ವವಿದ್ಯಾನಿಲಯಕ್ಕೂ ಎಷ್ಟರಮಟ್ಟಿಗೆ ಒಂದು ಡೈರೆಕ್ಟ್ ಕಾಂಟ್ಯಾಕ್ಟ್ ಇದೆ ಎಂದರೆ ಅಲ್ಲಿಯ ರೈತ ಈ ಒಂದು ಕೃಷಿ ವಿಶ್ವವಿದ್ಯಾನಿಲಯದ ಒಂದು ಸಂಪರ್ಕವನ್ನಿಟ್ಟುಕೊಂಡು ಕೂಲಂಕಷವಾಗಿ ಚರ್ಚಿಸಿ ಹೊಸ ಹೊಸ ಬೀಜಗಳನ್ನು ರೀಸರ್ಚ್ ಮಾಡುತ್ತಾನೆ. ಅಷ್ಟೇ ಅಲ್ಲದೆ ಈ ಬೆಳೆಗಳಿಗೆ ಔಷಧಿ ಸಿಂಪಡಿಸುವುದು ಮತ್ತು ಇನ್ನೂ ಅನೇಕ ವಿಧವಾದಂಥ ಪ್ರಯೋಗಗಳನ್ನು ಮಾಡಿ ಈ ಬಗ್ಗೆ ಅಲ್ಲಿಯ ಆಫೀಸರ್ಸ್ ಜೊತೆಯಲ್ಲಿ ಚರ್ಚಿಸಿ ಹೊಸವಿಧಾನಗಳ ಒಂದು ಬೀಜೋತ್ಪಾದನೆ ವಗೈರೆಗಳನ್ನು ಕಂಡು ಹಿಡಿದು ಅದನ್ನು ಅಲ್ಲಿ ಹಂಚುತ್ತಾರೆ. ಆದುದರಿಂದ ಅಲ್ಲಿ ಈ ಕೃಷಿ ವಿಧಾನ ಬಹಳವಾಗಿ

ಮುಂದುವರೆದುಕೊಂಡು ಹೋಗುತ್ತಾ ಇದೆ. ತಮಗೆ ಹೇಳಬೇಕಾದರೆ ಒಂದು ಸಲ ನಾನು ಪಂಜಾಬ್ ಕೃಷಿ ವಿಶ್ವವಿದ್ಯಾಲಯಕ್ಕೆ ಹೋಗಿದ್ದೆ. ಅಲ್ಲಿ ರೈತರು ಮತ್ತು ಸಂಶೋಧಕರ ನಡುವೆ ನೇರ ಸಂಪರ್ಕ ಇದೆ. ಆದರೆ ಆ ತರಹ ರೀಸರ್ಚ್ ಸೆಂಟರ್ಸ್ ಇಲ್ಲಿ ಇಲ್ಲಾ. ಆದುದರಿಂದ ಇಲ್ಲಿ ಸರಿಯಾಗಿ ಪ್ರಯೋಗ ಮಾಡದೇ ಇದ್ದಂಥಾ ಬೀಜಗಳನ್ನು ಕೊಡುವುದರಿಂದ ಅದನ್ನು ಇಲ್ಲಿ ಹಾಕಿದರೆ ದೇವರೇ ಗತಿ. ನಿಮಗೆ ಹೇಳಬೇಕಾದರೆ ನಮ್ಮಲ್ಲಿ ಕಾಟನ್ ಸೀಡ್ಸ್ ಬಗ್ಗೆ ಒಂದು ಪ್ರಯೋಗ ನಡೆಯಿತು. ಹೊಸಬೀಜವನ್ನು ಜನವರಿ ತಿಂಗಳಿನಲ್ಲಿ ಎಲ್ಲರಿಗೂ ಹಂಚಿದರು. ಅದು ಸರಿಯಾಗಿ ಹುಟ್ಟಲಿಲ್ಲಾ. ಇವರು ಯಾವ ರೀತಿ ರೀಸರ್ಚ್ ಮಾಡಿದ್ದಾರೆ ಅನ್ನುವುದನ್ನು ನೋಡಿ. ಇನ್ನು ಈ ವಿಶ್ವವಿದ್ಯಾನಿಲಯದ ಕಟ್ಟಡದ ಬಗ್ಗೆ ಹೇಳುವುದಾದರೆ ಮೊನ್ನೆ ತಾನೇ ನಾನು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಭೇಟಿ ಕೊಟ್ಟಿದ್ದೆ. ಅಲ್ಲಿ ಸುಮಾರು 71–80 ಲಕ್ಷ ರೂಪಾಯಿ ಖರ್ಚು ಮಾಡಿ ಕಟ್ಟಡವನ್ನು ಕಟ್ಟಿದ್ದಾರೆ. ಅದನ್ನು 3 ವರ್ಷದ ಹಿಂದೆ ಇದ್ದಂಥಾ ಪ್ರಧಾನಮಂತ್ರಿಗಳು ಉದ್ಘಾಟನೆ ಮಾಡಿದ್ದಾರೆ. ಹಿಂದೆ ಕಟ್ಟಿದಂಥಾ ವಿಶ್ವವಿದ್ಯಾನಿಲಯದ ಕಟ್ಟಡವನ್ನೂ ನೋಡಿ ಇದನ್ನು ನೋಡಿ ಹಿಂದೆ ಕಟ್ಟಿರುವಂಥಾ ಕಟ್ಟಡಗಳು ಹೇಗಿತ್ತು ಎಂದರೆ ಸಾವಿರಾರು ವರ್ಷಗಳಾದರೂ ಕೂಡ ಚೆನ್ನಾಗಿರುತ್ತಿತ್ತು. ಕಾರಣ ಈ ಒಂದು ವಿಶ್ವವಿದ್ಯಾನಿಲಯ ಅನ್ನುವ ಹೆಸರು ಅಷ್ಟು ಚೆನ್ನಾಗಿ ಬೆಳಸಿಕೊಂಡು ಹೋಗಬೇಕು. ಅಂತ ಒಂದು ಮಾದರಿಯಾಗಿ ಕಟ್ಟುತ್ತಿದ್ದರು. ಮತ್ತು ಆ ಸಂಪ್ರದಾಯವನ್ನೇ ಅವರೂ ಕೂಡ ಮುಂದುವರೆಸಿಕೊಂಡು ಹೋಗುತ್ತಿದ್ದರು. ತಮಗೆ ಹೇಳಬೇಕಾದರೆ ಈವೊತ್ತಿನ ದಿವಸ ಸೆಂಟ್ರಲ್ ಕಾಲೇಜ್ ಕಟ್ಟಡ ನೋಡಿ ಆಮೇಲೆ ನಮ್ಮ ಭಾಗದಲ್ಲಿರುವ ಕರ್ನಾಟಕ ವಿಶ್ವವಿದ್ಯಾನಿಲಯದ ಕಾಲೇಜಿನ ಕಟ್ಟಡ ನೋಡಿ ಮತ್ತು ಅದೇ ರೀತಿಯಾಗಿ ಉಸ್ಮಾನಿಯಾ ಕಾಲೇಜಿನ ಕಟ್ಟಡ ನೋಡಿದರೆ ಗೊತ್ತಾಗುತ್ತದೆ. ಹಿಂದೆ ಈ ಕಟ್ಟಡಗಳನ್ನೆಲ್ಲಾ ಎಷ್ಟರಮಟ್ಟಿಗೆ ಚೆನ್ನಾಗಿ ಕಟ್ಟಿದ್ದರು ನೋಡಿ ಈಗ ಇವುಗಳ ರಿಪೇರಿ ವಗ್ಯೆರೆ ಆಗದೇ ಇರುವುದರಿಂದ ಆ ಕಟ್ಟಡಗಳು ಮಳೆ ನೀರಿನಿಂದ ಸೋರುತ್ತಾ ಇವೆ. ಅಷ್ಟೇ ಅಲ್ಲ ಆ ಕಟ್ಟಡಗಳ ಕಿಟಕಿ ಬಾಗಿಲುಗಳು ಏನು ಇವೆ ಅವುಗಳನ್ನು ರೀಪ್ಲೆಸ್ ಮಾಡದೇ ಹೋದರೆ ಇನ್ನೂ 3 ವರ್ಷಗಳೊಳಗೆ ಅವೆಲ್ಲಾ ಓಪನ್ ಡೋರ್ ಆಗಿ ಬಿಡುತ್ತದೆ. ನಾವು ಯುವಕರನ್ನು ಟೀಕೆ ಮಾಡುತ್ತೇವೆ. ಅವರುಗಳು ಇರತಕ್ಕಂಥಾ ಹಾಸ್ಟೆಲುಗಳನ್ನು ಹೋಗಿ ನೋಡಿದರೆ ಗೊತ್ತಾಗುತ್ತದೆ. ಸುಮಾರು 400 ಜನ ಇರತಕ್ಕಂಥಾ ಹಾಸ್ಟೆಲ್‌ನಲ್ಲಿ ಏನು ಒಂದು ಡೈನಿಂಗ್ ಹಾಲ್ ಇದೆ ಅದನ್ನು ನೋಡಿದರೆ ಗೊತ್ತಾಗುತ್ತದೆ ಅದು ಸ್ಲಮ್ ಏರಿಯಾದಲ್ಲಿರತಕ್ಕಂಥಾ ಕಡೆ ಇದೆ. ಆ ಡೈನಿಂಗ್ ಹಾಲ್‌ನಲ್ಲಿ ಒಂದು ಹೋಟೆಲ್ ಇದ್ದಹಾಗೆ ಇದೆ. ನೊಣ ವಗ್ಯೆರೆ ಕುಳಿತುಕೊಂಡು ಬೇಕಾದಷ್ಟು ಗಲೀಜುಗಳು ಇರುತ್ತವೆ. ನಮ್ಮ ಈ ಒಂದು

ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಇಂತಹ ಒಂದು ಮಹತ್ವದ ಸ್ಥಾನ ಕೊಟ್ಟು ಈ ತರಹ ಎಜುಕೇಷನ್ ಮಾಡಿಸುತ್ತಿದ್ದೀರಿ. ಅದೂ ಪೋಸ್ಟ್ ಗ್ರಾಜುಯೇಟ್‌ನಲ್ಲಿ ಓದುತ್ತಾ ಇರುವ ಹುಡುಗರಿಗೆ ಈ ತರಹ ಒಂದು ವ್ಯವಸ್ಥೆ ಮಾಡಿಕೊಟ್ಟಿದ್ದೀರಲ್ಲಾ ಅವರ ವಿದ್ಯಾಭ್ಯಾಸ ಹೇಗಾಗುತ್ತದೆ ಅನ್ನುವುದನ್ನು ಯೋಚನೆ ಮಾಡಿ, ಅಷ್ಟೇ ಅಲ್ಲ ಅವರಿಗೆ ಓದುವುದಕ್ಕೆ ಒಂದು ಟೇಬಲ್ ಇಲ್ಲ ಸರಿಯಾದ ಒಂದು ಕಾಟ್ ಇಲ್ಲ. ಒಂದೊಂದು ರೂಮಿಗೆ 34 ಜನರನ್ನು ಹಾಕಿಬಿಡುತ್ತೀರಿ. ಪೋಸ್ಟ್ ಗ್ರಾಜುಯೇಟ್‌ನಲ್ಲಿ ಓದುತ್ತಾ ಇರತಕ್ಕಂಥಾ ಹುಡುಗರಿಗೆ ಈ ತರಹ ಒಂದು ವ್ಯವಸ್ಥೆ ಅವರ ಒಂದು ವಿದ್ಯಾಭ್ಯಾಸ ಮಟ್ಟದಲ್ಲಿ ಇದ್ದರೆ ಅವರು ಮುಂದೆ ಯಾವ ರೀತಿ ನಾಗರಿಕತೆ ಕಲಿತುಕೊಂಡು ಹೊರಗೆ ಬರುತ್ತಾರೆ ಅನ್ನುವುದನ್ನು ತಾವು ಸ್ವಲ್ಪ ಆಲೋಚನೆ ಮಾಡಿ ನೋಡಿ, ಈ ಮಾತನ್ನು ನಾನು ಬಹಳ ಮನನೊಂದು ಹೇಳುತ್ತಿದ್ದೇನೆ. ಈ ವಿದ್ಯಾರ್ಥಿಗಳು ಕಾಲೇಜಿನಲ್ಲಿಯೇ ಓದಲಿ, ಹೈಸ್ಕೂಲಿನಲ್ಲಿಯೇ ಓದಲಿ ಯಾವ ಶಾಲೆಯಲ್ಲಾದರೂ ಓದಲಿ ಹಾಸ್ಟೆಲನ್ನು ಏನು ತೆರೆಯುತ್ತೀರೋ ಅದು ಒಳ್ಳೆಯ ಮಟ್ಟದಲ್ಲಿ ಇರಬೇಕು ಎಂದು ಹೇಳುತ್ತೇನೆ. ಇದಕ್ಕಾಗಿ ತಾವು ಒಂದು ಕ್ರಾಂತಿಕಾರಕವಾದ ಯೋಜನೆಯನ್ನು ಹಾಕಿಕೊಳ್ಳಬೇಕು. ಹಾಗೆ ಮಾಡದೇ ಹೋದರೆ ಈ ವಿದ್ಯಾರ್ಥಿಗಳು ಮುಂದೆ ಒಳ್ಳೆಯ ನಾಗರಿಕರಾಗಿ ಬರುವುದಕ್ಕೆ ಸಾಧ್ಯವಿಲ್ಲ. ಈ ವಿಶ್ವವಿದ್ಯಾನಿಲಯಕ್ಕೆ ಖರ್ಚು ಮಾಡಲು ನೀವೇನೋ ಹಣ ಕೊಡುತ್ತೀರಿ ಆದರೆ ಅದು ಎಷ್ಟರಮಟ್ಟಿಗೆ ವಿನಿಯೋಗವಾಗುತ್ತದೆ ಅನ್ನುವುದನ್ನು ನೋಡಬೇಕು. ನೀವು ಇದಕ್ಕೆ ಖರ್ಚು ಮಾಡುವ ಹಣ ಇದು ನಮ್ಮ ಸಮಾಜದ ಮುಂದಿನ ಒಂದು ಭವಿಷ್ಯದ ಮೇಲೆ ನಿಂತಿರುತ್ತದೆ ಅನ್ನುವ ಮಾತನ್ನು ಹೇಳುತ್ತೇನೆ.

*****

# ಕೊಳಚೆ ಪ್ರದೇಶದ ಸಮಸ್ಯೆ

ದಿನಾಂಕ: 21.3.1979

**ಬೊಮ್ಮಾಯಿಯವರು ಒಂದು ಸಮಸ್ಯೆಯನ್ನು ಕೂಲಂಕಷವಾಗಿ ಅಧ್ಯಯನ ಮಾಡದ ಹೊರತು ಕಲಾಪದಲ್ಲಿ ಹಗುರವಾಗಿ ಮಾತುಗಳನ್ನು ತೇಲಿಸುವ ಪ್ರಯತ್ನ ಮಾಡುತ್ತಿರಲಿಲ್ಲ. ರಾಜ್ಯದಲ್ಲಿ ಸ್ಲಂ ಜನರ ಜೀವನ ಗಂಭೀರ ದುಸ್ಥಿತಿಗೆ ಇಳಿಯತೊಡಗಿದಾಗ ಬೊಮ್ಮಾಯಿಯವರು ತಮ್ಮ ಶಾಸಕ ಮಿತ್ರರೊಡನೆ ರಾಜ್ಯದ ಕೊಳಚೆ ಪ್ರದೇಶಗಳಿಗೆ ಭೇಟಿಕೊಟ್ಟು ಅಲ್ಲಿನ ಜನತೆಯ ಕಷ್ಟ ಕಾರ್ಪಣ್ಯಗಳನ್ನು ಖುದ್ದು ಅರಿತು ದಿನಾಂಕ 28.6.1980ರ ಕಲಾಪದಲ್ಲಿ ಬೆಳಕು ಚೆಲ್ಲುತ್ತಾರೆ. ಈ ಸಮಸ್ಯೆಯನ್ನು ಹೊರ ರಾಜ್ಯದಲ್ಲಿ ಮತ್ತು ವಿದೇಶಗಳಲ್ಲಿ ಹೇಗೆ ಬಗೆಹರಿಸಲು ಪ್ರಯತ್ನಿಸಿದ್ದಾರೆ ಎಂಬುದನ್ನು ಸದನದ ಗಮನಕ್ಕೆ ತರುತ್ತಾ ಸರ್ಕಾರಕ್ಕೆ ಸೂಕ್ತ ತಿಳಿವಳಿಕೆ ನೀಡುತ್ತಾರೆ.**

**ಶ್ರೀ ಎಸ್.ಆರ್.ಬೊಮ್ಮಾಯಿ (ಹುಬ್ಬಳ್ಳಿ ಗ್ರಾಮಾಂತರ):** ಮಾನ್ಯ ಅಧ್ಯಕ್ಷರೇ, ಮಾನ್ಯ ಸದಸ್ಯರಾದ ಶ್ರೀ ಪಿ.ರಾಮದೇವ್ ಅವರು ತಂದಿರುವ ನಿರ್ಣಯವು ಬಹಳ ಮಹತ್ವವಾಗಿದ್ದು ಅದರ ಬಗ್ಗೆ ಎಲ್ಲರೂ ಆದ್ಯ ಗಮನ ಕೊಡಬೇಕಾಗಿದೆ, ಕೊಳಚೆ ಪ್ರದೇಶಗಳ ಪರಿಸ್ಥಿತಿ ಕೇವಲ ಬೆಂಗಳೂರು ನಗರಕ್ಕೆ ಸೀಮಿತವಾಗಿರದೆ ರಾಜ್ಯದ ಅನೇಕ ನಗರಗಳಲ್ಲಿ ಇಂತಹ ಕೊಳಚೆ ಪ್ರದೇಶಗಳು ಬೆಳಗಾಗುವುದರೊಳಗೆ ಹುಟ್ಟುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಬೆಂಗಳೂರು ನಗರದಲ್ಲಂತೂ ಕಳೆದ ಮೂರುನಾಲ್ಕು ವರ್ಷಗಳಿಂದ ಎಲ್ಲಿ ನೋಡಿದರಲ್ಲಿ ಕೊಳಚೆ ಪ್ರದೇಶಗಳು ಹುಟ್ಟುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಅನೇಕ ನಗರಸಭೆ ಜಾಗಗಳಲ್ಲಿ, ಸರ್ಕಾರಿ ಜಾಗಗಳಲ್ಲಿ ಮತ್ತು ಖಾಸಗಿ ಜಾಗಗಳಲ್ಲಿ ಯಾವುದೇ ರೀತಿಯ ಅಪ್ಪಣೆ ಪಡೆಯದ ಮನೆಗಳನ್ನು ಮನಬಂದಂತೆ ಕಟ್ಟುತ್ತಿರುವುದನ್ನು ನಾವು ನೋಡಿದ್ದೇವೆ. ನಾನು ಬೆಂಗಳೂರು ನಗರ ಶಾಸಕರ ಜೊತೆಗೆ ಸುಮಾರು ಮೂವತ್ತು ನಲವತ್ತು ಕೊಳಚೆ ಪ್ರದೇಶಗಳಿಗೆ ಭೇಟಿ ಕೊಟ್ಟಿದ್ದೇನೆ. ಅಲ್ಲೆಲ್ಲ ನೋಡಿದಾಗ ಯಾರೋ ಕೆಲವರು ಯೋಜನಾ ಬದ್ಧವಾಗಿ ಬಡವರಿಂದ ಹಣ ದೋಚಿ ಹೀಗೆ ಗುಡಿಸಲುಗಳನ್ನು ಅಥವಾ ಮನೆಗಳನ್ನು ಕಟ್ಟುವುದಕ್ಕೆ ಅವಕಾಶ ಮಾಡಿಕೊಡುವುದನ್ನು ವ್ಯವಸ್ಥೆ ಮಾಡುತ್ತಿರುವುದು ಕಂಡು ಬರುತ್ತದೆ. ಅಲ್ಲಿನ ವಾಸಿಗಳನ್ನು ಕೇಳಿದಾಗ, ಈ ಜಾಗವನ್ನು ನಮಗೆ ಕಾಯಂ ಆಗಿ ಕೊಡುತ್ತಾರಂತೆ ನಗರಸಭೆಯವರು ಇಲ್ಲಿಗೆಲ್ಲ ನಲ್ಲಿ ದೀಪ ಮತ್ತು ರಸ್ತೆಯ ವ್ಯವಸ್ಥೆ ಮಾಡುತ್ತಾರಂತೆ ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಇದರ ಹಿನ್ನಲೆ ನೋಡಿದಾಗ ಬಡಜನರಿಗೆ ತಪ್ಪು ತಿಳಿವಳಿಕೆ ಕೊಟ್ಟು ಮತ್ತು

ಆಸೆಗಳನ್ನು ತೋರಿಸಿ ಅವರಿಂದ ಹಣ ದೋಚುವ ಪ್ರಯತ್ನಗಳು ಗೋಚರವಾಗುತ್ತವೆ. ಈ ಬಗ್ಗೆ ಅನೇಕ ಮಾನ್ಯ ಸದಸ್ಯರುಗಳು ಮಾತನಾಡಿದ್ದಾರೆ. ಆದುದರಿಂದ, ನಾನೂ ಕೂಡ ಇದರ ಬಗ್ಗೆ ಮಾತನಾಡುವುದಕ್ಕೆ ಹೋಗುವುದಿಲ್ಲ. ಸರ್ಕಾರ ಇದನ್ನು ತಡೆಗಟ್ಟಲು ಕೂಡಲೇ ಕ್ರಮ ತೆಗೆದುಕೊಳ್ಳಬೇಕು. ಮುಂದೆ ಇಂತಹ ಕೊಳಚೆ ಪ್ರದೇಶಗಳು ಹುಟ್ಟದಂತೆ ನೋಡಿಕೊಳ್ಳಬೇಕು. ಪ್ರಾಸಂಗಿಕವಾಗಿ ಹೇಳುವುದಾದರೆ ಹುಬ್ಬಳ್ಳಿಯಲ್ಲೂ ಸಹ ಇಂತಹ ನೂರು ಕೊಳಚೆ ಪ್ರದೇಶಗಳಿವೆ. ಮೊದಲು ಸರ್ಕಾರದವರು ಗುರುತುಪಡಿಸಿದ್ದ ಕೊಳಚೆ ಪ್ರದೇಶಗಳು 64 ಇದ್ದರೆ ಇಂದು ಅದಕ್ಕಿಂತಲೂ ಹೆಚ್ಚು ಇದೆ. ಅಲ್ಲಿನ ನಗರಸಭೆಯವರು ಲೇಔಟ್ ವೊಂದನ್ನು ತಯಾರು ಮಾಡಿ ಅದನ್ನು ಜನರಿಗೆ ಹಂಚಬೇಕೆಂದಿದ್ದಾಗ ಕೆಲವರು ಹೋಗಿ ಅಲ್ಲಿ ಗುಡಿಸಲು ಹಾಕಿಕೊಂಡು ಕುಳಿತರು. ಗುಡಿಸಲುಗಳನ್ನು ಕಟ್ಟಲು ಉಪಯೋಗಿಸಿದ್ದ ಜೋಳದ ದಂಟಿನ ಬೆಲೆ ಒಂದೇ ರಾತ್ರಿಯಲ್ಲಿ ನೂರು ಪಟ್ಟಿನಷ್ಟು ಜಾಸ್ತಿಯಾಯಿತು. ಹೀಗೆ ಸಿದ್ಧಾರೂಢಾಶ್ರಮದ ಹಿಂದೆ ನಿರ್ಮಿಸುತ್ತಿದ್ದ ಸಾವಿರಾರು ಮನೆಗಳನ್ನು ಮುನಿಸಿಪಲ್ ಅಧಿಕಾರಿಗಳು ತಡೆಯಲಿಲ್ಲ. ಪೋಲೀಸ್ ಅಧಿಕಾರಿಗಳು ನಿಲ್ಲಿಸಲಿಲ್ಲ. ಆದರೆ ಇದರಿಂದ ಸಾರ್ವಜನಿಕರ ಪ್ರತಿನಿಧಿಗಳಾದ ನಮಗೆ ಬಹಳ ಕಷ್ಟ. ಚುನಾವಣೆ ಮುಂದೆ ಇದ್ದುದರಿಂದ ನಾವು ಏನನ್ನೂ ಹೇಳುವುದಕ್ಕೆ ಸಾಧ್ಯವಿರಲಿಲ್ಲ ನನ್ನ ಕಣ್ಣೆದುರಿಗೆ ಸಾವಿರಾರು ಜನ ಮನೆಗಳನ್ನು ಕಟ್ಟುತ್ತಿದ್ದಾರೆ. ಅವರ ನಾಯಕರೂ ಅಲ್ಲಿ ಮನೆ ಕಟ್ಟುತ್ತಿರುವ ಒಬ್ಬೊಬ್ಬನಿಂದ 20–25 ರೂಪಾಯಿಗಳನ್ನು ತೆಗೆದುಕೊಂಡು ಒಂದು ರೂಪಾಯಿಗೆ ರಸೀದಿ ಕೊಡುತ್ತಿದ್ದರು. ಹೀಗೆ ಸಾವಿರಾರು ಜನರಿಂದ ಹಣ ವಸೂಲು ಮಾಡಿದರು ಮತ್ತು ಗುಡಿಸಲುಗಳು ಮೇಲೆ ಬಂದವು. ಚುನಾವಣೆಯಾದ ಮೇಲೆ ಮುನಿಸಿಪಲ್ ಕಮಿಷನರ್ ಮತ್ತು ಪೋಲೀಸ್ ಅಧಿಕಾರಿಗಳು ಬಂದು ಆ ಗುಡಿಸಲುಗಳನ್ನೆಲ್ಲ ಕಿತ್ತು ಹಾಕಿಸಿದರು. ಮತ್ತೆ ಕೆಲವರನ್ನು ಜೈಲಿಗೂ ಕಳುಹಿಸಿದರು. ಮತ್ತು ಕಟ್ಟಿದ ಮೇಲೆ ಅದನ್ನು ಕೀಳತಕ್ಕದ್ದು ಅಧಿಕಾರಿಗಳಿಗೂ ಕಷ್ಟದ ಕೆಲಸ. ಸಾರ್ವಜನಿಕರ ಪ್ರತಿನಿಧಿಗಳಾದ ನಮಗೂ ಕಷ್ಟದ ಕೆಲಸ. ಗುಡಿಸಲುಗಳನ್ನು ಕಳೆದುಕೊಂಡವರಲ್ಲಿ ಕೆಲವರು ನಗರಸಭೆ ಮತ್ತು ತಹಶೀಲ್ದಾರರ ಕಛೇರಿ ಮುಂದೆ ಸತ್ಯಾಗ್ರಹ ಮಾಡಿದರು. ಕೊನೆಗೆ ಒಂದು ರೀತಿ ಎಲ್ಲರನ್ನು ಒಪ್ಪಿಸಿ ಅದನ್ನೆಲ್ಲ ಹಂಚಲಿಕ್ಕೆ ವ್ಯವಸ್ಥೆ ಮಾಡಿದ್ದೇವೆ. ಇದನ್ನು ಏತಕ್ಕೆ ನಾನು ಹೇಳುತ್ತಿದ್ದೇನೆಂದರೆ ಈ ಕೊಳಚೆ ಪ್ರದೇಶಗಳನ್ನು ಅವು ಹುಟ್ಟುವುದಕ್ಕೆ ಮೊದಲೇ ನಗರಸಭೆ ಅಥವಾ ಅದಕ್ಕೆ ಸಂಬಂಧಿಸಿದ ಅಧಿಕಾರಿಗಳು ಎಚ್ಚರ ತೆಗೆದುಕೊಂಡರೆ ಅವುಗಳ ನಿರ್ಮಾಣವನ್ನು ನಿಲ್ಲಿಸಬಹುದು. ಆದುದರಿಂದ ಸರ್ಕಾರ ಈ ಬಗ್ಗೆ ಅವಶ್ಯವಿದ್ದರೆ ಕಾನೂನನ್ನು ತಿದ್ದುಪಡಿ ಮಾಡಿ, ಆಜ್ಞೆಗಳನ್ನು ಹೊರಡಿಸಿ ಇನ್ನು ಮುಂದೆ ನಗರಸಭೆ ಅಧಿಕಾರಿಗಳು ಹೊಸ ಕೊಳಚೆ ಪ್ರದೇಶಗಳು

ನಿರ್ಮಾಣವಾಗದಂತೆ ನೋಡಿಕೊಳ್ಳಬೇಕೆಂದು ತಿಳಿಸಬೇಕು. ಅದನ್ನು ಮಾಡದೆ ಹೋದರೆ ಕೊಳಚೆ ಪ್ರದೇಶಗಳ ಸಮಸ್ಯೆ ಎಂದಿಗೂ ಬಗೆ ಹರಿಯುವುದಿಲ್ಲ. ಸಮಸ್ಯೆಗಳು ಒಂದಾದ ಮೇಲೊಂದರಂತೆ ಉದ್ಭವಾಗುತ್ತಾ ಇರುತ್ತವೆ. ಬೆಂಗಳೂರು ನಗರದಲ್ಲಿ ಹೆಚ್ಚು ಕೊಳಚೆ ಪ್ರದೇಶಗಳಿವೆ. ಅಂತೆಯೇ ಅದು ಬೆಳಗಾವಿ, ಮಂಗಳೂರು, ಹುಬ್ಬಳ್ಳಿ ನಗರಗಳಲ್ಲೂ ಹೆಚ್ಚುತ್ತಿವೆ. ಆದುದರಿಂದ ಕೊಳಚೆ ಪ್ರದೇಶಗಳನ್ನು ತಡೆಗಟ್ಟಲು ಸರ್ಕಾರ ಏನು ಪ್ರಯತ್ನ ಮಾಡಿದೆ ಎಂಬುದನ್ನು ತಿಳಿಸಬೇಕು. ಕೊಳಚೆ ಪ್ರದೇಶ ನಿರ್ಮೂಲನೆ ಮತ್ತು ಸುಧಾರಣೆಗೆ ಸಂಬಂಧಿಸಿದಂತೆ ಸರ್ಕಾರ ಯಾವ ಶಾಸನ ತಂದರೂ ನಾವದಕ್ಕೆ ಸಂಪೂರ್ಣ ಬೆಂಬಲ ಕೊಡುತ್ತೇನೆ. ಕೆಲವರು ಹಸುಗಳನ್ನು ಕಟ್ಟಿಕೊಂಡು ಜೀವನ ಸಾಗಿಸುತ್ತಿದ್ದು ಇದನ್ನು ಗಮನಿಸಿದೆ. ಅದು ಕೆಲವರಿಗೆ ಉಪಜೀವನ ಕೂಡ. ಈಗ ಕೊಳಚೆ ಪ್ರದೇಶಗಳ ನಿರ್ಮೂಲನಾ ದೃಷ್ಟಿಯಿಂದ ಅಲ್ಲಿರುವವರೆಗೆ ಪುನರ್ವಸತಿ ಕಲ್ಪಿಸುವ ಯೋಜನೆ ಇದೆ. ಅದರಲ್ಲಿ ದೋಷವಿದೆ ಎಂದು ನಾನು ತಿಳಿದುಕೊಂಡಿದ್ದೇನೆ. ತಮಿಳುನಾಡಿನಲ್ಲಿ ಹೋಗಿ ನೋಡಿದರೆ ಅಲ್ಲಿ ಅವರು ಯಾವ ರೀತಿ ಈ ಸಮಸ್ಯೆಯನ್ನು ಬಿಡಿಸಿದ್ದಾರೆನ್ನುವುದು ಅರ್ಥವಾಗುತ್ತದೆ. ಒಂದು ಅವಕಾಶದಲ್ಲಿ ನಾನು ಸಿಂಗಾಪುರಕ್ಕೆ ಹೋಗಿದ್ದೆ. ಅಲ್ಲಿ ಕೇವಲ ಒಂದೆರಡು ವರ್ಷಗಳಲ್ಲಿ ಕೊಳಚೆ ಪ್ರದೇಶಗಳೇ ಇಲ್ಲದಂತೆ ಮಾಡಿದ್ದಾರೆ. ಕೊಳಚೆ ಪ್ರದೇಶಗಳಲ್ಲಿದ್ದ ಜನರನ್ನು ಬೇರೆ ಕಡೆಗೆ ತಾತ್ಕಾಲಿಕವಾಗಿ ವಸತಿ ಸೌಕರ್ಯ ಕಲ್ಪಿಸಿಕೊಟ್ಟು ಅಲ್ಲಿ ಬಹು ಅಂತಸ್ತಿನ ಕಟ್ಟಡಗಳನ್ನು ಕಟ್ಟಿಸಿದ್ದಾರೆ. ತಮಿಳುನಾಡಿನಲ್ಲೂ ಅದೇ ರೀತಿ ಕಟ್ಟಿಸಿದ್ದಾರೆ. ಇಂತಹ ಕಟ್ಟಡಗಳು ಒಂದು ತಿಂಗಳಲ್ಲೇ ನಿರ್ಮಾಣವಾಗಿ ಬಿಡುತ್ತವೆ. ಕೊಳಚೆ ಪ್ರದೇಶಗಳಲ್ಲಿ ವಾಸಿಸುವಲ್ಲಿ ಕೆಲವರು ಹಸುಗಳನ್ನು ಕಟ್ಟಿಕೊಂಡಿರುತ್ತಾರೆ. ಕೆಲವರು ಕುಂಬಾರರು ಗಡಿಗೆ ಮಡಿಕೆಗಳನ್ನು ಮಾಡುತ್ತಾ ಇರುತ್ತಾರೆ. ಮೇದಾರ ಜಾತಿಯವರು ಬುಟ್ಟಿ ಹೆಣೆಯುತ್ತಾ ಇರುತ್ತಾರೆ. ಇಂತಹವರ ಕಸುಬುಗಳಿಗೆ ಧಕ್ಕೆ ಬರುವುದರಿಂದ ಬಹು ಅಂತಸ್ತಿನ ಕಟ್ಟಡದ ಕೆಳಭಾಗದಲ್ಲಿ ಸಾರ್ವತ್ರಿಕ ಜಾಗಗಳನ್ನು ನಿರ್ಮಾಣ ಮಾಡಿರುತ್ತಾರೆ. ಅಲ್ಲಿ ಅವರೆಲ್ಲ ಕುಳಿತು ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಾರೆ. ಈ ರೀತಿಯ ವ್ಯವಸ್ಥೆ ತಮಿಳುನಾಡಿನಲ್ಲಿ ಮತ್ತು ಬೇರೆ ಕಡೆಗಳಲ್ಲೂ ಇದೆ ಇದನ್ನು ಬೆಂಗಳೂರು ನಗರದಲ್ಲಿಯೂ ಮಾಡಬೇಕು. ಆದರೆ ನನಗೆ ತಿಳಿದು ಬಂದಿರುವಂತೆ ಈಗ ತಯಾರಿಸಿರುವ ಮಾಸ್ಟರ್ ಪ್ಲಾನ್‌ನಲ್ಲಿ ಇದೆಲ್ಲ ಇಲ್ಲ. ಹೊಸದಾಗಿ ಇದನ್ನು ಸೇರಿಸಿದ್ದಾರೋ ಅಥವಾ ಇಲ್ಲವೋ ನನಗೆ ಗೊತ್ತಿಲ್ಲ. ಒಂದು ವೇಳೆ ಇನ್ನೂ ಮಾಡಿರದಿದ್ದರೆ ಅದನ್ನು ಮಾಡಬೇಕೆಂದು ಹೇಳುತ್ತೇನೆ. ಇದರ ಜೊತೆಗೆ ನಾನು ಇನ್ನೊಂದು ಮಾತನ್ನು ಹೇಳಬೇಕಾಗಿದೆ. ಕೊಳಚೆ ಪ್ರದೇಶಗಳ ನಿರ್ಮೂಲನಕ್ಕಾಗಿ ಬೇರೆ ರಾಜ್ಯಗಳು ಕೇಂದ್ರದಿಂದ ಪಡೆದಿರುವ ಮೊತ್ತ ಬಹಳ ದೊಡ್ಡದಾಗಿದೆ. ಅದರ ಸಂಖ್ಯೆ ಸದ್ಯ ನನ್ನ ಬಳಿ ಇಲ್ಲ. ಇವನ್ನು

ಬಿಟ್ಟು ಬಂದಿದ್ದೇನೆ. ಆದರೆ ತಮಿಳುನಾಡು ರಾಜ್ಯದವರು ಕೇಂದ್ರದಿಂದ ಪರಮಾವಧಿ ನೆರವನ್ನು ಪಡೆದಿದ್ದಾರೆ. ಆದರೆ ನಮ್ಮ ರಾಜ್ಯದವರು ಆ ರೀತಿಯ ನೆರವು ಪಡೆದಿಲ್ಲ. ಹುಡ್ಕೋ ಯೋಜನೆಯ ನೆರವಿನಲ್ಲೂ ಕೂಡ ತೀವ್ರಗತಿಯಿಂದ ಕೆಲಸ ನಡೆಯುತ್ತಿವೆ. ಇದಕ್ಕೆ ಹಿನ್ನೆಲೆ ಏನಿದೆಯೋ ನನಗೆ ಗೊತ್ತಿಲ್ಲ. ಕೆಲವು ಮನೆಗಳು ಅರ್ಧಕ್ಕೆ ನಿಂತುಬಿಟ್ಟಿವೆ. ಕಾಲೋನಿಗಳು ಹೊಸ ಕೊಳಚೆ ಪ್ರದೇಶಗಳಾಗುತ್ತಿವೆ. ಹುಬ್ಬಳ್ಳಿಯಲ್ಲಿ ಹರಿಜನರಿಗಾಗಿ ಹೊಸ ಕಾಲೋನಿಯನ್ನು ಕಟ್ಟಿದ್ದಾರೆ. ಅಲ್ಲಿ ಕಳೆದ ಮೂರು ವರ್ಷಗಳಿಂದ ರಸ್ತೆಗಳಿಲ್ಲ. ವಸತಿ ಗೃಹಗಳಿಲ್ಲ ಇದನ್ನು ನೋಡಿದರೆ ಸರ್ಕಾರದವರೇ ತಮ್ಮ ಹಣದ ಖರ್ಚಿನಿಂದ ಹೊಸ ಕೊಳಚೆ ಪ್ರದೇಶಗಳನ್ನು ನಿರ್ಮಿಸುತ್ತಿರುವರೋ ಎಂದೆನಿಸುತ್ತದೆ. ಆ ರೀತಿಯಾಗಬಾರದು ಯೋಜನೆ ಪ್ರಕಾರ ಅವರಿಗೆ ನೀರು ರಸ್ತೆ, ದೀಪ ಶಾಲೆ ಮುಂತಾದ ಎಲ್ಲ ಅನುಕೂಲಗಳನ್ನೊಳಗೊಂಡ ಒಂದು ಹೊಸ ಕಾಲೋನಿ ನಿರ್ಮಾಣವಾಗಬೇಕು. ಆದರೆ ಅದು ಆಗುತ್ತಾ ಇಲ್ಲ. ಮಾನ್ಯ ಸಚಿವರು ಮತ್ತು ಸಂಬಂಧಪಟ್ಟ ಅಧಿಕಾರಿಗಳು ಆ ಹರಿಜನ ಕಾಲೋನಿಗೆ ಭೇಟಿ ಕೊಟ್ಟು ನೋಡಬೇಕು. ಇನ್ನೊಂದು ಕಡೆ ಇಂಪ್ರೂಮೆಂಟ್ ಬೋರ್ಡಿನವರು ಸುಮಾರು ಅರವತ್ತು ಸಾವಿರ ರೂಪಾಯಿಗಳನ್ನು ರಸ್ತೆ ನಿರ್ಮಾಣಕ್ಕಾಗಿ ಖರ್ಚು ಮಾಡಿದ್ದಾರೆ. ಕೊಳಚೆ ನಿರ್ಮೂಲನಕ್ಕಾಗಿ ಖರ್ಚು ಮಾಡತಕ್ಕ ಹಣ ಅಪವ್ಯಯವಾಗುತ್ತಿದೆ. ಇದರ ಬಗ್ಗೆ ನನ್ನ ಒಂದು ಸಲಹೆ ಏನೆಂದರೆ, ಕಾನೂನುಬದ್ಧವಾಗಿ ಹೊಸ ಕೊಳಚೆ ಪ್ರದೇಶಗಳನ್ನು ಬರದಂತೆ ನೋಡಿಕೊಳ್ಳುವುದು. ಕೇಂದ್ರದಿಂದ ಹೆಚ್ಚು ಹಣವನ್ನು ಪಡೆಯತಕ್ಕದ್ದು ಮತ್ತು ಇವುಗಳ ಬಗ್ಗೆ ಶಾಸಕರನ್ನೊಳಗೊಂಡ ಒಂದು ಸಮಿತಿಯನ್ನು ನೇಮಕ ಮಾಡುವುದು ಒಳ್ಳೆಯದು. ಕೊಳಚೆ ನಿರ್ಮೂಲನ ಕೆಲಸವನ್ನು ಬರೀ ಅಧಿಕಾರಿಗಳಿಗೆ ಕೊಟ್ಟರೆ ಆಗುವುದಿಲ್ಲ. ಅವರು ಬರೀ ಟೆಂಡರ್ ಕರೆಯುತ್ತಾರೆ. ಲೋಕೋಪಯೋಗಿ ಕಂಟ್ರಾಕ್ಟ್ ಆದ ಹಾಗೆ ಆಗುತ್ತದೆ. ಸಮಿತಿಯಲ್ಲಿ ಶಾಸಕರನ್ನು ಹಾಕಿ ಸರಿಯಾದ ರೀತಿಯಲ್ಲಿ ನಕಾಶೆ ತಯಾರಿಸುವುದು, ಮೇಲ್ವಿಚಾರಣೆ ಮಾಡುವುದು. ಕಾಲಕ್ಕೆ ಸರಿಯಾಗಿ ಕಾರ್ಯಗತಗೊಳಿಸುವುದು ಇವುಗಳನ್ನೆಲ್ಲಾ ಪ್ರತಿ ಹಂತದಲ್ಲಿಯೂ ನೋಡಿಕೊಳ್ಳುವಂತಹ ಅವಕಾಶ ಇರಬೇಕೆಂದು ಹೇಳುತ್ತೇನೆ. ಹೊಸ ಕೊಳಚೆ ಪ್ರದೇಶಗಳು ನಿರ್ಮಾಣವಾಗದಂತೆ ಮತ್ತು ಹಾಲಿ ಇರತಕ್ಕಂಥ ಕೊಳಚೆ ಪ್ರದೇಶಗಳನ್ನು ಸರಿಯಾದ ರೀತಿಯಲ್ಲಿ ಅಭಿವೃದ್ಧಿಪಡಿಸುವ ಬಗ್ಗೆ ಸರ್ಕಾರ ನಿರ್ದಿಷ್ಟವಾದ ಕಾನೂನನ್ನು ಮತ್ತು ಆಜ್ಞೆಗಳನ್ನು ಬೇಗ ಹೊರಡಿಸಿ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಸರ್ಕಾರಕ್ಕೆ ಸೂಚನೆ ಕೊಟ್ಟು ನನ್ನ ಮಾತುಗಳನ್ನು ಮುಗಿಸುತ್ತೇನೆ.

*****

# ನರಗುಂದ, ನವಲಗುಂದ ಗೋಲಿಬಾರ್

ದಿನಾಂಕ: 26.7.1980

**ಗುಂಡೂರಾಯರ ಆಡಳಿತದ ಕಾಲದಲ್ಲಿ ರಾಜ್ಯದ ನರಗುಂದ, ನವಲಗುಂದ, ಗಂಗಾವತಿ ಮುಂತಾದೆಡೆ ಚಳವಳಿ ನಿರತ ರೈತರ ಮೇಲೆ ಪೊಲೀಸರು ಗುಂಡು ಹಾರಿಸಿದ ದುರಂತದ ಹಿನ್ನಲೆಯಲ್ಲಿ ಸರ್ಕಾರವನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಂಡ ಬೊಮ್ಮಾಯಿಯವರು ರಾಜ್ಯದಲ್ಲಿ ರೈತ ಚಳವಳಿಯ ಹುಟ್ಟಿಗೆ ಕಾರಣವಾದ ಬಹಳಷ್ಟು ಅಂಶಗಳನ್ನು ಬೆಳಕಿಗೆ ತರುತ್ತಾರೆ.**

**ಶ್ರೀ ಎಸ್. ಆರ್. ಬೊಮ್ಮಾಯಿ:** ಮಾನ್ಯ ಅಧ್ಯಕ್ಷರೇ, ಮಲಪ್ರಭಾ ಯೋಜನೆ ಅಚ್ಚು ಕಟ್ಟಿನ ಕೆಳಗೆ ಬರುವ ರೈತರ ಚಳವಳಿ ಪ್ರಾರಂಭವಾದ ಮೇಲೆ 20ನೇ ತಾರೀಖು ನಡೆದ ಘಟನೆ ಮತ್ತು ಅದರ ನಂತರ ರಾಜ್ಯದ ತುಂಬೆಲ್ಲ ಹಬ್ಬಿದ ಚಳವಳಿ ಮತ್ತು ಅದರಿಂದಾದ ಗೋಲಿಬಾರ್, ದಂಗೆ, ಲೂಟಿ, ಸಾರ್ವಜನಿಕರ ಮೇಲೆ ಪೊಲೀಸರು ನಡೆಸಿದ ಲಾಠಿ ಚಾರ್ಜು ಮುಂತಾದವುಗಳನ್ನು ಪ್ರತಿನಿತ್ಯ ನಾವು ಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ಕೇಳಿ ತಿಳಿದುಕೊಳ್ಳುತ್ತಿದ್ದೇವೆ. ಈಗ ರಾಜ್ಯದಲ್ಲಿ ಒಂದು ರೀತಿಯ ಗಂಭೀರ ಪರಿಸ್ಥಿತಿ ನಿರ್ಮಾಣವಾಗಿದೆ. ಕಾನೂನು ವ್ಯವಸ್ಥೆ ಕುಸಿದು ಬೀಳುತ್ತಿರುವ ವಾತಾವರಣ ಕಂಡುಬಂದಿದೆ. ಈ ಚಳವಳಿಯ ಮೂಲ ಮತ್ತು ಕಾರಣಗಳು ಅನೇಕ. ರಾಜ್ಯದಲ್ಲಿ ಶಾಂತತೆ ನೆಲೆಗೊಳ್ಳಬೇಕು, ಕಾನೂನು ವ್ಯವಸ್ಥೆ ಸರಿಯಾಗಬೇಕು. ರೈತರ ಚಳವಳಿ ಶಾಂತರೀತಿಯಿಂದ ನಡೆದು ರೈತರ, ಕೂಲಿಕಾರರ, ವಿದ್ಯಾರ್ಥಿಗಳ ಮತ್ತು ಬೇರೆ ಬೇರೆ ವರ್ಗದ ಜನರ ಬೇಡಿಕೆಗಳಿಗೆ ಪರಿಹಾರ ಕಂಡು ಹಿಡಿಯಲು ವ್ಯವಸ್ಥೆ ಮಾಡಬೇಕು. ಸರ್ಕಾರ ಇದರ ಬಗ್ಗೆ ಆಲೋಚನೆ ಮಾಡಬೇಕು. ಇದು ಆಗಬೇಕಾದರೆ ಮೊದಲು ಶಾಂತತೆ ನೆಲೆಗೊಳ್ಳಬೇಕಾಗುತ್ತದೆ. ಶಾಂತತೆ ಮೂಡಬೇಕಾದರೆ ಸರ್ಕಾರ ಏನು ಮಾಡಿದೆ ಉದ್ದೇಶಿಸಿದೆ ಎನ್ನುವುದನ್ನು ತಿಳಿದುಕೊಳ್ಳಬೇಕಾಗಿದೆ.

ಮಲಪ್ರಭಾ ಅಚ್ಚುಕಟ್ಟಿನ ರೈತರ ಚಳವಳಿ ಹೊಸದೇನಲ್ಲ, ನಿನ್ನೆ ಮೊನ್ನೆಯದಲ್ಲ ಯೋಜನೆ ಪ್ರಾರಂಭವಾದ ಮೇಲೆ ನೀರು ಬಿಡತಕ್ಕ ಕೆಲಸ ಪ್ರಾರಂಭವಾದಾಗಿನಿಂದ ನಡೆದಂಥ ಅನೇಕ ಅವ್ಯವಹಾರಗಳ ಮೂಲ ಈ ಚಳವಳಿ.

**ಶ್ರೀ ಎಂ.ಸಿ. ನಾಣಯ್ಯ:** ಮಾನ್ಯ ಬೊಮ್ಮಾಯಿಯವರು ಗಂಭೀರವಾದ ವಿಷಯವನ್ನು ಪ್ರಸ್ತಾಪ ಮಾಡುತ್ತಿದ್ದಾರೆ ಅದನ್ನು ಆಲಿಸಲು ಆ ಕಡೆಯ ಸದಸ್ಯರಾಗಲೀ ಈ ಕಡೆಯ ಸದಸ್ಯರಾಗಲೀ ಮಾನ್ಯ ಮುಖ್ಯಮಂತ್ರಿಗಳಿಗೆ ಸಹಕಾರ ನೀಡಬೇಕು.

ಈ ವಿಷಯ ಚರ್ಚೆಗೆ ತಕ್ಕ ಸಮಯದಲ್ಲಿ ಮಾನ್ಯ ಸದಸ್ಯರುಗಳೆಲ್ಲರೂ ಸಹಕಾರ ನೀಡಿದರೆ, ಮಾನ್ಯಮುಖ್ಯಮಂತ್ರಿಗಳು ಉತ್ತರ ಕೊಡುವುದಕ್ಕೆ ಅನುಕೂಲವಾಗುತ್ತದೆ ಎಂದು ನಾನು ವಿನಯಪೂರ್ವಕವಾಗಿ ಕೋರಿಕೊಳ್ಳುತ್ತೇನೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಾನ್ಯ ಅಧ್ಯಕ್ಷರೇ, ರೈತ ಚಳವಳಿಯ ಮೂಲ ಮತ್ತು ಕಾರಣಗಳು ಅನೇಕವೆಂದು ನಾನು ಹೇಳುತ್ತಿದ್ದೆನು. ನೀರು ಬಿಡತಕ್ಕ ವ್ಯವಸ್ಥೆಯಲ್ಲಿನ ದೋಷದಿಂದಾಗಿ ಚಳವಳಿ ಹೇಗೆ ರೂಪುಗೊಂಡಿತೆಂದು ನಾನು ಸಂಕ್ಷಿಪ್ತವಾಗಿ ಹೇಳಬಯಸುತ್ತೇನೆ. ಅಲ್ಲಿರುವುದು ಕಪ್ಪು ಮಣ್ಣಿನ ಭೂಮಿ ಅಲ್ಲಿ ಕಾಲುವೆಗಳನ್ನು ಮಾಡಿದ್ದಾರೆ. ಆದರೆ ಜಮೀನಿಗೆ ನೀರು ತೆಗೆದುಕೊಂಡು ಹೋಗುವ ಫೀಲ್ಡ್ ಚಾನಲ್‌ಗಳನ್ನು ಮಾಡಿಲ್ಲ. ಸಾಮಾನ್ಯವಾಗಿ ಹಳ್ಳಕೊಳ್ಳಗಳಿಂದ ಮತ್ತು ಗುಡ್ಡ ದಿಣ್ಣೆಗಳಿಂದ ಕೂಡಿದ ಪ್ರದೇಶವದು. ಅಂತಹ ಭೂಮಿಯನ್ನು ಸಮತಟ್ಟು ಮಾಡದೆ ನೀರು ತೆಗೆದುಕೊಂಡು ಹೋಗುವ ಫೀಲ್ಡ್ ಚಾನಲ್‌ಗಳನ್ನು ಮಾಡಿಲ್ಲ. ಸಾಮಾನ್ಯವಾಗಿ ಹಳ್ಳಕೊಳ್ಳಗಳಿಂದ ಮತ್ತು ಗುಡ್ಡದಿಣ್ಣೆಗಳಿಂದ ಕೂಡಿದ ಪ್ರದೇಶವದು ಅಂತಹ ಭೂಮಿಯನ್ನು ಸಮತಟ್ಟು ಮಾಡದೆ ನೀರು ಬಿಡುವುದಕ್ಕಾಗುವುದಿಲ್ಲ. ಆದರೆ ಭೂಮಿಯನ್ನು ಸಮತಟ್ಟು ಮಾಡುವ ಕೆಲಸ ಇನ್ನೂ ಆಗಿಲ್ಲ. ಹೀಗಾಗಿ ನೀರೂ ಬಿಟ್ಟರೂ ಅದನ್ನು ಉಪಯೋಗ ಮಾಡಲಿಕ್ಕಾಗದ ಸ್ಥಿತಿಯಲ್ಲಿ ರೈತರಿದ್ದಾರೆ. ಅನೇಕ ಕಡೆಗಳಲ್ಲಿ ಜಮೀನಿನ ಅರ್ಧ ಭಾಗಕ್ಕೆ ಕಾಲುವೆಯನ್ನು ಹಾಕಿದ್ದಾರೆ. ನೀರು ಅಲ್ಲೆ ನಿಂತು ನೀರು ನಿಂತ ಭೂಮಿ ಸವಳಾಗುತ್ತದೆ. ಇದರ ಜೊತೆಗೆ ಅಭಿವೃದ್ಧಿ ತೆರಿಗೆ ಮತ್ತು ನೀರಿನ ತೆರಿಗೆ ಹಾಕುವ ಸಂದರ್ಭದಲ್ಲಿ ಅಧಿಕಾರಿಗಳು ಸ್ಥಳಕ್ಕೆ ಹೋಗಿ ವಿಚಾರಣೆ ಮಾಡಿ ಯಾವ ಜಮೀನಿಗೆ ನೀರು ಬಿಡಲಾಗಿದೆ ಮತ್ತು ಯಾವ ಜಮೀನಿಗೆ ನೀರು ಬಿಡಲಾಗಿಲ್ಲ ಎನ್ನುವುದನ್ನು ನೋಡದೇ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಗೆ ಬರುವ ಒಟ್ಟು ಜಮೀನಿನ ತೆರಿಗೆ ಹಾಕಿ, ಆ ಬಗ್ಗೆ ನೋಟಿಸ್ ಅನ್ನು ಜಾರಿ ಮಾಡಿದ್ದಾರೆ. ಜಾರಿ ಮಾಡಿರುವ ನೋಟಿಸುಗಳು ಇಂಗ್ಲೀಷ್‌ನಲ್ಲಿವೆ. ಅನೇಕ ರೈತರು ನೋಟಿಸಿಗೆ ಉತ್ತರವಾಗಿ ತಮ್ಮ ತಕರಾರುಗಳನ್ನು ಕೊಡಲಿಲ್ಲ. ಹೀಗಾಗಿ ಎಕ್ಸ್‌ಪಾರ್ಟೆ ನಿರ್ಣಯಗಳಾದವು. ಆ ನಿರ್ಣಯದ ಮೇಲೂ ರೈತರು ನ್ಯಾಯಾಲಯಕ್ಕೆ ಹೋಗಲಿಲ್ಲ. ಜಪ್ತಿ ಮಾಡಲಿಕ್ಕೆ ಹೋದಾಗ ರೈತರಿಗೆಲ್ಲ ಎಂದು ಗೊತ್ತಾಯಿತು.

**ಶ್ರೀ ಜೆ.ಹೆಚ್. ಪಟೇಲ್:** ಬೆಟರ್ಮೆಂಟ್ ಲೆವಿ ಬೇರೆ ಇದೆ, "ಆಫೀಸರ್ ಬೆಟರ್‌ಮೆಂಟ್ ಲೆವಿ" ಯನ್ನೂ ರೈತರು ಕೊಡಬೇಕು! ಇದನ್ನು ಕೊಟ್ಟವರಿಗೆ ಕಡಿಮೆ ಬೆಟರ್‌ಮೆಂಟ್ ಲೆವಿ ನಿಗದಿ ಮಾಡುತ್ತಾರೆ ಅದನ್ನು ನಾನು ಹೇಳುತ್ತಿರುವುದು ಹಾಸ್ಯಕ್ಕಲ್ಲ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಆದರೆ ಫಲವತ್ತಾದ ಭೂಮಿಗೆ 200 ರೂಪಾಯಿಗಳನ್ನೂ ನಿಗದಿ ಮಾಡುವ ಮೂಲಕ ತಾರತಮ್ಯ ತೋರಿಸಿದ್ದಾರೆ. ಇದಕ್ಕೆ ಕಾರಣ, ಮಾನ್ಯ ಜೆ.ಹೆಚ್. ಪಟೇಲರೂ ಹೇಳಿದ್ದೂ ಇರಬಹುದು, ಮಾಮೂಲು ಕೊಟ್ಟವರಿಗೆ ಯಾವ ಅಡ್ಡಿ ಆತಂಕಗಳೂ ಇರುವುದಿಲ್ಲ. ಅಲ್ಲದೆ, ಸರ್ಕಾರದ ಅಧಿಕಾರಿಗಳು ಸರ್ಕಾರಕ್ಕೆ ಬರಬೇಕಾದ ತೆರಿಗೆಗಿಂತ ತಮಗೆ ಬರಬೇಕಾದ ಮಾಮೂಲನ್ನು ಸಮಯಕ್ಕೆ ಸರಿಯಾಗಿ ವಸೂಲು ಮಾಡಿಬಿಡುತ್ತಾರೆ. ಇದರ ಬಗ್ಗೆ ಈ ಸಮಯದಲ್ಲಿ ನಾನು ಹೆಚ್ಚು ಪ್ರಸ್ತಾಪ ಮಾಡುವುದಕ್ಕೆ ಹೋಗುವುದಿಲ್ಲ. ಕಾನೂನುಬದ್ಧವಾಗಿ ಅಭಿವೃದ್ಧಿ ತೆರಿಗೆ ವಹಿಸುವಾಗಲೂ ಸಹ ಅವರು ತಾಲ್ಲೂಕು ಕಛೇರಿ ಬಿಟ್ಟು ಹೊರಗೆ ಹೋಗದೆ. ರೈತರನ್ನು ತಾವಿದ್ದಲ್ಲಿಗೆ ಕರೆಸಿಕೊಂಡು, ರೈತನೇನಾದರೂ ಮಾಮೂಲು ಕೊಟ್ಟರೆ ಅವನಿಗೆ ಕಡಿಮೆ, ಇಲ್ಲದಿದ್ದರೆ ಜಾಸ್ತಿ ಈ ರೀತಿ ಎಲ್ಲ ಮಾಡಿದ್ದಾರೆ.

ಈ ಎಲ್ಲಾ ಅನ್ಯಾಯಗಳ ವಿರುದ್ಧ ರೈತರು ಸಂಘಟಿತರಾಗಿ ಸುಮಾರು ಎರಡು ವರ್ಷಗಳಿಂದ ಚಳವಳಿ ಮಾಡುತ್ತಿದ್ದಾರೆ. ಅವರು ಅನೇಕ ಸಲ ಶಾಸಕರನ್ನು ಭೇಟಿ ಮಾಡಿ ಅವರ ಸಮಸ್ಯೆಗಳನ್ನು ಗಮನಕ್ಕೆ ತಂದರು, ಮಂತ್ರಿಗಳ ಮತ್ತು ಸರ್ಕಾರದ ಗಮನಕ್ಕೂ ತಂದರು. ಅದರೆ ಕೊನೆಕೊನೆಗೆ ಅಧಿಕಾರಿಗಳು ಶಾಸಕರು ಮತ್ತು ಮಂತ್ರಿಗಳು ಅವರಿಗೆ ಪರಿಹಾರ ಒದಗಿಸುವ ಕಾರ್ಯವನ್ನೂ ಮಾಡಲಿಲ್ಲ, ಅದರಿಂದಾಗಿ ಕಳೆದ ಆರು ತಿಂಗಳಿಂದ ರೈತರು ಸಂಘಟಿತರಾಗಿ ಶಾಂತರೀತಿಯಿಂದ ಚಳವಳಿಯನ್ನು ಮಾಡುತ್ತಿದ್ದರು.

ಈ ಹಿನ್ನೆಲೆಯಲ್ಲಿ ಯಾರಿದ್ದಾರೆ ಅದನ್ನೂ ಕಂಡು ಹಿಡಿಯಬೇಕು. ಇಷ್ಟೆ ಅಲ್ಲಾ ಅನಾಹುತವಾದರೂ ಆ ರೈತರ ತಂಡದ ನಾಯಕರು ಯಾರಿದ್ದಾರೆ ಅವರು ಧೈರ್ಯಗೆಡದೆ ರೈತರಿಗೆ ಹೇಳಿದ್ದಾರೆ ಆ ಕಡೆ ನಾವು ಹೋಗಬಾರದು ಎಂದು ನಿರ್ಣಯ ತೆಗೆದುಕೊಂಡು ಶಾಂತ ರೀತಿಯಿಂದ ಪ್ರದರ್ಶನ ಮಾಡಿದವರ ಮೇಲೆ ಲಾಠಿ ಚಾರ್ಜ್, ಗೋಲಿಬಾರ್ ಮಾಡಿದರು ಅಲ್ಲೂ ಒಬ್ಬ ರೈತ ಸತ್ತ. ಇದರಿಂದಾಗಿ ಜನ ಅಲ್ಲಿ ಇತರಕ್ಕಂತಹ ಸರ್ಕಾರಿ ಕಛೇರಿಗಳ ಹಾಗೂ ಇರಿಗೇಷನ್ ಡಿಪಾರ್ಟ್‌ಮೆಂಟಿನ ಆಫೀಸಿನ ಒಳಗಡೆ ಹೋಗಿದ್ದಾರೆ, ಅಲ್ಲಿರತಕ್ಕಂತಹ ರೆಕಾರ್ಡುಗಳನ್ನು ಸುಟ್ಟಿದ್ದಾರೆ. ಫರ್ನಿಚರ್‌ನ್ನು ಸುಟ್ಟಿದ್ದಾರೆ. ಈ ರೀತಿಯ ಗೋಲಿಬಾರ್, ಲಾಠಿಚಾರ್ಜ್, ಪೊಲೀಸಿನವರ ಸಾವು ಇವೆಲ್ಲ ಘಟನೆಗಳು ಅಲ್ಲಿ ನಡೆದಿವೆ. ಇದರಿಂದಾಗಿ ಅಲ್ಲಿ ಒಂದು ಭಯಾನಕ ಪರಿಸ್ಥಿತಿ ಯುಂಟಾಯಿತು. ಕಾರಣ ಅಲ್ಲಿ ಪೊಲೀಸಿನವರ ಸಂಖ್ಯೆ ಕಡಿಮೆ ಇತ್ತು, ಕಂಟ್ರೋಲ್ ಮಾಡತಕ್ಕಂತಹ ಶಕ್ತಿ ಅವರಲ್ಲಿರಲಿಲ್ಲ. ಅಲ್ಲಿ ಸೇರಿದಂತಹ ಜನ ಜಂಗುಳಿಯ ಹತೋಟಿ ಕೈಮೀರಿತು.

ಈ ಘಟನೆಯಾಯಿತು. ಇವತ್ತು ಅಲ್ಲಿ ಅಧಿಕಾರಿಗಳೂ ಸತ್ತಿದ್ದಾರೆ. ನಾನು ಸರ್ಕಾರಕ್ಕೆ ಸ್ಪಷ್ಟವಾಗಿ ಹೇಳಬಯಸುವುದೇನೆಂದರೆ ಅಧಿಕಾರಿಗಳ ಕೊಲೆಗೆ ಯಾರು ಕಾರಣರೋ, ಅವರು ಯಾರೇ ಇರಲಿ ಈ ಕೃತ್ಯವನ್ನು ನಾನು ಖಂಡಿಸುತ್ತೇನೆ. ಅಲ್ಲದೆ ತಪ್ಪಿತಸ್ಥರಿಗೆ ಸರಿಯಾದಂತಹ ಶಿಕ್ಷೆ ಕೂಡ ಆಗಬೇಕು. ಅಧಿಕಾರಿಗಳೂ ಕೂಡ ನಮ್ಮ ಬಂಧುಗಳೇ ಅವರ ಕರ್ತವ್ಯವನ್ನು ಅವರು ಮಾಡುತ್ತಿದ್ದಾರೆ. ಅದರಲ್ಲಿ ಭಿನ್ನಾಭಿಪ್ರಾಯ ಇಲ್ಲ. ಇದರ ಜೊತೆಗೆ ಈ ರೀತಿಯ ಪ್ರಚೋದನೆಗೆ ಅಥವಾ ಇಂತಹ ಘಟನೆಗೆ ಕಾರಣರಾದಂತಹ ಅಧಿಕಾರಿಗಳಿಗೂ ಶಿಕ್ಷೆ ಆಗಬೇಕು. ಸರಿಯಾದಂತಹ ವಿಚಾರಣೆಯಾಗಬೇಕು, ಇಲ್ಲದಿದ್ದರೆ ಈ ಅಧಿಕಾರಿಗಳು ಇದೇ ರೀತಿ ಮಾಡಿಕೊಳ್ಳುತ್ತಾ ಹೋದರೆ ಇವತ್ತು ಆ ಭಾಗದಲ್ಲಿ ನಡೆದಿರಬಹುದಾದ ಘಟನೆಗಳು ರಾಜ್ಯದ ಎಲ್ಲ ಕಡೆಯೂ ಹಬ್ಬುವಂತಹ ಪರಿಸ್ಥಿತಿ ಇದೆ. ಈ ರೀತಿ ಆದ ಮೇಲೆ ಈ ಮನೆಯಲ್ಲಿ ಚರ್ಚೆ ಮಾಡಿದ್ದೇವೆ. ಮಾನ್ಯ ಮುಖ್ಯಮಂತ್ರಿಗಳಲ್ಲಿ ಅಲ್ಲಿಗೆ ಹೋಗಿ ಬಂದಿದ್ದಾರೆ. ನಾನೂ ಕೂಡ ಹೋಗಿ ಬಂದಿದ್ದೇನೆ. ಇದು ಆದಮೇಲೆ ಒಂದು ಮಾತು ಎದ್ದು ಕಾಣಿಸುತ್ತಿದೆ. ಪೋಲೀಸ್ ಅಧಿಕಾರಿಗಳು ತಮ್ಮ ಸಹೊದ್ಯೋಗಿಗಳ ಕೊಲೆಯಾದ ಹಿನ್ನೆಲೆಯಲ್ಲಿ ರೊಚ್ಚಿಗೆದ್ದಿದ್ದಾರೆ. ಅವರ ಮನಸ್ಸು ನೋಯುವುದು ಸಹಜ ನಾನು ಒಪ್ಪುತ್ತೇನೆ, ಆದರೆ ಇಂದೂ ಕೂಡ ಆ ಭಾಗದಲ್ಲಿ ಪರಿಸ್ಥಿತಿ ಬಹಳ ಭಯಾನಕವಾಗಿದೆ. ಕರ್ಫ್ಯೂ ಹಾಕಿದ್ದಾರೆ. 144 ಸೆಕ್ಷನ್ ಜಾರಿ ಮಾಡಿದ್ದಾರೆ. ಸರ್ಕಾರ ಕಾನೂನನ್ನು ವ್ಯವಸ್ಥೆ ಮಾಡುವಾಗ ಈ ಎಲ್ಲ ಕಾರ್ಯಕ್ರಮಗಳನ್ನೂ ಕೈಗೊಳ್ಳಬೇಕಾಗುತ್ತದೆ ಅವಶ್ಯ ಇದ್ದಲ್ಲಿ. ಅಲ್ಲಿ ಕರ್ಫ್ಯೂ ಹಾಕಿದ್ದಾರೆ, ಸಂಜೆ 6 ಗಂಟೆಯಿಂದ ಬೆಳಿಗ್ಗೆ 6 ಗಂಟೆಯವರೆಗೆ ಯಾರೂ ತಿರುಗಾಡಬಾರದು. ಆದರೆ ಹಗಲೊತ್ತು ತಿರುಗಾಡುವುದಕ್ಕೆ ಏನೂ ಇದರಿಂದ ಆತಂಕ ಇಲ್ಲ ನವಲಗುಂದ ಮತ್ತು ನರಗುಂದ್‌ಗೆ ನಮ್ಮ ಶಾಸಕ ಗೆಳೆಯರು ಹೋದಾಗ ಅಲ್ಲಿ ನಾವು ನೋಡಿದ್ದು ಸ್ಮಶಾನ ವಾತಾವರಣ. ಸ್ಮಶಾನ ನಗರ ಒಂದು ಪಿಳ್ಳೆಯೂ ಕೂಡ ತಿರುಗಾಡುತ್ತಿರಲಿಲ್ಲ. ನಾವುಗಳು ಮನೆಗಳಿಗೆ ಹೋಗಿ ಅವರನ್ನು ಕರೆದು ಮಾತನಾಡಿದ್ದೇವೆ. ನಾವು ಬಂದಿದ್ದೇವೆಂಬುದನ್ನು ತಿಳಿದು ಅವರು ಒಬ್ಬೊಬ್ಬರೇ ಹೊರಗಡೆ ಬಂದರೂ ಅವರಿಂದ ನಿಜ ಪರಿಸ್ಥಿತಿಯನ್ನು ತಿಳಿದುಕೊಂಡಿದ್ದೇವೆ. ಅವರು ಏನು ಹೇಳಿದರು ಎಂದರೆ ಈ ಘಟನೆಯಾದ ಮೇಲೆ ಕಳೆದ 3 ದಿವಸಗಳಿಂದ ನಾವು ಮನೆ ಬಿಟ್ಟು ಯಾರೂ ಹೊರಗಡೆ ಹೋಗುವಹಾಗೆ ಇಲ್ಲ. ಜಮೀನಿನ ಕಡೆಯೂ ಹೋಗುವ ಹಾಗೆ ಇಲ್ಲ. ಬಡವರಾಗಲಿ ರೈತರಾಗಲಿ ಹೊರಗಡೆ ಬಂದರೆ ಪೊಲೀಸಿನವರಿಂದ ಲಾಠಿ ಏಟು, ಹೊಡೆತ ಬೀಳುತ್ತೆ. ನೀರು ತರುವುದಕ್ಕೂ ಕೂಡ ಹೋಗುವ ಹಾಗೆ ಇಲ್ಲ. ನಾವುಗಳು ನಮ್ಮ ನಿತ್ಯಕರ್ಮಗಳಿಗೂ ಕೂಡ ಹೊರಗಡೆ ಹೋಗುವ ಹಾಗೆ ಇಲ್ಲ, ಬೈಲಿಗೆ ಹೋದಂತಹ ಹೆಣ್ಣು ಮಕ್ಕಳನ್ನು ಪೊಲೀಸಿನವರು ಸ್ಟೇಷನ್‌ಗೆ ಎಳೆದುಕೊಂಡು ಹೋಗಿದ್ದಾರೆ.

ನೀರನ್ನು ತರುವುದಕ್ಕೆ ಹೋದವರಿಂದ ಕೊಡವನ್ನು ಕಸಿದುಕೊಂಡಿದ್ದಾರೆ. ಕೂಲಿಗೆ ಹೋಗತಕ್ಕಂತಹವರನ್ನು ಕಾಲು ಮುರಿದಿದ್ದಾರೆ, ಒಬ್ಬ ಟ್ಯೆಲರ್ ಆತನ ಹೆಸರು ಮೊಗ್ದಂ ಕಾದರ್ ಆತನು ಬೆಳಿಗ್ಗೆ 7 ಗಂಟೆಗೆ ಹೋಗಬೇಕೆಂದು ಹೊರಗೆ ಬಂದಿದ್ದಾನೆ. ಆತನನ್ನು ಹಿಡಿದುಕೊಂಡು ಹೊಡೆದಿದ್ದಾರೆ. ಅವನ ಮುಖ ಊದಿಕೊಂಡು ಬಿಟ್ಟಿದೆ. ಇನ್ನೂ ಕೆಲವರಿಗೆ ಕೈಮುರಿದಿದೆ, ಕಾಲು ಮುರಿದಿದೆ ಅವರು ಹೊಡೆದಿರುವ ಲಾಠಿಯು ಹೊಡೆತವನ್ನು ನೋಡಿದರೆ ಈ ರೀತಿ ಅಮಾನುಷವಾಗಿ ನಡೆದುಕೊಂಡಿರುವುದನ್ನು ನೋಡಿದರೆ ಯಾವ ಅಧಿಕಾರಿಯೂ ಇದನ್ನು ನೋಡಲಾರ ಎಂದು ನನಗನ್ನಿಸುತ್ತದೆ.

ಇದರಿಂದ ನನಗೆ ಬಹಳ ಆಶ್ಚರ್ಯವಾಗುತ್ತಿದೆ. ಆತ ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ಗೆ ಎಷ್ಟೇ ಕೇಳಿಕೊಂಡರೂ ಸಹಾ ಬಿಡಲಿಲ್ಲ. ಚೆನ್ನಾಗಿ ಹೊಡೆದಿದ್ದಾರೆ. ನಾವು ಇದ್ದ ಸಮಯದಲ್ಲಿಯೇ 23 ಗಂಟೆಗಳ ಕಾಲ ನವಲಗುಂದ ಹಾಗೂ ನರಗುಂದದಲ್ಲಿ ಈ ರೀತಿಯ ಲಾಠಿ ಏಟಿನ ರುಚಿಯನ್ನು ನೋಡಿದಂತಹ ಸುಮಾರು 25 ರಿಂದ 30 ಜನರನ್ನು ನೋಡಿದ್ದೇವೆ. ಅವರ ಕೈ ಕಾಲುಗಳಿಗೆ ಬಿದ್ದಿರತಕ್ಕಂತಹ ಏಟುಗಳನ್ನು ನೋಡಿದ್ದೇವೆ. ಅಲ್ಲಿನ ಜನ ಹೊರಗೆ ಬಂದು ದಿನನಿತ್ಯದ ಪದಾರ್ಥಗಳಾದ ಉಪ್ಪುಹುಳಿ ಕೊಳ್ಳುವುದಕ್ಕೂ ಹೊರಗೆ ಬರುವುದಕ್ಕೆ ಆಗುತ್ತಾ ಇಲ್ಲ. ನೀರು ತರಲು ಹೊರಗೆ ಬರುತ್ತಾ ಇಲ್ಲ. ಕೆಲಸಕ್ಕೆ ಹೋಗುವ ವ್ಯವಸ್ಥೆ ಇಲ್ಲ. ಎಲ್ಲರೂ ಅಂಜಿಕೊಂಡು ಮನೆಗಳಲ್ಲಿಯೇ ಕುಳಿತಿದ್ದಾರೆ. ಏನೋ ಮುಖ್ಯಮಂತ್ರಿಗಳು ಬರುತ್ತಾರೆಂದು ಪತ್ರಿಕೆಗಳಲ್ಲಿ ಬಂದಿದೆ ಎನ್ನುವುದನ್ನು ಓದಿದ ಜನರು ನವಲಗುಂದ ಹಾಗೂ ನರಗುಂದದಲ್ಲಿನ ನಾಯಕರು ಮುಖ್ಯಮಂತ್ರಿಗಳನ್ನು ಭೇಟಿಯಾಗಿ ಇರುವ ಸಂಗತಿಯನ್ನು ತಿಳಿಸಬಹುದು ಎಂದು ಹೊರಡುತ್ತಾರೆ. ಅಲ್ಲಿನ ಚಳವಳಿ ನಾಯಕ ರಾಜಶೇಖರಪ್ಪನವರೂ, ಅದೂ 72 ವರ್ಷ ವಯಸ್ಸಿನ ಮುದುಕ. ಅದೂ ಸ್ವಾತಂತ್ರ್ಯ ಚಳವಳಿಯಲ್ಲಿ ಜೈಲಿನಲ್ಲಿ ಇದ್ದು ಬಂದ ಇವರು ಬಹಳ ಸಜ್ಜನರು, ಅವರು ಒಬ್ಬ ಶಾಂತಮೂರ್ತಿಗಳು ಅಂಥಹವರು ಆ ಭಾಗದಲ್ಲಿಯೇ ಯಾರೂ ಸಿಗುವುದಿಲ್ಲ ಎಂದು ಪೊಲೀಸಿನವರ ಹೇಳಿಕೆಯೇ ಸೂಚಿಸುತ್ತದೆ. ಇವರು ಚಳವಳಿಯಲ್ಲೂ ಶಾಂತಿಗಾಗಿ ಪ್ರಯತ್ನ ಮಾಡಿದವರೆಂದು ಪೊಲೀಸಿನವರ ಹೇಳಿಕೆ ಪತ್ರಿಕೆಗಳಲ್ಲಿ ಬಂದಿದೆ. ಅಂತಹ ಮನುಷ್ಯ ಮುಖ್ಯಮಂತ್ರಿಗಳನ್ನು ನೋಡಲು ಹೊರಟಾಗ ನಿಜ ಸಂಗತಿ ಏನು ಎಂಬುದನ್ನು ತಿಳಿಸುವ ಎಂದು ಮನೆಯಿಂದ ಹೊರಗೆ ಬಂದಾಗ ಅವರನ್ನು ಹಿಡಿದು ಒಯ್ದು ಪೊಲೀಸ್ ವ್ಯಾನಿನಲ್ಲಿ ತೆಗೆದುಕೊಂಡು ಹೋಗಿರುತ್ತಾರೆ. ನವಲಗುಂದದ ಮುನಿಸಿಪಲ್ ಪ್ರೆಸಿಡೆಂಟ್ ಅಸೂತಿಯವರನ್ನು ಕೂಡ ವ್ಯಾನಿನಲ್ಲಿ ಕರೆದುಕೊಂಡು ಹೋಗಿದ್ದಾರೆ. ಅವರು ರಸ್ತೆಗೆ ಬಂದ ತಕ್ಷಣ ಅವರನ್ನು ಹಿಡಿದು

ವ್ಯಾನಿನಲ್ಲಿ ಹಾಕಿಕೊಂಡು ಹೊಡೆದುಕೊಂಡು ಹೋಗಿದ್ದಾರೆ. ಹಾಗೂ ಶ್ರೀ ಎಲ್.ಎಸ್. ಪಾಟೀಲರು ಮುನಿಸಿಪಲ್ ಎಕ್ಸ್ ಪ್ರೆಸಿಡೆಂಟರನ್ನು ಕೂಡ ಇವರು ಮುಖ್ಯಮಂತ್ರಿಗಳಿಗೆ ನೋಡಲು ಬರುವಾಗ ವ್ಯಾನಿನಲ್ಲಿ ಕರೆದುಕೊಂಡು ಹೋಗಿದ್ದಾರೆ. ಅವರು ಘಟನೆ ನಡೆದ ದಿನ ಊರಿನಲ್ಲಿ ಇರಲಿಲ್ಲ. ಘಟನೆ ಆದದ್ದನ್ನು ತಿಳಿದು ಊರಿಗೆ ಓಡಿ ಬಂದಿದ್ದರು. ಅವರಿಗೂ ಮಾನ್ಯ ಮುಖ್ಯಮಂತ್ರಿಗಳಿಗೂ ಸ್ವಲ್ಪ ಪರಿಚಯ ಇದ್ದದ್ದರಿಂದ ನಡೆದ ವಿಷಯವನ್ನು ಸ್ವಲ್ಪ ನೋಡಿ ಎಲ್ಲವನ್ನು ಹೇಳಿಕೊಳ್ಳಬಹುದೆಂದು ತಯಾರಿಮಾಡಿಕೊಂಡು ಹೊರಗೆ ಬಂದಾಗ ಅವರಿಗೆ ಲಾಠಿಯಿಂದ ಹೊಡೆದು ವ್ಯಾನಿನಲ್ಲಿ ಕೂಡಿಸಿಕೊಂಡು ಹೋಗಿರುತ್ತಾರೆ. ಯಾರೂ ಯಾರೂ ನಾಯಕ ಪ್ರಮುಖರು ಇದ್ದರೋ ಅವರನ್ನೆಲ್ಲ ಮುಖ್ಯಮಂತ್ರಿಗಳು ಬರುವುದಕ್ಕೆ ಮುಂಚೆ ಒಳಕ್ಕೆ ಹಾಕಿದ್ದಾರೆ. ಆದರೂ ಕೆಲವು ಜನರು ಸೇರಿದ್ದರು. ಸುಮಾರು 800 ಜನ ಗುಂಪು ಸೇರಿದ್ದರು. ಆಗ ಅಲ್ಲಿ ಪೊಲೀಸಿನವರು ಏಕೆ ಗುಂಪುಗೂಡಿದ್ದೀರಿ ಎಂದು ಕೇಳಿದಾಗ ಅವರು ನಾವು ಮುಖ್ಯಮಂತ್ರಿಗಳನ್ನು ನೋಡುವುದಕ್ಕೆ ಬಂದಿದ್ದೇವೆ ಎಂದು ಹೇಳಿದರು. ಆಗ ಅಲ್ಲಿಯ ಪೊಲೀಸಿನವರು ನಾನು ನಿಮಗೆ 5 ನಿಮಿಷ ಟೈಂ ಕೊಡುತ್ತೇನೆ. ಅಷ್ಟರೊಳಗೆ ಇಲ್ಲಿಂದ ಹೊರಟು ಹೋಗಬೇಕು ಇಲ್ಲದಿದ್ದರೆ ಲಾಠಿ ಚಾರ್ಜು ಮಾಡುತ್ತೇವೆ ಎಂದು ಹೇಳಿ ನಂತರ ನಾಯಕರನ್ನೆಲ್ಲಾ ಹೊಡೆದು ವ್ಯಾನಿನಲ್ಲಿ ಹಾಕಿದ್ದಾರೆ. ಪೊಲೀಸಿನವರ ವಿರುದ್ಧ ಯಾರು ಎದ್ದಿದ್ದಾರೆ ಅವರನ್ನೆಲ್ಲಾ ಅರೆಸ್ಟ್ ಮಾಡಿದ್ದಾರೆ. ಅವರನ್ನು ಇಡೀ ದಿವಸ ಊಟ ಇಲ್ಲದೆ, ನೀರು ಇಲ್ಲದೆ, ನೇಚರ್ ಕಾಲ್‌ಗೆ ಅವಕಾಶವಿಲ್ಲದಂತೆ ಅವರನ್ನು ಪೊಲೀಸ್ ಠಾಣೆಯಲ್ಲಿ ಕೂಡಿ ಹಾಕಿದ್ದಾರೆ. ಕೆಲವರ ಚೈನುಗಳನ್ನು ವಾಚುಗಳನ್ನು ಕಸಿದುಕೊಂಡು ಅವರಿಗೆ ಚೆನ್ನಾಗಿ ಥಳಿಸಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳು ಸಹಾ ಅಲ್ಲಿಗೆ ಭೇಟಿ ಕೊಟ್ಟಿದ್ದು ಅಲ್ಲಿ ಯಾರೂ ಪ್ರಮುಖ ನಾಯಕರು ಇಲ್ಲದ್ದನ್ನು ವ್ಯಕ್ತಪಡಿಸಿದ್ದಾರೆ. ಇವರು ಅಲ್ಲಿ ಯಾರೂ ಇಲ್ಲದಂತೆಯೇ ಮಾಡಿದ್ದಾರೆ. ನಾವು ಕೆಲವು ಜನರ ಒಟ್ಟಿಗೆ ಮಾತನಾಡಲಾಗಿ ಅವರೂ ಕೆಲವು ಮುಖ್ಯಮಂತ್ರಿಗಳು ಬಂದಿದ್ದರು ಅವರು ಊರಿಗೆ ಬಂದು ನಮ್ಮ ಕೂಡ ಮಾತನಾಡುವಂತಹ ಒಂದು ಸೌಜನ್ಯವೂ ಇಲ್ಲದೇ ಹೋಯಿತೇ' ಎಂಬುದಾಗಿ ಅವರು ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ. ಈ ಜನಗಳ ಒಂದು ಭಾವನೆಯನ್ನು ಮಾನ್ಯ ಮುಖ್ಯಮಂತ್ರಿಗಳು ಅರ್ಥಮಾಡಿಕೊಳ್ಳಬೇಕೆಂದು ಅಧ್ಯಕ್ಷರ ಮೂಲಕ ಸರ್ಕಾರದ ಗಮನಕ್ಕೆ ತರುತ್ತಿದ್ದೇನೆ. ರಾಜಶೇಖರಪ್ಪನವರೊಬ್ಬರನ್ನೇ ಮಾರನೇ ದಿನ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ಅವರ ಹತ್ತಿರಕ್ಕೆ ತೆಗೆದುಕೊಂಡು ಹೋಗಿದ್ದಾರೆ. ನ್ಯಾಯಾಂಗ ಯಾವ ರೀತಿಯಲ್ಲಿ ನಡೆದುಕೊಳ್ಳುತ್ತಿದೆ ಎಂಬುದನ್ನು ನಾನೂ ಸಹಾ ವಕೀಲನಾಗಿ ಹೇಳುವಾಗ ನನಗೆ

ಬಹಳ ವೇದನೆಯಾಗುತ್ತದೆ. ಅಲ್ಲಿ ಮಾನ್ಯ ರಾಜಶೇಖರಪ್ಪ ಅವರನ್ನು "ನೀವೇನಾದರೂ ಬಾಯಿ ಬಿಟ್ಟರೆ ಹೊರಗೆ ಬಂದ ಮೇಲೆ ನಿನಗೆ ಏನಾಗುತ್ತದೆಂಬುದು ಆಮೇಲೆ ಗೊತ್ತಾಗುತ್ತದೆ. ಎಂದು ಹೇಳಿ ಬೆದರಿಸಿ ಅವರ ಬಾಯಿಯನ್ನು ಮುಚ್ಚಿಸಿದ್ದಾರೆ. ಆಗ ಅವರು ಏನು ಹೇಳುವುದಕ್ಕೂ ಕೂಡಾ ಆಗುವುದಿಲ್ಲ. ನಾಯಕರುಗಳನ್ನು ಪೋಲೀಸರು ಅವಾಚ್ಯ ಪದಗಳಿಂದ ಬೈದಿದ್ದಾರೆ. ಎಲ್.ಎಸ್. ಪಾಟೀಲರಿಗೆ 4 ಕಡೆ ಲಾಠಿ ಏಟುಗಳು ಬಿದ್ದಿರುವುದು ಅವರ ವೇದನೆ ನೋಡಿದರೇನೆ ಗೊತ್ತಾಗುತ್ತದೆ. ಒಬ್ಬ ರೈತ ನಾಯಕರಿಗೆ ಪೋಲೀಸ್ ಅಧಿಕಾರಿಗಳು ಕೊಟ್ಟಂತಹ ಉಪಕಾರ ಇದು. ನಾನು ಇಲ್ಲಿಯ ಒಂದು ಕಥೆಯನ್ನು ಹೇಳುತ್ತಿದ್ದೇನೆಂದು ತಾವು ಭಾವಿಸಬಾರದು. ಶಾಂತಿ ಪಾಲಿಸಬೇಕಾದ ಕಡೆ ದಂಗೆಯಾಗಿದೆ. ಯಾರು ನಿರಪರಾಧಿಗಳು ಇದ್ದಾರೆ ಅವರಿಗೆ ಈ ರೀತಿ ಅಮಾನುಷವಾಗಿ ಹೊಡೆದರೆ ಶಾಂತಿಪಾಲನೆ ಮಾಡುವುದಕ್ಕಾಗುತ್ತದೆಯೇ? ಇಲ್ಲ, ಖಂಡಿತ ಸಾಧ್ಯವಿಲ್ಲ. ಈ ಭಾಗದ ಜನರು ರಾಷ್ಟ್ರದಲ್ಲಿ ಶಾಂತಿ ನೆಲೆಸಲು ಗಾಂಧಿ ತತ್ವದಲ್ಲಿ ನಂಬಿಕೆಯನ್ನು ಇಟ್ಟುಕೊಂಡು ಚಳವಳಿಯನ್ನು ಮಾಡಿ ಶ್ರೇಷ್ಠತೆಯ ಹೆಸರನ್ನು ಪಡೆದವರು ಇವರು ಭಾರತದ ಸ್ವಾಂತಂತ್ರ್ಯ ಸಂಗ್ರಾಮದಲ್ಲಿ ಈ ಜನತೆಗೆ ಒಂದು ಉಜ್ವಲವಾದ ಸ್ಥಾನವಿದೆ. ಬ್ರಿಟೀಷ್ ಅಧಿಕಾರಿಗಳು ಕೂಡ ಇವರ ಒಂದು ಚಳವಳಿಗೆ ಕುಗ್ಗಿದ್ದಾರೆ. ಒಂದು ಬಾರಿ ಇವರು ಬ್ರಿಟೀಷ್ ಸೈನ್ಯ ಊರಿನ ಒಳಕ್ಕೆ ಹೋಗದಂತೆ ಒಂದು ವಾರಗಳ ಕಾಲ ದಾರಿಯನ್ನು ಅಡ್ಡಗಟ್ಟಿ ನಿಂತಿದ್ದರು. ಇವರು ನಿಮ್ಮ ಪೋಲೀಸಿನವರ ಗುಂಡಿನ ಏಟಿಗೆ ಲಾಠಿ ಚಾರ್ಜ್‌ಗೆ ಹೆದರುವವರಲ್ಲ. ನೀವು ಭದ್ರತಾ ಪಡೆಯವರನ್ನು ಕಳುಹಿಸಿ ಗುಂಡು ಹಾರಿಸಿದರೆ ಇವರು ಎದೆಗುಂದುವುದಿಲ್ಲ. ನೀವು ಹೆಚ್ಚು ಹೆಚ್ಚು ಉಗ್ರ ಕ್ರಮಗಳನ್ನು ಕೈಗೊಂಡು ಕಾನೂನು ಕೈಯಲ್ಲಿದೆ ಎಂದು ನಡೆದುಕೊಂಡರೆ, ಅವರಿಗೂ ಕೂಡ ಗೊತ್ತಿದೆ ಹೇಗೆ ಎದುರಿಸಬೇಕೆಂದು, ಅವರಲ್ಲಿ ಶಕ್ತಿ ಇದೆ ತಾಳ್ಮೆ ಇದೆ. ಧೈರ್ಯ ಇದೆ. ಆದರೆ ಒಂದು ಮಾತು ಮಾತ್ರ ಸತ್ಯ. ಸರ್ಕಾರದ ಕಾನೂನು ಸರ್ಕಾರದ ನೀತಿ ಇದೇ ರೀತಿ ಈ ಚಳವಳಿ ಇಲ್ಲಿಗೆ ನಿಲ್ಲುವುದಿಲ್ಲ. ಇದು ರಾಜ್ಯದ ತುಂಬಾ ಹಬ್ಬುತ್ತದೆ. ರೈತರೆಲ್ಲರೂ ಕೂಡಿ ಚಳವಳಿಯನ್ನು ಪ್ರಾರಂಭ ಮಾಡಿದರೆ ಸರ್ಕಾರವಾಗಲೀ ನಾವಾಗಲೀ, ನೀವಾಗಲೀ ಶಾಸನ ಸಭೆಯನ್ನು ನಡೆಸತಕ್ಕವರಾಗಲೀ ಯಾರೂ ಉಳಿಯುವುದಿಲ್ಲ. ಅದು ಆಗಕೂಡದು. ಇವತ್ತು ರೈತರ ಚಳವಳಿಗೆ ಮೂಲವಾದ ಕಾರಣವೇನು ? ಅವರ ಬೇಡಿಕೆ ಏನು ? ಅದಕ್ಕೆ ಕೂಡಲೇ ಪರಿಹಾರ ಸಿಕ್ಕತಕ್ಕ ಒಂದು ನಿರ್ಣಯವನ್ನು ತಾವು ತೆಗೆದುಕೊಳ್ಳಬೇಕು. ಈಗ ಅನ್ಯಾಯದ ವಸೂಲಿ ಕ್ರಮ ಏನು ಇದೆ ಅದನ್ನು ವಸೂಲಿ ಮಾಡದಂತೆ ಕೂಡಲೇ

ತಡೆ ಆಜ್ಞೆಯನ್ನು ಹಾಕಬೇಕು. ಇದರ ಜೊತೆ ಮುಖ್ಯವಾಗಿ ಶಾಂತಿ ವಾತಾವರಣ ಬರಬೇಕಾದರೆ ಈ ರಾಜ್ಯದಲ್ಲಿ ಬೇರೆ ಬೇರೆ ಪ್ರಕರಣಗಳು ಏನು ನಡೆದಿವೆ ಅವುಗಳನ್ನು ನಾನು ಹೇಳುವುದಕ್ಕೆ ಹೋಗುವುದಿಲ್ಲ. ಬೇರೆ ಕಡೆ ಚಳವಳಿ ನಡೆದು ಅನೇಕ ಕಡೆ ಲೂಟಿಗಳಾಗಿವೆ. ಗದಗ್‌ನಿಂದ ರಿಪೋರ್ಟ್ ಬಂದಿರಬಹುದು. ಜನತಾ ಪಾರ್ಟಿಯವರು ಬೆಲೆ ಏರಿಕೆಯ ಬಗ್ಗೆ ಚಳವಳಿ ಮಾಡುವುದಕ್ಕೆ ಕರೆಕೊಟ್ಟು ಶಾಂತ ರೀತಿಯಲ್ಲಿ ಮೆರವಣಿಗೆ ಬಂದು ತಹಸೀಲ್‌ದಾರರ ಆಫೀಸಿಗೆ ಹೋಗಿ ಮೆಮೊರೆಂಡಮ್ ಕೊಟ್ಟು ಸಂಪೂರ್ಣವಾದ ಸಹಕಾರ ಇದೆ ಎಂದು ಹೇಳಿದ ಮೇಲೆ ವಾಪಸ್ ಬರುವುದರೊಳಗೆ ಜನತಾ ಪಕ್ಷದ ಮುಖಂಡರಾದ "ಬಣ್ಣದ್" ಅವರ ಮನೆ ಲೂಟಿ ಹೊಡೆದು ಮೆರವಣಿಗೆಯ ಸಮಯದಲ್ಲಿ ಅನೇಕ ಅಂಗಡಿಗಳು ಅಲ್ಲಿಯ ಗೂಂಡಾಗಳಿಂದ ಲೂಟಿ ಆಗಿರುತ್ತದೆ. ನರೆಗಲ್‌ನಲ್ಲಿ ನಡೆದ ಘಟನೆ ಎಂದರೆ ರೈತರ ಹೆಸರನ್ನು ಹೇಳಿಕೊಂಡು ಲೂಟಿ ಮಾಡತಕ್ಕಂಥ ಪುಂಡ ಗೂಂಡಾಗಳು ಇದ್ದಾರೆ. ರೈತರು ಅವರನ್ನು ತಡೆಹಿಡಿದಿದ್ದಾರೆ. ನಮಗೆ ಕೆಟ್ಟ ಹೆಸರು ತರುವಂಥ ಕೆಲಸ ಮಾಡಬೇಡಿ ಎಂದೆಲ್ಲಾ ಹೇಳಿರುತ್ತಾರೆ. ಪೋಲೀಸ್ ಅಧಿಕಾರಿಗಳಿಂದ ಒತ್ತಾಯ ಮಾಡಿದರೂ ಲೂಟಿ ಮಾಡತಕ್ಕಂಥ ಒಂದು ಪ್ರಯತ್ನ ನಡೆದು ಸಾಧ್ಯವಾದಷ್ಟು ಲೂಟಿ ಮಾಡಿದ್ದಾರೆ ಪುಂಡರಿಗೆ ಅವಕಾಶ ಕೊಟ್ಟು ಲೂಟಿ ಮಾಡಿರುತ್ತಾರೆ. ಇದನ್ನು ತನಿಖೆ ಮಾಡತಕ್ಕಂಥ ಕ್ರಮವನ್ನು ಸರ್ಕಾರದವರು ಕೈಗೊಳ್ಳಲಿ ಆದರೆ ರೈತರ ಚಳುವಳಿಯ ಘಟನೆ ಏನು ಇದೆ. ಇದರ ಬಗ್ಗೆ ಶಾಂತಿಯುತವಾದ ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ. ಆ ಭಾಗದಲ್ಲಿ ಬೇರೆ ಬೇರೆ ಭಾಗದಲ್ಲಿ ಕಾನೂನಿನ ವ್ಯವಸ್ಥೆ ಪುನಃ ವ್ಯವಸ್ಥಿತವಾಗಿ ಬರಬೇಕು. ಸರ್ಕಾರ ಎಚ್ಚರಿಕೆಯಿಂದ ಸ್ಪಷ್ಟವಾದ ಆಡಳಿತವನ್ನು ಕೊಡಬೇಕಾದರೆ ನ್ಯಾಯಾಂಗ ತನಿಖೆಗೆ ಒಪ್ಪಬೇಕು. ನ್ಯಾಯಾಂಗ ತನಿಖೆಯಾಗಬೇಕೆಂದು ಹೇಳುವಾಗ ಪೋಲೀಸ್ ಅಧಿಕಾರಿಗಳ ಮೇಲೆ ವಿಚಾರಣೆ ರೈತರ ಮೇಲೆ ವಿಚಾರಣೆ, ಇಂಥವರ ಮೇಲೆಯೇ ವಿಚಾರಣೆಯಾಗಬೇಕೆಂದು ಹೇಳುತ್ತಿಲ್ಲ. ಅದರಲ್ಲಿ ರೈತರು ಭಾಗವಹಿಸಲಿಲ್ಲ. ರೈತರು ಚಳವಳಿ ಮಾಡುತ್ತೇವೆ ಎನ್ನುವ ಕೂಗಿನ ದುರ್ಲಾಭವನ್ನು ಪಡೆದುಕೊಂಡ ಕಿಡಿಗೇಡಿಗಳನ್ನು ಪತ್ತೆ ಹಚ್ಚಬೇಕು. ಪತ್ತೆ ಹಚ್ಚಿ ನ್ಯಾಯಾಂಗ ವಿಚಾರಣೆಗೆ ಒಳಪಡಿಸತಕ್ಕ ವಿಚಾರವನ್ನು ಸರ್ಕಾರದವರು ಮಾಡಬೇಕೆಂದು ಹೇಳುತ್ತೇನೆ. ಸರಿಯಾದ ಇನ್‌ವೆಸ್ಟಿಗೇಷನ್ ನಡೆಸುವುದಕ್ಕೆ ಸಮರ್ಥವಾದ ಘಟನೆ ನಡೆದಿದೆ. ರಾಜಶೇಖರಪ್ಪ, ಎಲ್.ಎಸ್. ಪಾಟೀಲ್‌ರವರಂಥ ಅನೇಕ ರೈತ ಪ್ರತಿನಿಧಿ ನಿರಪರಾಧಿಗಳ ಮೇಲೆ ಆರೋಪ ಹೊರಿಸಿ 202ನೇ ಕಲಮ್ ಕೆಳಗೆ ಆರೋಪಿಗಳೆಂದು ಅವರನ್ನು ಜೈಲಿನಲ್ಲಿ

ಇಟ್ಟಿರುತ್ತಾರೆ. ಅವರು ಗಾಂಧಿವಾದಿಗಳು, ರೈತರ ನಾಯಕರು, ಇಂಥ ನಾಯಕರು ಇಂಥ ವಿಚಾರವನ್ನು ಅವರು ಕನಸಿನಲ್ಲಿಯೂ ವಿಚಾರ ಮಾಡದೆ ಇರತಕ್ಕಂಥವರನ್ನು ಜೈಲಿನಲ್ಲಿ ಇಟ್ಟಿರತಕ್ಕಂಥದ್ದು ನಿಜಕ್ಕೂ ಕೂಡ ಮಹಾಪರಾಧ. ಇನ್‌ವೆಸ್ಟಿಗೇಷನ್ ಮಾಡುತ್ತೇವೆಂದು ಹೇಳಿ ಪೊಲೀಸ್ ಅಧಿಕಾರಿಗಳನ್ನು ನೇಮಿಸಿದರೆ ಅಂಥ ಜನರನ್ನು ಆರೋಪಿಗಳನ್ನಾಗಿ ನಿಲ್ಲಿಸುತ್ತಾರೆ. ಇದರಿಂದ ನ್ಯಾಯ ದೊರಕುತ್ತದೆಂದು ಜನ ಹೇಗೆ ನಂಬಲು ಸಾಧ್ಯವಾಗುತ್ತದೆ. ಆದ್ದರಿಂದ ಶಾಂತಿ ಸ್ಥಾಪನೆಯಾಗಬೇಕಾದರೆ ನ್ಯಾಯಾಂಗ ವಿಚಾರಣೆ ಮಾಡುವುದು ಒಂದೇ ಒಂದು ಮಾರ್ಗ. ಅದರಲ್ಲಿ ಪೊಲೀಸ್ ಅಧಿಕಾರಿಗಳೆ ಇರಲಿ, ರೈತರೇ ಇರಲಿ, ರೆವಿನ್ಯೂ ಅಧಿಕಾರಿಗಳೇ ಇರಲಿ ಇದಕ್ಕೆ ಯಾರು ಜವಾಬ್ದಾರರು ಎನ್ನುವುದು ಕಂಡುಬರುತ್ತದೆ. ತಪ್ಪಿತಸ್ಥರು ಯಾರೇ ಇರಲಿ ಅವರ ಬಗ್ಗೆ ವಿಚಾರಣೆಯಾಗಬೇಕು, ಶಿಕ್ಷೆಯಾಗಬೇಕು. ಇದರಿಂದ ಜನರಲ್ಲಿ ಒಂದು ನಂಬಿಕೆ ಬರತಕ್ಕಂಥದ್ದಕ್ಕೆ ಅವಕಾಶವಾಗುತ್ತದೆ. ಇದಕ್ಕೆ ಪೊಲೀಸ್ ಅಧಿಕಾರಿಗಳು ಅಂಜಿಕೊಳ್ಳುತ್ತಿರುತ್ತಾರೆ. ಅವರ ಮುಂದೆ ಸಾಕ್ಷಿ ಪುರಾವೆಗಳು ಬರುತ್ತವೆ. ಅವರು ತಪ್ಪಿತಸ್ಥರಲ್ಲದಿದ್ದರೆ, ಯಾವ ರೀತಿ ತಪ್ಪಿತಸ್ಥರಲ್ಲ ಎನ್ನುವುದನ್ನು ನ್ಯಾಯಾಧೀಶರು ನಿರ್ಣಯ ಕೊಡುತ್ತಾರೆ. ಪೊಲೀಸರ ವಿಚಾರ ಬಂದಾಗ, ಅಧಿಕಾರಿಗಳ ವಿಚಾರ ಬಂದಾಗ ಸತ್ಯವೇನು ಎನ್ನುವುದು ಹೊರಬರುತ್ತದೆ. ಇದರಲ್ಲಿ ಡಿಮಾರಲೈಸ್ ಮಾಡಿಕೊಳ್ಳತಕ್ಕಂಥ ಅವಶ್ಯಕತೆ ಇಲ್ಲ ನ್ಯಾಯ ಅನ್ಯಾಯವನ್ನು ಕಂಡು ಹಿಡಿಯಬೇಕು. ನಿರಪರಾಧಿ ನಾಯಕರನ್ನು ಏನು ಜೈಲಿನಲ್ಲಿ ಇರಿಸಿದ್ದಾರೆ ಅವರನ್ನು ಹೊರಗೆ ಬಿಡದೆ ಹೋದರೆ ಶಾಂತಿ ಉಂಟಾಗುವುದಿಲ್ಲವೆಂದು ಅಲ್ಲಿಯ ಜನರು ಸ್ಪಷ್ಟವಾಗಿ ಹೇಳಿದ್ದಾರೆ. ಅವರು ಹೊರಬರದಿದ್ದರೆ ನಗರದಲ್ಲಿ ಪರಿಸ್ಥಿತಿ ಏನು ಆಗುತ್ತದೋ ಹೇಳುವುದಕ್ಕಾಗುವುದಿಲ್ಲವೆಂದು ಹೇಳುತ್ತಿದ್ದಾರೆ. ಪರಿಸ್ಥಿತಿ ಕೈ ಮೀರಿದ ಮೇಲೆ ಏನು ಮಾಡುವುದಕ್ಕೆ ಆಗುವುದಿಲ್ಲ. 3–4 ದಿವಸದೊಳಗೆ ಸರ್ಕಾರದಲ್ಲಿ ಚರ್ಚೆ ಮಾಡಿ ನಿರ್ಧಾರಕ್ಕೆ ಬರಬೇಕು. ಇಲ್ಲದಿದ್ದರೆ ಸ್ವಪ್ರೇರಣೆಗೆ ಬರಬೇಕಾಗುತ್ತದೆಂದು ಗ್ರಾಮದ ಜನರು ಸರ್ಕಾರಕ್ಕೆ ಒತ್ತಾಯ ಮಾಡುತ್ತಿದ್ದಾರೆ. ನಾಯಕರು ಯಾರು ಇರುತ್ತಾರೆ. ಅವರಿಗೂ ಈ ಘಟನೆಗೂ ಯಾವ ವಿಧವಾದ ಸಂಬಂಧವಿಲ್ಲ. ಕೊಲೆಗೂ ಸಂಬಂಧವಿಲ್ಲ. ಇಂಥ ನಾಯಕರುಗಳನ್ನು ಕೂಡಲೇ ಬಿಡುಗಡೆ ಮಾಡಬೇಕು. ಅದರ ಜೊತೆಗೆ ಕಷ್ಟಪಟ್ಟು ಸರ್ಕಾರಿ ಆಜ್ಞೆಯನ್ನು ಪಾಲನೆ ಮಾಡತಕ್ಕಂಥ ಸಂದರ್ಭದಲ್ಲಿ ಯಾರೂ ತೊಂದರೆಗೆ ಒಳಗಾಗಿದ್ದಾರೋ ಅವರಿಗೆ ರಕ್ಷಣೆಯನ್ನು ಕೊಡಬೇಕು. ಯಾರಿಗೆ ಗಾಯಗಳಾಗಿವೆ. ಯಾರಿಗೆ ನೋವಾಗಿರುತ್ತದೆ. ಅವರಿಗೆ ಪರಿಹಾರವನ್ನು ಕೊಡತಕ್ಕಂಥ ವಿಚಾರದಲ್ಲಿ ಸರ್ಕಾರದವರು ಆಲೋಚನೆ ಮಾಡಬೇಕು.

ಯಾರ ಅಂಗಡಿಗಳು ಲೂಟಿಯಾಗಿರುತ್ತವೆ. ಅದರ ಬಗ್ಗೆಯೂ ಆಲೋಚನೆ ಮಾಡಬೇಕು. ಸರ್ಕಾರ ಕೆಲವು ವಿಚಾರಗಳಲ್ಲಿ ಸ್ಪಷ್ಟವಾದ ನಿಲುವುಗಳನ್ನು ತೆಗೆದುಕೊಳ್ಳುವುದು ಏನೂ ಮಹತ್ವದಲ್ಲ. ಮೂಲತಃ ತಮಗೆ ಎಚ್ಚರ ಕೊಡ ಬಯಸುವುದೇನೆಂದರೆ ತಾವು ಮುಖ್ಯಮಂತ್ರಿಗಳಾದ ಮೇಲೆ ಈ ರೀತಿ ಘಟನೆಗಳು ನಡೆದಿರುತ್ತದೆ. ಅಧಿಕಾರಿಗಳು ಅಂಜಿಕೊಂಡಿದ್ದಾರೆ ಅವರಿಗೆ ಬಂದು ಧೈರ್ಯವನ್ನು ಕೊಡಬೇಕು. ಅವರಿಗೆ ಅಂಜಿಕೆ ಹೋಗುವಂತೆ ಮಾಡಬೇಕು. ಅದನ್ನು ಮಾಡಲಿಕ್ಕೆ ನಮ್ಮದೇನು ಅಭ್ಯಂತರವಿಲ್ಲ. ಇದೇ ನೆಪದಲ್ಲಿ ನ್ಯಾಯಾಂಗ ವಿಚಾರಣೆಗೆ ಒಪ್ಪದಿದ್ದರೆ ಸಾರ್ವಜನಿಕರು ಹೇಳುತ್ತಾರೆ. ಹಾಗಾದರೆ ಪೋಲೀಸ್ ಅಧಿಕಾರಿಗಳಿಂದ ಈ ರೀತಿಯಾದ ವಿಚಾರಣೆಯನ್ನು ನಡೆಸಿ ನಮ್ಮನ್ನು ತಪ್ಪಿತಸ್ಥರನ್ನಾಗಿ ಮಾಡಿ ಗಲ್ಲಿಗೆ ಹಾಕುತ್ತೀರಾ ಎಂದು ಕೇಳುತ್ತಿದ್ದಾರೆ. ಶಾಂತ ರೀತಿಯಿಂದ ರೈತರು ಮಾಡಿದಂಥ ಚಳವಳಿಗೆ ಕೆಟ್ಟ ಹೆಸರು ಕೊಡತಕ್ಕಂಥ ಪ್ರಯತ್ನ ಆಗುತ್ತಿದೆ. ಇದಕ್ಕೆ ನಾವು ಒಪ್ಪುವುದಿಲ್ಲ. ನಮ್ಮ ಚಳವಳಿಯಿಂದ ನಮ್ಮದೇ ತಪ್ಪು ಇದೆ ಎಂದು ಹೇಳಿ ನಿರಪರಾಧಿಗಳನ್ನು ನಾಯಕರನ್ನು ಹಿಡಿದು ಜೈಲಿನಲ್ಲಿ ಹಾಕಿ ನಮ್ಮ ಚಳವಳಿಗೆ ಕಳಂಕ ತರುವಂಥದ್ದಕ್ಕೆ ನಾವು ಒಪ್ಪುವುದಿಲ್ಲವೆಂದು ಹೇಳುತ್ತೇನೆ.

*****

# ಕಂದಾಯ ಮತ್ತು ಕೃಷಿ ಇಲಾಖೆ

ದಿನಾಂಕ: 21.7.1980

**ಕಂದಾಯ ಮತ್ತು ಕೃಷಿ ಕುರಿತಂತೆ ಬೊಮ್ಮಾಯಿಯವರು ಹೆಚ್ಚಿನ ಅಧ್ಯಯನ ಮಾಡಿದ್ದರು. ಹೀಗಾಗಿ ಸದನದಲ್ಲಿ ಈ ವಿಷಯಗಳ ಕುರಿತಂತೆ ಚರ್ಚೆ ಮಾಡುವಾಗ ಅವರಲ್ಲಿ ಅಪಾರ ಕಾಳಜಿ, ಸಮಸ್ಯೆಗಳ ಪರಿಹಾರಕ್ಕೆ ಹತ್ತು ಹಲವು ಸಲಹೆಗಳು ಹರಿದು ಬರುತ್ತಿತ್ತು. ಅವರ ಪ್ರತಿ ಮಾತಿನ ಹಿನ್ನೆಲೆಯಲ್ಲಿ ರೈತರ ಸ್ಥಿತಿಗತಿಯ ವಾಸ್ತವ ಚಿತ್ರಣವಿರುತ್ತಿತ್ತು. ಮಾತಿಗೆ ಪೂರಕವಾದ ಅಂಕಿ ಅಂಶಗಳಿರುತ್ತಿದ್ದವು.**

**ಶ್ರೀ ಎಸ್.ಆರ್.ಬೊಮ್ಮಾಯಿ (ಹುಬ್ಬಳ್ಳಿ):** ಸನ್ಮಾನ್ಯ ಅಧ್ಯಕ್ಷರೆ, ಕಂದಾಯ ಮತ್ತು ಕೃಷಿ ಇಲಾಖೆಯ ಬೇಡಿಕೆ ಮೇಲೆ ಮಾತನಾಡುವಾಗ ನಾನು ಒಂದು ವಿಚಾರವನ್ನು ಪ್ರಸ್ತಾಪ ಮಾಡುವುದಕ್ಕೆ ಬಯಸುತ್ತೇನೆ. ಅದನ್ನೇ ಅನೇಕ ಸದಸ್ಯರು ಈಗಾಗಲೇ ಹೇಳಿದ್ದಾರೆ. ನಮ್ಮ ರಾಷ್ಟ್ರದ ಸಂಪತ್ತು ಉತ್ಪಾದನೆಯಲ್ಲಿ ಶೇಕಡ 50 ಭಾಗ ಈ ವಕ್ಕಲುತನದಿಂದ ಬರುತ್ತಿದೆ. ನಮ್ಮ ರಾಜ್ಯದ ಉತ್ಪಾದನೆಯಲ್ಲಿ 49.7 ಪರ್ಸೆಂಟ್ ವರಮಾನ ಈ ವಕ್ಕಲುತನದಿಂದ ಬರುತ್ತಿದೆ. ಇದರ ಜೊತೆಗೆ ರಾಜ್ಯದ ಮತ್ತು ರಾಷ್ಟ್ರದ 70 ರಷ್ಟು ಜನ ವಕ್ಕಲುತನದ ಮೇಲೆ ಅವಲಂಬಿಸಿರತಕ್ಕಂತಹದ್ದು. ಒಂದೇ ಮಾತಿನಲ್ಲಿ ಹೇಳುವುದಾದರೆ ಪ್ರಜಾಪ್ರಭುತ್ವದಲ್ಲಿ ಸಮಾಜದ ಉದ್ಧಾರ ವಕ್ಕಲುತನದ ಭೂಮಿಯ ಮೇಲೆ ಅವಲಂಬಿಸಿದೆ. ಈಗಾಗಲೇ ಸ್ವಾತಂತ್ರ್ಯ ಬಂದು 30 ವರ್ಷಗಳಾದರೂ ವಕ್ಕಲುತನಕ್ಕೆ ಬೇಕಾದ ಒಂದು ಪ್ರಾಧಾನ್ಯತೆಯನ್ನು ಮಹತ್ವವನ್ನು ಕೊಟ್ಟಿಲ್ಲ ಎಂಬುದಾಗಿ ನಾನು ಸ್ಪಷ್ಟವಾಗಿ ಹೇಳಬಯಸುತ್ತೇನೆ. ಯಾರೇ ಪ್ರಧಾನ ಮಂತ್ರಿಗಳಾಗಿರಲಿ, ಯಾವುದೇ ಪಕ್ಷವಾಗಿರಲಿ, ಯಾವುದೇ ರಾಜ್ಯದ ಮುಖ್ಯಮಂತ್ರಿಗಳಾಗಲಿ, ಈ ಒಂದು ವಕ್ಕಲುತನಕ್ಕೆ ಬಹಳ ಪ್ರಾಧಾನ್ಯತೆಯನ್ನು ಕೊಡಬೇಕಾಗಿತ್ತು. ಅದನ್ನು ಕೊಡದಿದ್ದರಿಂದ ಈವತ್ತು ಈ ಕಷ್ಟವನ್ನು ನಾವು ಅನುಭವಿಸುತ್ತಿದ್ದೇವೆ. ನಮಗಿಂತ ಹಿಂದೆ ಸ್ವತಂತ್ರವಾದ ರಾಷ್ಟ್ರಗಳನ್ನು ನಾವು ನೋಡಬೇಕು, ಉದಾಹರಣೆಗೆ ಹೇಳುವುದಾದರೆ ಆಫ್ರಿಕಾ, ಸಿಲೋನ್ ಹಾಗೂ ಬೇರೆ ರಾಷ್ಟ್ರಗಳನ್ನು ನೋಡಿದರೆ ವಕ್ಕಲುತನದಲ್ಲಿ ಕ್ರಾಂತಿಕಾರಕವಾದ ಬದಲಾವಣೆಯನ್ನು ಪ್ರಥಮದಲ್ಲೇ ಮಾಡಿದ್ದಾರೆ. ಆಮೇಲೆ ಇನ್ನುಳಿದ ವಿಚಾರಗಳನ್ನು ತೆಗೆದುಕೊಂಡಿದ್ದಾರೆ. ಈ ರೀತಿ ಮಾಡಿದರೆ ಎಲ್ಲಾ ತಪ್ಪುತ್ತದೆ. ಇವತ್ತು ವಕ್ಕಲುತನದ ಜಮೀನಿನಲ್ಲಿ ಹೆಚ್ಚು ಉತ್ಪಾದನೆ ಮಾಡಬೇಕು ಆ ರೀತಿ ಹೆಚ್ಚು ಉತ್ಪಾದನೆ ಮಾಡಿದ್ದು ಸರಿಯಾಗಿ ಹಂಚಿಕೆಯಾಗಬೇಕು, ಈ ರೀತಿ ಹಂಚಿಕೆಯಾದರೆ ಉದ್ದಿಮೆಗಳೂ ಮುಂದೆ ಬರುತ್ತದೆ. ಉದ್ದಿಮೆಗಳು ಒಳ್ಳೆಯ ದೃಷ್ಟಿಯಿಂದ ಮುಂದೆ ಬರಬೇಕಾದರೆ

ವಕ್ಕಲುತನ ಅಭಿವೃದ್ಧಿ ಆಗತಕ್ಕಂತಹದ್ದು ಅತ್ಯಂತ ಅಗತ್ಯ. ವಕ್ಕಲುತನ ಅಭಿವೃದ್ಧಿ ಆಗದಿದ್ದರೆ ಉದ್ದಿಮೆಗಳೂ ಮುಂದೆ ಬರುವುದಿಲ್ಲ ಮುಂದೆ ಬರುವ ಸಮಸ್ಯೆ ಅಂದರೆ ದಿನೇ ದಿನೇ ಜನಸಂಖ್ಯೆ ಬೆಳೆಯುತ್ತಿದೆ. ನಿರುದ್ಯೋಗ ಸಮಸ್ಯೆ, ಬಡತನ ಜಾಸ್ತಿಯಾಗುತ್ತಿದೆ. ಈ ರೀತಿಯ ಎಲ್ಲ ಸಮಸ್ಯೆಗಳನ್ನೂ ನಾವು ಬೇರೆ ಬೇರೆ ಡಿಮ್ಯಾಂಡ್‌ಗಳ ಮೇಲೆ ಏನು ಚರ್ಚೆ ಮಾಡುತ್ತಿದ್ದೇವೆ. ಮಾಡಿದ್ದೇವೆ ಅವೆಲ್ಲಕ್ಕಿಂತ ಬಹಳ ಮಹತ್ವವಾದುದು ಇದು ಎಂಬುದಾಗಿ ನಾನು ತಿಳಿದುಕೊಂಡಿದ್ದೇನೆ. ನಾವು ಕೆಲವು ಇಲಾಖೆಗಳಿಗೆ ಅಂದರೆ ಆರೋಗ್ಯ ಇಲಾಖೆಗೆ ಇಂಡಸ್ಟ್ರೀಸ್, ಎಜುಕೇಷನ್ ಇತರೇ ಇಲಾಖೆಗಳಿಗೂ ನಾವು ಖರ್ಚನ್ನು ಒದಗಿಸುತ್ತೇವೆ. ಆದರೆ ಅವೆಲ್ಲವುಗಳಿಗಿಂತ ಹೆಚ್ಚಿಗೆ ಈ ಇಲಾಖೆಯಲ್ಲಿ ಹಾಕಿಕೊಂಡಿರತಕ್ಕಂತಹ ಯೋಜನೆಗಳನ್ನು ತಿಳಿದುಕೊಳ್ಳತಕ್ಕದ್ದು ಬಹಳ ಮುಖ್ಯ, ಇಲ್ಲೇ ನಾವು ತಪ್ಪುತ್ತಿರುವುದು ನಮ್ಮ ಹಿರಿಯರು ಹಿಂದೆ "ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಮೇಲು" ಅಂತ ಹೇಳುತ್ತಿದ್ದರು ಅದು ನನಗೆ ನೆನಪು ಇದೆ. ನಾನು ಚಿಕ್ಕ ವಯಸ್ಸಿನವನಿದ್ದಾಗ ನಮ್ಮ ಮನೆಯಲ್ಲಿ ಒಬ್ಬರು ಉಪಾಧ್ಯಾಯರು ಇದ್ದರು, ಅವರಿಗೆ 10 ರೂಪಾಯಿ ಸಂಬಳ ಸಿಗುತ್ತಿತ್ತು. ಆಗ ನಮ್ಮ ಅಜ್ಜ ಆ ಉಪಾಧ್ಯಾಯರನ್ನು ಕುರಿತು, ವಕ್ಕಲುತನ ಮಾಡಿ ಒಳ್ಳೆಯ ಬೆಳೆ ಬೆಳೆದು ಸುಖವಾಗಿರುವುದನ್ನು ಬಿಟ್ಟು ಈ 10 ರೂಪಾಯಿಗಳಿಗೆ ಉಪಾಧ್ಯಾಯರ ಕೆಲಸ ಮಾಡುತ್ತಿದ್ದೀಯಾ? ಎಂಬುದಾಗಿ ಕೇಳುತ್ತಿದ್ದರು. ನಾನೂ ಕೂಡ ಒಬ್ಬ ವಕ್ಕಲುತನ ಮಾಡತಕ್ಕ ರೈತ. ಈಗಾಗಲೇ ಅನೇಕ ಸದಸ್ಯರು ಹೇಳಿದ್ದಾರೆ. ಇವತ್ತು ರೈತನ ಸ್ಥಿತಿ ಹೇಗಿದೆ ಎಂದರೆ 4ನೇ ದರ್ಜೆಯ ನೌಕರರಿಗಿಂತ ಕನಿಷ್ಠವಾಗಿದ್ದಾನೆ. ಅದಕ್ಕಾಗಿ ಈ ಸಮಸ್ಯೆಯನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ ಈ ವಕ್ಕಲುತನವನ್ನು ಕೈಗಾರಿಕೋದ್ಯಮ ಎಂಬುದಾಗಿ ತಿಳಿದುಕೊಳ್ಳದಿದ್ದರೆ ಇದಕ್ಕೆ ಪರಿಹಾರ ಕಾಣುವುದಿಲ್ಲ. ಇದನ್ನು ಹೇಳುವ ಹಿನ್ನೆಲೆ ಏನು ಎಂಬುದನ್ನು ತಾವು ಯೋಚನೆ ಮಾಡಬೇಕು. ಇವತ್ತು ಯಾವುದೇ ಉದ್ದಿಮೆಯನ್ನು ತೆಗೆದುಕೊಂಡರೆ ಅವು ಟೆಕ್ಸ್‌ಟೈಲ್ ಇಂಡಸ್ಟ್ರೀಸ್ ಇರಬಹುದು. ಶುಗರ್ ಇಂಡಸ್ಟ್ರೀಸ್ ಇರಬಹುದು, ಮ್ಯಾನುಫ್ಯಾಕ್ಚರಿಂಗ್ ಗೂಡ್ಸ್ ಇಂಡಸ್ಟ್ರೀಸ್ ಇರಬಹುದು, ಅಥವಾ ಅಲ್ಯುಮಿನಿಯಂ ಇಂಡಸ್ಟ್ರೀಸ್ ಇರಬಹುದು. ಈ ತರಹ ಇಂಡಸ್ಟ್ರೀಸ್‌ಗಳ ಬಗ್ಗೆ ಆಲೋಚನೆ ಮಾಡುವಾಗ, ಆ ಇಂಡಸ್ಟ್ರೀಸ್ ಸರ್ಕಾರಿ ವಲಯದಲ್ಲಿರಬಹುದು ಅಥವಾ ಖಾಸಗಿ ವಲಯದಲ್ಲಿರಬಹುದು, ಆ ಒಂದು ಉದ್ದಿಮೆಯ ಬಗ್ಗೆ ಆಲೋಚನೆ ಮಾಡಿದಾಗ ಅದರಲ್ಲಿ ಹಾಕತಕ್ಕಂತಹ ಬಂಡವಾಳ ಏನು? ಆ ಬಂಡವಾಳದ ಮೇಲೆ ಆಗತಕ್ಕಂತಹ ಬಡ್ಡಿ ಏನು? ಜೊತೆಗೆ ಅಲ್ಲಿರತಕ್ಕಂತಹ ಕಾರ್ಮಿಕರಿಗೆ ಕೂಡ ಬೇಕಾದಂತಹ ಸಂಬಳ, ಬೋನಸ್ ಇವೆಲ್ಲವನ್ನೂ ಲೆಕ್ಕಾಚಾರ ಹಾಕಿ ಬೆಲೆಯನ್ನು ನಿಗದಿ ಮಾಡುತ್ತಾರೆ. ಇದರ ಜೊತೆಗೆ ತಮಗೆ ಗೊತ್ತಿದ್ದ ಹಾಗೆ ಇನ್ನೂ ಏನೇನು ಖರ್ಚು

ಬರುತ್ತದೆಂದರೆ, ಈ ಉದ್ದಿಮೆಗಳು ಅಂದರೆ ಆಧುನಿಕ ರಾಜರಾಣಿಯರು ಎಂಬುದಾಗಿ ನಾನು ಕರೆಯಬೇಕಾಗುತ್ತದೆ. ಇವೆಲ್ಲಾ ಇಂಡಸ್ಟ್ರಿಯಲ್ ಮ್ಯಾಗ್ನೇಟ್ ಇದ್ದಹಾಗೆ. ಇನ್ನೂ ಬೇರೆ ಬೇರೆ ಖರ್ಚುಗಳೆಂದರೆ, ಅವರ ಹೆಂಡತಿ ಮತ್ತು ಮಕ್ಕಳಿಗೆ ಹಾಕುವಂತಹ ಲಿಪ್‌ಸ್ಟಿಕ್ ಅವರು ಹಾಕಿಕೊಳ್ಳುವ ಬಟ್ಟೆ ಅವರು ಮಾಡುವ ಖರ್ಚು ಎಲ್ಲ ಸೇರಿಸಿ ಆ ಉದ್ದಿಮೆಯನ್ನು ತಯಾರು ಮಾಡುವಂತಹ ಪದಾರ್ಥಗಳಿಗೆ ಬೆಲೆಯನ್ನು ನಿಗದಿ ಮಾಡುತ್ತಾರೆ. ಮತ್ತೆ ಆ ಉದ್ದಿಮೆಯಲ್ಲಿ ತೊಡಗಿಸಿದಂತಹ ಹಣದ ಬಡ್ಡಿ. ಮತ್ತು ಆ ವಸ್ತುವಿನ ಮೇಲೆ ಕೊಡಬೇಕಾದಂತಹ ಇನ್‌ಕಂಟ್ಯಾಕ್ಸ್ ಲೇಬರರ್ಸ್ ಚಾರ್ಜಸ್ ಇನ್ನಿತರೆ ಎಲ್ಲ ಖರ್ಚುಗಳನ್ನೂ ಲೆಕ್ಕಾಚಾರ ಹಾಕಿ ಆ ವಸ್ತುವಿನ ಬೆಲೆಯನ್ನು ನಿಗದಿ ಮಾಡುತ್ತಾರೆ ಇದು ಒಂದು ಕಡೆ, ಮತ್ತೊಂದು ಕಡೆ ಇವತ್ತು ರೈತ ನೈಸರ್ಗಿಕವಾದ ಒಂದು ಕಾರಣದ ಮೇಲೆ ಅವನು ತನ್ನ ಬೆಳೆಯನ್ನು ಬೆಳೆಯಬೇಕು. ಬೆಳೆ ಬರುವ ಗ್ಯಾರಂಟಿಯೂ ಇಲ್ಲ. ಅವನೂ ಕಷ್ಟಪಡುತ್ತಾನೆ. ಅವನ ಜೊತೆಗೆ ಅವನ ಹೆಂಡತಿ ಮಕ್ಕಳು. ಜೊತೆಗೆ ಆ ಗ್ರಾಮದಲ್ಲಿರತಕ್ಕಂತಹ ಕಾರ್ಮಿಕರನ್ನು ತೆಗೆದುಕೊಂಡು ಕೆಲಸ ಮಾಡಿ ಉತ್ಪಾದನೆ ಮಾಡುತ್ತಾನೆ. ಆದರೆ ಅವನು ಬೆಳೆದಂತಹ ಬೆಳೆಗೆ ಬೆಲೆ ಯಾರು ನಿಗದಿ ಮಾಡುವವರು; ಸರ್ಕಾರ ಅಲ್ಲ, ಜನತಾ ಪ್ರತಿನಿಧಿ, ನಾಯಕರುಗಳು ನಾವಲ್ಲ, ರೈತ ಅಲ್ಲ, ಈ ಉದ್ದಿಮೆದಾರರು. ನಮ್ಮ ಕೇಂದ್ರ ಸರ್ಕಾರದವರೂ ಅಲ್ಲ, ಅವರು ಆ ರೀತಿ ಮಾಡುವಾಗ ಬಹಳ ಬುದ್ಧಿವಂತಿಕೆಯಿಂದ ಮಾಡುತ್ತಿದ್ದಾರೆ. ಇದು ಹೋಗಬೇಕು, ಅಂಕಿ ಸಂಖ್ಯೆಗಳನ್ನು ನಾನು ಇವತ್ತು ಕೊಡುವುದಕ್ಕೆ ಹೋಗುವುದಿಲ್ಲ. ಒಬ್ಬ ರೈತನ ಸ್ಥಿತಿ ನಮಗೂ ಗೊತ್ತಿದೆ. ನಿಮಗೂ ಗೊತ್ತಿದೆ. ಅನೇಕ ಸದಸ್ಯರೂ ಕೂಡ ಹೇಳಿದ್ದಾರೆ. ಅದನ್ನೇ ನಾನು ಕೂಡ ಪುನಃ ಪುನಃ ಹೇಳಬೇಕಾದ ಅವಶ್ಯಕತೆ ಇಲ್ಲ. ಮೊದಲನೆಯದು ರೈತರ ಬಗ್ಗೆ ತಾವು ಮಾಡಬೇಕಾದುದು ಏನೆಂದರೆ ಆತನು ಬೆಳೆಯತಕ್ಕಂತಹ ಬೆಳೆಗೆ ಸೂಕ್ತವಾದ ಬೆಲೆಯನ್ನು ನಿಗದಿ ಮಾಡಿ. ನಿಮ್ಮ ಕರುಣೆ ಬೇಡ ಆದರೆ ವಕ್ಕಲುತನದ ಅಭಿವೃದ್ಧಿಯಾಗಬೇಕಾದರೆ, ರಾಷ್ಟ್ರ ಉನ್ನತಿಯಾಗಬೇಕಾದರೆ ರೈತನು ಬೆಳೆದಂತಹ ಬೆಳೆಗೆ ಸರಿಯಾದಂತಹ ಬೆಲೆಯನ್ನು ನಿಗದಿ ಮಾಡಿ. ಇದನ್ನು ಮಾಡುವಂತೆ ತಾವು ಕೇಂದ್ರ ಸರ್ಕಾರದ ಮೇಲೆ ಒತ್ತಾಯ ಮಾಡಬೇಕು. ಇದನ್ನು ಮಾಡದಿದ್ದರೆ ನಾವು ಕೇಳಿದ್ದೂ ಹೇಳಿದ್ದೂ ಎಲ್ಲಾ ಗಾಳಿಗೆ ಹೋಗುವಂತಾಗುತ್ತದೆ. ಪ್ಯಾರಿಟಿ ಪ್ರೈಸನ್ನು ಯಾವ ರೀತಿ ಮಾಡಬೇಕೆಂದರೆ; ಈಗಾಗಲೇ ಅದರ ಬಗ್ಗೆ ಹೇಳಿದ್ದೇನೆ. ಉದ್ದಿಮೆಯಲ್ಲಿ ಯಾವ ರೀತಿ ಲೆಕ್ಕಾಚಾರ ತೆಗೆದುಕೊಳ್ಳುತ್ತಾರೋ, ಅದೇ ರೀತಿ ಇವತ್ತು ರೈತ ಬೆಳೆದಂತ ಬೆಳೆಗೆ, ಅವನು ಹಾಕಿದ ಹಣ, ಅವನ ಶ್ರಮ, ಇಷ್ಟೆಲ್ಲಾ ಮಾಡಿದರೂ ಅವನಿಂದ ಬರತಕ್ಕಂತಹ ಉತ್ಪಾದನೆ ಇವೆಲ್ಲವನ್ನೂ ಲೆಕ್ಕಾಚಾರಕ್ಕೆ ತೆಗೆದುಕೊಳ್ಳಿ. ಅವೆಲ್ಲವನ್ನೂ

ಲೆಕ್ಕಾಚಾರಕ್ಕೆ ತೆಗೆದುಕೊಂಡು ಪ್ಯಾರಿಟಿ ಪ್ರೈಸನ್ನು ಫಿಕ್ಸ್ ಮಾಡಿ. ಮತ್ತೆ ರೈತನಿಗೆ ಬೇಕಾದ ಚಿಕ್ಕ ಪುಟ್ಟ ಸಾಮಾನುಗಳಿಗೆ ರಿಯಾಯಿತಿ ಕೊಡಿ. ರೈತ ಈ ರಾಷ್ಟ್ರದ ಬೆನ್ನೆಲುಬು ಅಂತ ಪತ್ರಿಕೆಗಳಲ್ಲಿ ಎಲ್ಲರೂ ಬರೆಯುತ್ತಾರೆ. ಆದರೆ ಇವತ್ತು ಅವನ ಸ್ಥಿತಿ ಬಹಳ ಕ್ಷೀಣಿಸುತ್ತಿದೆ. ಅವನು ಬೆಳೆದಂತಹ ಬೆಳೆಗೆ ಮಾರಾಟ ಮಾಡುವಂತಹ ಅನುಕೂಲ ಮಾಡಿಕೊಡಬೇಕು. ಮತ್ತು ಮಾರಾಟ ಮಾಡುವುದಾದರೂ ಕೂಡ ಅದಕ್ಕೆ ಬೆಲೆಯನ್ನು ನಿಗದಿ ಮಾಡತಕ್ಕಂತಹ ಹಕ್ಕು ಏನಿದೆ ಆ ಹಕ್ಕನ್ನು ರೈತನಿಗೆ ಕೊಡಿ. ಆ ಒಂದು ನಿರ್ಣಯವನ್ನು ತಾವು ಮಾಡಿ. ಅದನ್ನು ಮಾಡುವಾಗ ಇವೆಲ್ಲಾ ವಿಚಾರವನ್ನೂ ಗಮನಕ್ಕೆ ತೆಗೆದುಕೊಳ್ಳಬೇಕು.

ಸ್ವಾಮಿ, ಪ್ಯಾರಿಟಿ ಪ್ರೈಸ್ ಬಗ್ಗೆ ಹೇಳುವಾಗ ಭಾರತದಲ್ಲಿ ಅಂಕಿಸಂಖ್ಯೆಗಳನ್ನು ಸಮಗ್ರವಾಗಿ ಶಾಸ್ತ್ರೋಕ್ತವಾಗಿ ಅಧ್ಯಯನ ಮಾಡತಕ್ಕ ಸಮಸ್ಯೆ ಬಗ್ಗೆ ಹೇಳುತ್ತೀರಿ. ನಾನು ಇದಕ್ಕೆ ಒಂದು ಸುಲಭೋಪಾಯವನ್ನು ಕೊಡುತ್ತೇನೆ. ಕಳೆದ ಅನೇಕ ವರ್ಷಗಳಿಂದ ಏನು ಮಾರ್ಕೆಟ್ ಪ್ರೈಸ್ ಇದೆ ಅದನ್ನು ಆವರೇಜ್ ತೆಗೆದುಕೊಳ್ಳಿ ಅದನ್ನು ಪ್ಯಾರಿಟಿ ಪ್ರೈಸ್ ಮಾಡಿಕೊಳ್ಳಲು 1971–72 ರಿಂದ 1981–82 ರವರೆವಿಗೆ ರಾಗಿ, ಜೋಳದ ಬೆಲೆಯಲ್ಲಿ ಆವರೇಜ್ ತೆಗೆದುಕೊಂಡು ಪ್ಯಾರಿಟಿ ಪ್ರೈಸನ್ನು ಫಿಕ್ಸ್ ಮಾಡಿ. ಈ ದಿನ ರೈತರು ಉದ್ಯಮದವರ ರೀತಿಯಲ್ಲಿ ಇಷ್ಟೇ ಉತ್ಪಾದನೆಯನ್ನು ಮಾಡುತ್ತಾರೆಂದು ಹೇಳುವುದಕ್ಕೆ ಬರುವುದಿಲ್ಲ. ಉದ್ಯಮದವರು ಇಷ್ಟೇ ವಸ್ತುಗಳನ್ನು ತಯಾರಿಸಬಹುದೆಂದು ನಿಗದಿ ಮಾಡಬಹುದು. ಆದರೆ ರೈತ ಮಳೆ, ಗಾಳಿ, ಇವುಗಳನ್ನೆಲ್ಲಾ ಅವಲಂಬಿಸಬೇಕಾಗುತ್ತದೆ. ಸರ್ಕಾರ ಸಪೋರ್ಟ್ ಪ್ರೈಸ್ ಫಿಕ್ಸ್ ಮಾಡುವಾಗ ಪ್ಯಾರಿಟಿ ಪ್ರೈಸನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಇಷ್ಟೇ ನಿಗದಿ ಮಾಡಬೇಕೆಂಬ ಅಭಿಪ್ರಾಯವನ್ನು ನಾನು ಹೇಳುತ್ತಾ ಇಲ್ಲ. ಗೋಧಿ ಬಗ್ಗೆ 120 ರೂಪಾಯಿ ಆಗಬೇಕು. ಅಕ್ಕಿ, ರಾಗಿ, ಬೇರೆ ಬೇರೆ ಧಾನ್ಯ ಮೆಣಸಿನಕಾಯಿ ಬಗ್ಗೆ ಸಪೋರ್ಟ್ ಪ್ರೈಸ್ ಫಿಕ್ಸ್ ಮಾಡಲು ಏನು ಮಾಡಬೇಕೆಂಬ ಬಗ್ಗೆ ನಮ್ಮ ರಾಜ್ಯದ ಅಧಿಕಾರಿಗಳು ಕೇಂದ್ರ ಸರ್ಕಾರದ ಅಧಿಕಾರಿಗಳ ಜೊತೆ ಕುಳಿತು ವರ್ಕ್ ಔಟ್ ಮಾಡಿದ್ದಾರೆ. ಆ ಬಗ್ಗೆ ಮಾಹಿತಿ ನನ್ನಲ್ಲಿ ಇದೆ, ಅವುಗಳ ಉದಾಹರಣೆ ಕೊಡುವ ಅವಶ್ಯಕತೆ ಇಲ್ಲ. ಅಂಕಿಸಂಖ್ಯೆ ಇದೆ. ಅದನ್ನೆಲ್ಲಾ ಉದ್ದೇಶದಲ್ಲಿಟ್ಟುಕೊಂಡು ನೀವು ಸಪೋರ್ಟ್ ಪ್ರೈಸ್ ಫಿಕ್ಸ್ ಮಾಡಿ. ಸಪೋರ್ಟ್ ಪ್ರೈಸ್ ಡಿಕ್ಲೇರ್ ಮಾಡುವಾಗ ಮಾನ್ಯ ಬಂಗಾರಪ್ಪನವರು ಹಾಗೂ ಮೊಯಿಲಿಯವರು ಒಂದು ವಿಷಯವನ್ನು ನೆನಪಿನಲ್ಲಿ ಇಡಬೇಕು. ಉತ್ತರದಲ್ಲಿ ಒಂದು ರೀತಿ ನಡೆಯುತ್ತಾ ಇದೆ. ಅಲ್ಲಿನ ವೀಟ್ ಲಾಬಿ ಬಗ್ಗೆ ಹೇಳುತ್ತಿದ್ದೇನೆ. ಅವರು ಬಹಳ ಪವರ್ ಫುಲ್ ಆಗಿದ್ದಾರೆ. ಕಬ್ಬು ಬೆಳೆಯುವವರಿಗೆ ಇರುವಂತೆ ಅಕ್ಕಿ, ರಾಗಿ, ಜೋಳ, ಮೆಣಶಿನಕಾಯಿ

ಬೆಳೆಯುವವರಿಗೆಲ್ಲಾ ಅದೇ ರೀತಿ ಒಂದು ಬೆಲೆ ಸಿಗಬೇಕೆಂದು ಹೇಳುತ್ತೇನೆ. ಸಪೋರ್ಟ್ ಪ್ರೈಸನ್ನು ನಿಗದಿಪಡಿಸಬೇಕಾಗುತ್ತದೆ. ಅವನಿಗೆ ನೀವು ಈ ಸಲ 5 ರೂಪಾಯಿ ಹೆಚ್ಚು ಕೊಟ್ಟಿದ್ದೇವೆಂದರೆ ಯಾರ ಉಪಯೋಗಕ್ಕೆ ಕೊಟ್ಟಿದ್ದೀರಿ? 4 ರೂಪಾಯಿ ಹೆಚ್ಚು ಮಾಡೋಣ ಎಂದರೆ ಹೇಗೆ? ನಾನು ಮಾನ್ಯ ಮೊಯಿಲಿಯವರು ಮೇ ತಿಂಗಳಲ್ಲಿ ಪಾಂಡಿಚೇರಿಯಲ್ಲಿ ಭಾಷಣ ಮಾಡಿದ್ದನ್ನು ಓದಿದ್ದೇನೆ. ಅವರು ಬಹಳ ಚೆನ್ನಾಗಿ ಮಾತನಾಡಿದ್ದಾರೆ. ಕೆಲವಾರು ಸಲಹೆಗಳನ್ನು ಮಾಡಿದ್ದಾರೆ. ಅದರಲ್ಲಿ ಕೆಲವು ಸಲಹೆಗಳನ್ನು ನಾನು ಮೆಚ್ಚಿದ್ದೇನೆ. ಸಾಲ ಕೊಡುವುದರ ಬಗ್ಗೆ ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಈ ವಿಚಾರದಲ್ಲಿ ಅವನು ಏನನ್ನು ಹೇಳಿಲ್ಲ. ಡಿ.ಐ.ಆರ್. ಬಗ್ಗೆ ಹೇಳಿದ್ದಾರೆ. ಆದ್ದರಿಂದ ತಾವು ಈ ವ್ಯವಸಾಯೋತ್ಪನ್ನಗಳ ಬೆಲೆ ಬಗ್ಗೆ ತಾವು ನಿರ್ದಿಷ್ಟವಾದ ನಿಲುವನ್ನು ತೆಗೆದುಕೊಳ್ಳಬೇಕು. ತಾವು ಸರ್ಕಾರಿ ನೌಕರರಿಗೆ ಬೆಲೆ ಜಾಸ್ತಿಯಾಯಿತೆಂದು ಹೇಳಿ ಎಷ್ಟು ಸಾರಿ ಟಿ.ಎ. ಡಿ.ಎ. ಏರಿಸಿಲ್ಲ. ಯಾಕೆ ಏರಿಸಿದಿರಿ ? ಅವರಿಗೂ ಕಷ್ಟ ಇದೆ. ಬೆಲೆಧಾರಣೆ ಜಾಸ್ತಿಯಾಗಿದೆಯೆಂದು ತಾವು ಕೊಟ್ಟಿಲ್ಲವೇ. ಅದೇ ರೀತಿ ರೈತರಿಗೆ ಕೊಡತಕ್ಕ ಸಪೋರ್ಟ್ ಬೆಲೆಯನ್ನು ಎಷ್ಟು ಸಾರಿ ಏರಿಸಿದ್ದೀರಿ ? ಇವತ್ತು ರೈತ ಕೊಳ್ಳತಕ್ಕ ಗೊಬ್ಬರದ ಬೆಲೆ ಎಷ್ಟು ಹೆಚ್ಚಾಗಿದೆ ಎಂಬುದು ನಿಮಗೆ ಗೊತ್ತಿದೆ. ನಿಮಗೆ ಗೊತ್ತಿರುವಾಗ ಈ ಸರ್ಕಾರ ಬಂದ ಮೇಲೆ ಯೂರಿಯಾ ಬೆಲೆ ಟನ್ನಿಗೆ 1450 ರೂಪಾಯಿ ಇದ್ದುದು 2000 ರೂಪಾಯಿಗೆ ಏರಿತು. ಅದೇ ರೀತಿ ಬೇರೆ ಬೇರೆ ರೀತಿಯ ಗೊಬ್ಬರದ ಬೆಲೆ ಏನಾಗಿದೆ? ಇವತ್ತು ವಿಜಯ ಕಾಂಪ್ಲೆಕ್ಸ್ ಬೆಲೆ 1,700 ರೂಪಾಯಿ ಇದ್ದದ್ದು 2,360 ರೂಪಾಯಿಗೆ ಏರಿದೆ. ಇವತ್ತು ಕಬ್ಬಿಣದ ಬೆಲೆ ಏನಾಗಿದೆ? ಇವತ್ತು ಒಬ್ಬ ನೇಗಿಲು ಮಾಡಲು ಚಕ್ಕಡಿ ಮಾಡಲು ಕಬ್ಬಿಣವನ್ನು ಏರುತ್ತಿರುವ ಬೆಲೆಯಲ್ಲಿ ಹೇಗೆ ಕೊಳ್ಳಬೇಕು ಇವತ್ತು ಟಿಂಬರ್ ರೇಟ್ ಏನಾಗಿದೆ? ಅದು ಕೂಡ ಸಿಕ್ಕುತ್ತಾ ಇಲ್ಲ. ಇವತ್ತು ರೈತನ ಜೀವನಾವಶ್ಯಕ ವಸ್ತುಗಳ ಬೆಲೆ ಏನಾಗಿದೆ? ಅವನು ತೊಡತಕ್ಕ ಬಟ್ಟೆಯ ಬೆಲೆ ಏನಾಗಿದೆ? ಸಕ್ಕರೆ ಬೆಲೆ ಏನಾಗಿದೆ? ಪಾಪ ಅವನು ಯಾಕೆ ಸಕ್ಕರೆಯನ್ನು ತಿನ್ನಬೇಕು ಹೇಳಿ ಇವತ್ತು ಎಲ್ಲಾ ವಸ್ತುಗಳ ಬೆಲೆ ಹೆಚ್ಚಾಗಿದೆ. ಬೆಲೆ ಹೆಚ್ಚಾದಾಗ ಸರ್ಕಾರಿ ನೌಕರರಿಗೆ ಸಂಬಳವನ್ನು ಜಾಸ್ತಿ ಮಾಡುತ್ತಿರಿ. ಈ ರೈತನ ಬಗ್ಗೆ ಏನು ಮಾಡುತ್ತಿದ್ದೀರಿ. ಇವತ್ತು ಆತ ಬೆಳೆಯತಕ್ಕ ಬೆಳೆಯ ಬೆಲೆ ಜಾಸ್ತಿ ಆಗುತ್ತಾ ಇಲ್ಲ. ಅವನು ಕೊಳ್ಳತಕ್ಕ ಉಪಯೋಗ ಮಾಡತಕ್ಕ ಎಲ್ಲಾ ವಸ್ತುಗಳ ಬೆಲೆ ಹೆಚ್ಚಾಗುತ್ತಾ ಇವೆ. ಯಾವ ರೀತಿಯ ನ್ಯಾಯ ಸ್ವಾಮಿ ಇದು ಈ ಸಮಸ್ಯೆಗಳನ್ನು ಆಲೋಚನೆ ಮಾಡದೆ ಸುಮ್ಮನೇ ನಾವು ಅವರಿಗೆ 6 ರೂಪಾಯಿ ಹೆಚ್ಚು ಮಾಡೋಣ 3 ರೂಪಾಯಿ ಹೆಚ್ಚು ಮಾಡೋಣ ಎನ್ನುವ ಮಾತಿನಿಂದ ಏನು ಪ್ರಯೋಜನ? ಇದು ಕೇಂದ್ರ ಸರ್ಕಾರದ ನೀತಿ ಇದೆ. ನಾವು ರಾಜ್ಯ ಸರ್ಕಾರದವರು ಏನು

ಮಾಡುವುದು ಎನ್ನುವ ವಾದ ಇದೆ. ಅನೇಕ ಸಲ ನಾನು ಈ ಬಗ್ಗೆ ಹೇಳಿದ್ದೇನೆ. ರೈತರ ವಿಚಾರದಲ್ಲಿ ಮಾನ್ಯ ವಿರೋಧ ಪಕ್ಷದ ನಾಯಕರ ಸ್ಥಾನದಲ್ಲಿ ಕುಳಿತುಕೊಂಡು ಮಾನ್ಯ ದೇವರಾಜ ಅರಸ್ ಒಂದು ಮಾತನ್ನು ಹೇಳಿದರು. ಸಂತೋಷ, ಅವರು ಹೇಳಿದ ಮಾತನ್ನು ನಾನು ಸ್ವಾಗತ ಮಾಡುತ್ತೇನೆ ಕಳೆದ ಆರು ವರ್ಷಗಳಿಂದ ಈ ಮನೆಯಲ್ಲಿ ನಡೆದಂತಹ ಚರ್ಚೆಯನ್ನು ಆ ಬಗ್ಗೆ ತೆಗೆದುಕೊಂಡ ತೀರ್ಮಾನವನ್ನು ತೆಗೆಸಿ ನೋಡಿದರೆ ಆಗ ಗೊತ್ತಾಗುತ್ತದೆ. ನಾನು ಈ ಮಾತನ್ನು ಶ್ರೀ ದೇವರಾಜ್ ಅರಸ್ ಅವರನ್ನು ಟೀಕೆ ಮಾಡುವ ದೃಷ್ಟಿಯಿಂದ ಹೇಳುತ್ತಾ ಇಲ್ಲ. ಒಂದು ರಾಜಕೀಯವನ್ನು ಮಾಡುವುದಕ್ಕೆ ಹೋಗುವುದಿಲ್ಲ ಕಳೆದ 67 ವರ್ಷಗಳಿಂದ ಈ ರಾಜ್ಯದ ರೈತರನ್ನು ತುಳಿಯತಕ್ಕ ಒಂದು ಮಹಾಪರಾಧ ನಡೆದು ಹೋಗಿದೆ. ಇದು ಅನೇಕ ಸಲ ಚರ್ಚೆಯಾಗಿದೆ. ಅದರ ಮೇಲೆ ವಾಟರ್ ರೇಟ್ ಬೆಟರ್‌ಮೆಂಟ್ ಲೆವಿ, ವಿದ್ಯುತ್ ಚಾರ್ಜಸ್ ಇವುಗಳೆಲ್ಲಾ ಏನು ಸ್ವಾಮಿ? ರೈತರು ಬೆಳೆದು ಲಾಭ ಮಾಡಿಕೊಳ್ಳುತ್ತಿದ್ದಾರೆ ಎನ್ನುವ ಮಾತನ್ನು ಹೇಳಬಹುದು. ಅದು ಕೆಲವಂಶ ನಿಜ. ರೈತರಲ್ಲೂ ಕೆಲವು ಶ್ರೀಮಂತ ರೈತರಿದ್ದಾರೆ. ನಾನು ಇಲ್ಲ ಎಂದು ಹೇಳುವುದಿಲ್ಲ. ಅವರಲ್ಲೋ ಶೇಕಡಾ ಒಂದು ಭಾಗ ಇರಬಹುದು. ರೈತರ ಎಲ್ಲಾ ಆಸ್ತಿಯನ್ನೂ ಕೂಡಿಸಿದರೂ 5 ಲಕ್ಷ ಅಥವಾ 6 ಲಕ್ಷ ರೂಪಾಯಿ ಮೇಲೆ ಆಗುವುದಿಲ್ಲ. ಯಾರೇ ಒಬ್ಬರು ಶ್ರೀಮಂತರಿದ್ದಾರೆಂದು ಎಲ್ಲರೂ ಶ್ರೀಮಂತರೆಂದು ಹೇಳಲಾಗುವುದಿಲ್ಲ. ಸಾಮಾನ್ಯವಾಗಿರತಕ್ಕಂತಹ ರೈತರ ಒಂದು ಅಂಕಿಸಂಖ್ಯೆಯನ್ನು ನೋಡಿ ಸ್ವಾಮಿ. ಶೇಕಡಾ 60 ಭಾಗ ಸ್ಮಾಲ್ ಹೋಲ್ಡರ್ಸ್ ಇದ್ದಾರೆ, ಶೇಕಡಾ 20 ಭಾಗ ಮೀಡಿಯಂ ಹೋಲ್ಡರ್ಸ್ ಇದ್ದಾರೆ, ಈ ರೀತಿ ಪರಿಸ್ಥಿತಿ ಇದೆ. ರೈತರ ಸಮಸ್ಯೆ ಬಂದಾಗ ಎಲ್ಲರೂ ಕೂಡ ಬೇಜಾರು ಪಡುತ್ತಾರೆ. ಎಲ್ಲಾ ಹಾರಿಕೆಯ ಮಾತುಗಳೇ. ಮಾನ್ಯ ಬಂಗಾರಪ್ಪನವರು ನಮ್ಮ ಜೊತೆ ಬಹಳ ವರ್ಷಗಳಿಂದ ಕೆಲಸ ಮಾಡಿದ್ದಾರೆ. ಅವರು ಪ್ರಗತಿಪರವಾದಂತಹ ಕ್ರಾಂತಿಕಾರಕ ವಿಚಾರಗಳಲ್ಲಿ ಮನಸ್ಸಿಟ್ಟುಕೊಂಡಿದ್ದವರು. ನಾವು ಕೂಡ ಅವರ ಜೊತೆಯಲ್ಲಿ ಘೋಷಣೆಗಳನ್ನು ಮಾಡಿಕೊಂಡು ತಿರುಗಾಡಿದ್ದೇವೆ. ಬರೇ ಓಡಾಡಿಕೊಂಡಿದ್ದಾಕ್ಷಣಕ್ಕೆ ಸಮಸ್ಯೆಗಳು ಪರಿಹಾರವಾಗುವುದಿಲ್ಲ. ಸಮಸ್ಯೆಗಳು ಪರಿಹಾರವಾಗಬೇಕಾದರೆ ಸರಿಯಾದ ರೀತಿಯಲ್ಲಿ ಆರ್ಥಿಕ ವ್ಯವಸ್ಥೆಯನ್ನು ಮಾಡಬೇಕು. ಸ್ವಾಮಿ, ಈವತ್ತಿನ ದಿವಸ ಎತ್ತಿನ ಬೆಲೆ ಹೇಳತೀರದ ಬೆಲೆಯಾಗಿರುತ್ತದೆ. ಒಂದು ಜೊತೆ ಎತ್ತಿನ ಬೆಲೆ ಮೂರು ಸಾವಿರ ರೂಪಾಯಿಗಳಿಂದ ಐದು ಸಾವಿರ ರೂಪಾಯಿಗಳವರೆಗೆ ಏರಿರುತ್ತದೆ.

**ಶ್ರೀ ಭೀಮಣ್ಣ ಖಂಡ್ರೆ:** ಈಗ ಸಿಮೆಂಟ್, ಕಬ್ಬಿಣಕ್ಕೆ 10 ಪಟ್ಟು ಕಾಸ್ಟ್ ಪ್ರೊಡಕ್ಷನ್ ಕೊಟ್ಟಿರುತ್ತಾರೆ. ಅದನ್ನು ನಮ್ಮ ಸ್ಟೇಟ್‌ನವರಿಗೂ ಕೊಟ್ಟಿದ್ದಾರೆ ಧಾನ್ಯಗಳ ಬಗ್ಗೆ ಕೇಳಿದರೆ ಒಂದು ಕ್ವಿಂಟಾಲಿಗೆ 90 ರೂಪಾಯಿನಿಂದ 100 ರೂಪಾಯಿಗಳಿಗೆ

ಏರಿಸಿದ್ದಾರೆ. ಈವತ್ತಿನ ದಿವಸ ಲೆವಿ ಬೆಲೆ 100 ರೂಪಾಯಿ ಇರುವುದರಿಂದ 10 ರೂಪಾಯಿ ಜಾಸ್ತಿ ಮಾಡಿದಂತಾಗುವುದಿಲ್ಲವೇ, ಸರ್ಕಾರಿ ನೌಕರರು ಮೂರು ಲಕ್ಷ ಎಪ್ಪತ್ತೆರಡು ಸಾವಿರ ಜನ  ಏನು ಇದ್ದಾರೆ. ಅವರಿಗೆ ಒಂದು ಪರ್ಸೆಂಟ್ ಏರಿಸಿದರೆ ಅದೇನು ಜಾಸ್ತಿಯಿಲ್ಲ.

**ಶ್ರೀ ಎಸ್.ಆರ್. ಬೊಮ್ಮಾಯಿ :** ತಾವು ಕೊಟ್ಟ ಅಂಕಿ ಸಂಖ್ಯೆಗಳು ನಮ್ಮ ಕಡೆಯೂ ಇರುತ್ತದೆ. ಸರ್ಕಾರ ಎಲ್ಲ ಒದಗಿಸಿದೆ. ಈವತ್ತು ಫ್ಯಾಕ್ಟರಿ ಪ್ರೊಡಕ್ಷನ್ ಮಾಡತಕ್ಕಂಥ ವಸ್ತುಗಳಿಗೆ ಸಪೋರ್ಟ್ ಪ್ರೈಸ್ ಮಾಡುತ್ತೇವೆಂದು ಹೇಳಿದರು. ಇಷ್ಟು ಮಾಡುತ್ತೇವೆಂದು ಹೇಳಲಿಲ್ಲ. ಅಂಕಿ ಸಂಖ್ಯೆಗಳ ಆಧಾರದ ಮೇಲೆ ಕೇಂದ್ರ ಸರ್ಕಾರದವರ ಜೊತೆಯಲ್ಲಿ ಚರ್ಚೆ ಮಾಡಿ ನಿರ್ಧಾರಕ್ಕೆ ಬರುತ್ತೇವೆಂದು ಹೇಳುತ್ತೀರಿ. ನನ್ನ ಮನಸ್ಸಿಗೆ ನಾನು ವಿರೋಧ ಪಕ್ಷದಲ್ಲಿದ್ದೇನೆಂದು ರೈತರನ್ನು ಸಂತೋಷಪಡಿಸಬೇಕೆಂದು ಈ ಸಭೆಯಲ್ಲಿ ನಿಂತುಕೊಂಡು ಮಾತನಾಡುತ್ತಾ ಇಲ್ಲ. ಅಂಕಿ ಸಂಖ್ಯೆಗಳ ಆಧಾರದ ಮೇಲೆ ಹೇಳುತ್ತಿದ್ದೇನೆ. ಸರ್ಕಾರದವರು ಅನೇಕ ವಿಚಾರಗಳಲ್ಲಿ ತಳೆದಿರತಕ್ಕಂಥ ಮತ್ತು ಮಾಡತಕ್ಕಂಥ ಕೆಲಸಗಳ ಬಗ್ಗೆ ಹೇಳುತ್ತಿದ್ದೇನೆ. ರೈತರಿಗೆ ಹೊಂದಾಣಿಕೆಯಾಗುವ ರೀತಿಯಲ್ಲಿ ಸರ್ಕಾರವನ್ನು ನಡೆಸಿಕೊಂಡು ಹೋಗಬೇಕೆನ್ನುವ ಮನೋಭಾವನೆ ಬೆಳೆಯಬೇಕು.

*****

# ರಾಜ್ಯವನ್ನು ಕಾಡಿದ ಬರ ಪರಿಸ್ಥಿತಿ

ದಿನಾಂಕ: 6.2.1981

ರಾಜ್ಯವನ್ನು ಕಾಡಿದ ತೀವ್ರ ಬರದ ಹಿನ್ನೆಲೆಯಲ್ಲಿ ರಾಜ್ಯಾದ್ಯಂತ ಪ್ರವಾಸ ಮಾಡಿದ ಬೊಮ್ಮಾಯಿಯವರು ಜನತೆಯ ಪರಿಸ್ಥಿತಿಯನ್ನು ಖುದ್ದಾಗಿ ಅರಿತು ಮಾಹಿತಿ ಸಂಗ್ರಹಿಸಿ ಸದನದಲ್ಲಿ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡಿದ್ದನ್ನು ಇಲ್ಲಿನ ಮಾತುಗಳಲ್ಲಿ ಗಮನಿಸಬಹುದು.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಾನ್ಯ ಸದಸ್ಯರೇ, ರಾಜ್ಯದಲ್ಲಿರತಕ್ಕಂಥ ಸ್ಕೇರ್ಸಿಟಿ ಕಂಡೀಷನ್ ವಿಚಾರವಾಗಿ ನಾನು ಒಂದು ಮಾತನ್ನು ಹೇಳಬೇಕಾಗುತ್ತದೆ.

**ಅಧ್ಯಕ್ಷರು :** ನಾವು ಕಾನೂನು ಪರಿಮಿತಿಯೊಳಗೆ ಕೆಲಸ ಮಾಡುತ್ತಿದ್ದೇವೆ. ಆ ಬಗ್ಗೆ ಎರಡುವರೆ ಗಂಟೆಯೊಳಗೆ ಚರ್ಚೆ ಮತ್ತು ಚರ್ಚೆಗೆ ಉತ್ತರ ಇವೆರಡು ಮುಗಿಯುವುದಕ್ಕೆ ನೀವು ಅವಕಾಶ ಮಾಡಿಕೊಡಬೇಕು.

**ಶ್ರೀ ಎಸ್.ಆರ್. ಬೊಮ್ಮಾಯಿ :** ಸ್ವಾಮಿ ನಾನು ಈ ಬಗ್ಗೆ ಹೆಚ್ಚಾಗಿ ಮಾತನಾಡುವುದಕ್ಕೆ ಹೋಗುವುದಿಲ್ಲ 10 ನಿಮಿಷ ಮಾತ್ರ ಮಾತನಾಡುತ್ತೇನೆ. ಈ ವಿಚಾರಕ್ಕೆ ಹೋಗುವುದಕ್ಕೆ ಮೊದಲು ನಾನು ಒಂದು ವಿಷಯವನ್ನು ಪ್ರಸ್ತಾಪ ಮಾಡುತ್ತೇನೆ. ನಾವು ಈ ಮೆಡಿಕಲ್ ವಿದ್ಯಾಭ್ಯಾಸದ ಬಗ್ಗೆ ಚರ್ಚೆ ಮಾಡಿದ್ದೇವೆ. ಅದನ್ನು ಈಗ ಹೇಳತಕ್ಕಂಥ ಅವಶ್ಯಕತೆ ಇದೆ. ಆದರೆ ಹುಬ್ಬಳ್ಳಿ ಬೆಳಗಾಂ. ಈ ಕಡೆಗಳಲ್ಲಿ ವಿದ್ಯಾರ್ಥಿಗಳನ್ನು ಅರೆಸ್ಟ್ ಮಾಡಿದ್ದಾರೆ.

**ಮಾನ್ಯ ಅಧ್ಯಕ್ಷರು:** ಈ ವಿಷಯವನ್ನು ಮಧ್ಯಾಹ್ನ ಪ್ರಸ್ತಾಪ ಮಾಡಿ. ಆಗ ಮುಖ್ಯಮಂತ್ರಿಗಳು ಸದನದಲ್ಲಿರುತ್ತಾರೆ.

**ಶ್ರೀ ಎಸ್.ಆರ್.ಬೊಮ್ಮಾಯಿ:** (ಹುಬ್ಬಳ್ಳಿ) ಮಾನ್ಯ ಅಧ್ಯಕ್ಷರೆ, ಈ ವಿಷಯದ ಮಹತ್ವವನ್ನು ಅರಿತುಕೊಂಡು ರಾಜ್ಯದಲ್ಲಿ ಇರತಕ್ಕಂಥ ಬರಗಾಲ ಪರಿಸ್ಥಿತಿಯ ಬಗ್ಗೆ ಈ ಸದನ ಮುಖಾಂತರ ಚರ್ಚೆ ಮಾಡಲು ಅವಕಾಶ ಮಾಡಿಕೊಟ್ಟಿದ್ದೀರಿ. ಅದಕ್ಕಾಗಿ ನಾನು ತಮಗೆ ವಂದನೆಗಳನ್ನು ಸಲ್ಲಿಸುತ್ತೇನೆ. ನಮ್ಮ ರಾಷ್ಟ್ರದ ಅಥವಾ ನಮ್ಮ ರಾಜ್ಯದ ಜನರಲ್ಲಿ ನೂರಕ್ಕೆ ಎಂಬತ್ತರಷ್ಟು ಜನ ಗ್ರಾಮಾಂತರ ಪ್ರದೇಶದಲ್ಲಿ ವಾಸವಾಗಿರುತ್ತಾರೆ. ಅದರಲ್ಲಿ ಸುಮಾರು 100ಕ್ಕೆ 80ರಷ್ಟು ಜನ ಒಕ್ಕಲುತನದ ಮೇಲೆ ಅವಲಂಬಿಸಿದ್ದಾರೆ. ನಮ್ಮ ಕರ್ನಾಟಕ ರಾಜ್ಯದಲ್ಲಿ ನೀರಾವರಿಗೆ ಒಳಪಟ್ಟಂಥ ಭೂಮಿ 100ಕ್ಕೆ 20–25 ಭಾಗ ಆಗಬಹುದು. ಇನ್ನುಳಿದ ಭೂಮಿಯಲ್ಲೂ ಮಳೆಯ

ಮೇಲೆ ಅವಲಂಬನೆಯಾಗಿರುವಂಥದ್ದಾಗಿದೆ. ನಮ್ಮ ರಾಜ್ಯದಲ್ಲಿ ಈ ಬರಗಾಲ ಪರಿಸ್ಥಿತಿ ಮೇಲಿಂದ ಮೇಲೆ ಬರುತ್ತಿದೆ. ನೂರಾರು ದಿವಸಗಳಿಂದಲೂ ನಾವು ನೋಡುತ್ತಿದ್ದೇವೆ. ನಮ್ಮ ರಾಜ್ಯದಲ್ಲಿ ಕೆಲವು ಜಿಲ್ಲೆಗಳು ಬರಗಾಲದ ಜಿಲ್ಲೆಗಳೆಂದೇ ಪ್ರಸಿದ್ಧವಾಗಿವೆ. ಈಗ ನಮ್ಮ ರಾಜ್ಯದಲ್ಲಿ ಸುಮಾರು 100 ತಾಲ್ಲೂಕುಗಳಲ್ಲಿ ಈ ಬರಗಾಲದ ಭೀಕರ ಪರಿಸ್ಥಿತಿ ಇದೆ ಎಂಬುವುದನ್ನು ಸರ್ಕಾರವೇ ಒಪ್ಪಿಕೊಂಡಿದೆ. ಅವರೇ ಹೇಳಿದಂತೆ 14 ಜಿಲ್ಲೆಗಳಲ್ಲಿ ಸುಮಾರು 100 ತಾಲ್ಲೂಕುಗಳಲ್ಲಿ ಬರಗಾಲದ ಪರಿಸ್ಥಿತಿ ಇದೆ ಎಂದು ಹೇಳಿದ್ದಾರೆ. ಈ ವಿಚಾರವಾಗಿ ನಾನು ಮಾತನಾಡುವುದು ಪ್ರಾರಂಭ ಮಾಡಿದಾಗ ನನಗೆ ಬಹಳ ವೇದನೆಯಾಗುತ್ತದೆ. ಯಾವುದೋ ಒಂದು ರಾಜಕೀಯ ಪಕ್ಷದ ಸದಸ್ಯನಾಗಿ ನಾನು ಈವತ್ತು ಮಾತನಾಡುತ್ತಾ ಇಲ್ಲ. ಈ ಬಗ್ಗೆ ನಾನು ಈ ರಾಜ್ಯದ ಒಬ್ಬ ಪ್ರಜೆಯಾಗಿ ಹೇಳುವುದಾದರೆ ಕಳೆದ ಜುಲೈ ತಿಂಗಳಿನಿಂದ ಬೀದರ್ ಜಿಲ್ಲೆಯಲ್ಲಿ ಪ್ರಾರಂಭವಾದ ಈ ಬರಗಾಲ ಪರಿಸ್ಥಿತಿ ಕೋಲಾರ ಜಿಲ್ಲೆ ಗುಲಬರ್ಗಾ ಜಿಲ್ಲೆ, ಬಿಜಾಪುರ ಜಿಲ್ಲೆ, ಮತ್ತು ಚಿತ್ರದುರ್ಗ ಜಿಲ್ಲೆಗಳೆಲ್ಲಾ ಹರಡಿದೆ. ಈ ಮುಂಗಾರು ಮಳೆಯಾಗದೇ ಹೋದಂಥ ಪರಿಸ್ಥಿತಿಯಿಂದಾಗಿ ರಾಜ್ಯದ 100 ತಾಲ್ಲೂಕುಗಳಲ್ಲಿ ಬರಗಾಲದ ಭಯಂಕರ ಪರಿಸ್ಥಿತಿ ನಿರ್ಮಾಣವಾಗಿದೆ. ಸರ್ಕಾರದವರು ಆ ಬಗ್ಗೆ ಯಾವ ರೀತಿಯಿಂದ ತ್ವರಿತವಾದ ಕಾರ್ಯಕ್ರಮವನ್ನು ಕೈಗೊಳ್ಳಬೇಕಾಗಿತ್ತು ಆ ರೀತಿಯಲ್ಲಿ ಕೈಗೊಳ್ಳುವುದರಲ್ಲಿ ಸಂಪೂರ್ಣವಾಗಿ ವಿಫಲರಾಗಿದ್ದಾರೆ. ನಾನು ಮತ್ತು ನಮ್ಮ ಪಕ್ಷದ ನಾಯಕರು ಸುಮಾರು 2 ತಿಂಗಳಲ್ಲಿ ರಾಜ್ಯದ 16 ಜಿಲ್ಲೆಗಳಲ್ಲಿ ಪ್ರವಾಸ ಮಾಡಿದ್ದೇವೆ. ಗೆಳೆಯರಾದ ಶ್ರೀ ದೇವೇಗೌಡರು ಸಹ ನಮ್ಮ ಜೊತೆಯಲ್ಲೇ ಇದ್ದರು. ಅನೇಕ ಪಕ್ಷಗಳು, ನಾಯಕರು ಕೂಡ ಇದ್ದರು. ನಾವು ಪ್ರವಾಸ ಮಾಡತಕ್ಕಂಥ ಕಾಲದಲ್ಲಿ ನಾವು ಭೇಟಿಕೊಟ್ಟಂಥ ಬರಗಾಲ ಪರಿಸ್ಥಿತಿಗೆ ಒಳಗಾಗಿರತಕ್ಕಂಥ ಮೊದಲನೆಯ ಜಿಲ್ಲೆ ಎಂದರೆ ಕೋಲಾರ ಜಿಲ್ಲೆ. ನಾವು ಆಗಸ್ಟ್ ತಿಂಗಳಲ್ಲಿ ಮತ್ತು ಸೆಪ್ಟೆಂಬರ್ ತಿಂಗಳಲ್ಲಿ ಒಟ್ಟು ಮೂರು ಸಲ ಅಲ್ಲಿಗೆ ಹೋಗಿದ್ದೇವೆ. ಮೊದಲ ಸಲ ಕೋಲಾರ ಜಿಲ್ಲೆಗೆ ಹೋದಾಗ ಅಲ್ಲಿಯ ಪರಿಸ್ಥಿತಿಯನ್ನು ನೋಡಿಕೊಂಡು ಬಂದು ಅಂದಿನ ನಮ್ಮ ಪಕ್ಷದ ಅಧ್ಯಕ್ಷರಾಗಿದ್ದ ಮಾನ್ಯ ದೇವೇಗೌಡರು ಸರ್ಕಾರಕ್ಕೆ ಒಂದು ವಿವರವಾದ ಪತ್ರ ಬರೆದರು. ಇದಾದ ಮೇಲೆ ಕೋಲಾರ ಜಿಲ್ಲೆಗೆ ನಾವು ಹೋದೆವು. ನಮ್ಮ ಕಣ್ಣಿಗೆ ಬಿದ್ದಂಥ ಆ ದೃಶ್ಯವನ್ನು ನೋಡಿ ನನಗಂತೂ ಬಹಳ ವೇದನೆಯಾಯಿತು. ನಾವು ಕೋಲಾರಕ್ಕೆ ಹೋಗುವಾಗ ಸುಮಾರು ಸಾವಿರಾರು ಜಾನುವಾರುಗಳನ್ನು ಅದರಲ್ಲೂ ಭೂಮಿಯನ್ನು ಉಳಲಿಕ್ಕೆ ಅತ್ಯಂತ ಅವಶ್ಯಕತೆಯಿರತಕ್ಕಂಥ ಎತ್ತುಗಳು ಮತ್ತು ಹಸುಗಳನ್ನು ರಸ್ತೆಯ ಗುಂಟ ಬೆಂಗಳೂರಿಗೆ ಹೊಡೆದುಕೊಂಡು ಬರುತ್ತಾ ಇದ್ದರು. ನಾವು ಆ ತಾಲ್ಲೂಕನ್ನು ಅಥವಾ ಊರನ್ನು ಮುಟ್ಟುವುದಕ್ಕೆ ಇನ್ನೂ

ಎರಡು ಮೈಲಿ ಇರಬಹುದಾದಂಥ ಸಂದರ್ಭದಲ್ಲಿ ಜನರು ಬೆಂಗಳೂರಿನ ಕಡೆಗೆ ಜಾನುವಾರುಗಳನ್ನು ಹೊಡೆದುಕೊಂಡು ಬರುತ್ತಾ ಇರುವುದನ್ನು ನೋಡಿದೆ. ಅವರನ್ನು ನಿಲ್ಲಿಸಿ ಕೇಳಿದೆ ಸ್ವಾಮಿ ಇಲ್ಲಿ ಮಳೆಯಿಲ್ಲ ಜಾನುವಾರುಗಳನ್ನು ಸಾಕುವುದು ನಮಗೆ ಶಕ್ತಿಯಿಲ್ಲ ಇವುಗಳಿಗೆ ನೀರು ಇಲ್ಲ, ಹುಲ್ಲು ಇಲ್ಲ ಅದಕ್ಕಾಗಿ ಬೆಂಗಳೂರಿಗೆ ಕಟುಕರಿಗೆ ಮಾರಾಟ ಮಾಡುವುದಕ್ಕಾಗಿ ನಾವು ಹೊರಟು ರೈತರು ಜಾತಾ ಬಂದಿದ್ದಾರೆ. ಆದ ಕಾರಣ ಮುಖ್ಯಮಂತ್ರಿಗಳು ಈ ರೈತರ ಸಮಸ್ಯೆಯನ್ನು ಪರಿಷ್ಕೃತವಾಗಿ ನೋಡಬೇಕು. ಅದರ ಬೇಡಿಕೆಗಳೆಲ್ಲಾ ಈಡೇರಿಸಲಾಗಿದೆಯೆಂದು ಉತ್ತರ ಕೊಟ್ಟರೆ ಅದು ಸರಿಯಾಗಲಾರದು. ಅವರ ಸಮಸ್ಯೆಗಳ ಬಗ್ಗೆ ಸಮಗ್ರವಾಗಿ ಆಲೋಚನೆ ಮಾಡಬೇಕಾಗಿದೆ ಅವರ ಕೆಲವು ಸಮಸ್ಯೆಗಳ ಬಗ್ಗೆ ಚರ್ಚೆ ಮಾಡಿದ ನಂತರ ಪರಿಹಾರ ಒದಗಿಸಲಿ ಆದರೇ ಕೆಲವೊಂದು ವಿಚಾರಗಳು ಕೂಡಲೇ ಆಜ್ಞೆ ಹೊರಡಿಸುವುದು ಆಯವ್ಯಯ ಪತ್ರದಲ್ಲಿ ರೈತರಿಗೆ ಕೊಡುವ ಪರಿಹಾರದ ಬಗ್ಗೆ ವಿವರವಾಗಿ ತಿಳಿಸಬೇಕು. ಇಲ್ಲದಿದ್ದರೆ ಅವರ ಒಂದು ಚಳವಳಿಗೆ ಯಾವ ಅರ್ಥ ಇಲ್ಲ ಎಂದು ಭಾವಿಸಬೇಕಾಗುತ್ತದೆ. ಒಂದು ಕಾಲ ಮಿತಿಯಲ್ಲಿ ಇವರ ಸಮಸ್ಯೆಯನ್ನು ಬಿಡಿಸದಿದ್ದರೆ ರೈತರ ಚಳುವಳಿ ಇನ್ನೂ ಉಗ್ರರೂಪ ತಾಳುತ್ತೇವೆಂದು ಹೇಳುತ್ತೇನೆ. ರೈತರ ಚಳವಳಿಯ ಬಗ್ಗೆ ಯಾವ ರಾಜಕೀಯ ಮಾಡುವುದು ಬೇಡ ಎಂದು ಹೇಳುತ್ತೇವೆ. ಅದು ಯಾವ ರಾಜಕೀಯ ಪಕ್ಷವೇ ಆಗಿರಲಿ ಇದರಲ್ಲಿ ರಾಜಕೀಯ ಮಾತನಾಡುವುದು ಬೇಡ ಎಂದು ಹೇಳುತ್ತೇನೆ. ಎಲ್ಲರೂ ಸೇರಿ ಈ ರೈತರ ಸಮಸ್ಯೆಗಳನ್ನು ಬಿಡಿಸಲು ಪ್ರಯತ್ನ ಮಾಡುವುದು ಒಳ್ಳೆಯದು. ಈ ಕಾರಣದಿಂದಲೇ ನಿಲುವಳಿ ಸೂಚನೆ ತಂದಿದ್ದಾರೆ ಇದರ ಬಗ್ಗೆ ನಮ್ಮ ಪಕ್ಷದ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಏನೆಂದರೆ ಸರ್ಕಾರ ಎಲ್ಲಾ ರಾಜಕೀಯ ಪಕ್ಷಗಳ ಮುಖಂಡರನ್ನು ರೈತರ ಪ್ರತಿನಿಧಿಗಳನ್ನು ಹಾಗೂ ರೈತ ಮುಖಂಡರನ್ನು ಕರೆಸಿ ಮಾತನಾಡಬೇಕು ಮತ್ತು ಅವರ ಸಮಸ್ಯೆಗಳಿಗೆ ಸೂಕ್ತ ಪರಿಹಾರವನ್ನು ಒದಗಿಸಬೇಕೆಂದು ಹೇಳುತ್ತೇನೆ. ಇದೇ ಈಗಿನ ಚರ್ಚೆಯ ಮೂಲ ಉದ್ದೇಶವಾಗಿದೆ ಎಂಬ ಮಾತನ್ನು ಹೇಳುತ್ತಾ ರೈತರು ಈಗ ಶಾಂತರೀತಿಯಿಂದ ಚಳವಳಿ ಮಾಡುತ್ತಿದ್ದಾರೆ ಹಾಗೂ ಸಂವಿಧಾನ ನಡೆಸುತ್ತಿರುವ ಅವರ ಚಳವಳಿಗೆ ನಮ್ಮ ಪಕ್ಷದ ಸಂಪೂರ್ಣ ಬೆಂಬಲ ಇದೆ ಎಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

*****

# ನೀರಾವರಿ ಇಲಾಖೆ

ದಿನಾಂಕ: 26.6.1988

**ಶ್ರೀ ಬೊಮ್ಮಾಯಿ ಅವರು ರಾಜ್ಯದ ನೀರಾವರಿ ಯೋಜನೆಗಳ ಬಗ್ಗೆ ನೀಡಿದ ಉತ್ತರದಲ್ಲಿ ಇಂಚಿಂಚೂ ಮಾಹಿತಿ ಇದೆ. ಯೋಜನೆಯ ಪ್ರಗತಿ, ಹಣಕಾಸಿನ ನಿರ್ವಹಣೆಯ ಮಾಹಿತಿ ನಾಲಿಗೆಯ ತುದಿಯಲ್ಲಿತ್ತು. ವಿರೋಧ ಪಕ್ಷದ ಶಾಸಕರ ಮಾತುಗಳನ್ನು ತಾಳ್ಮೆಯಿಂದ ಆಲಿಸಿ ಸಮರ್ಪಕ ಉತ್ತರವನ್ನು ಕೊಡುತ್ತಿದ್ದ ಬೊಮ್ಮಾಯಿಯವರು ಎಂದೂ ಸದನವನ್ನು ತಪ್ಪುದಾರಿಗೆಳೆಯುವುದಾಗಲೀ, ಸ್ಪಷ್ಟ ಉತ್ತರ ಕೊಡದೇ ತಪ್ಪಿಸಿಕೊಳ್ಳುವುದಾಗಲೀ ಮಾಡುತ್ತಿರಲಿಲ್ಲ. ನೀರಾವರಿಯ ಮೇಲಿನ ಉತ್ತರವೇ ಇದಕ್ಕೆ ಸಾಕ್ಷಿ.**

**ಶ್ರೀ ಎಸ್.ಆರ್. ಬೊಮ್ಮಾಯಿ :** ಮೊದಲು ಇರಿಗೇಷನ್ ಬಗ್ಗೆ ಉತ್ತರ ಕೊಡುತ್ತೇನೆ. ಉಳಿದದ್ದು ಆಮೇಲೆ ನೋಡೋಣ. ಮಾನ್ಯ ಸಭಾಧ್ಯಕ್ಷರೇ ಕಳೆದ ಎರಡು ದಿವಸಗಳಿಂದ ನೀರಾವರಿ. ಕಂದಾಯ ಮತ್ತು ಯೋಜನಾ ಇಲಾಖೆಗಳ ಬೇಡಿಕೆಗಳ ಬಗ್ಗೆ ಬಹಳ ರಚನಾತ್ಮಕವಾದ ಚರ್ಚೆಯಾಗಿದೆ. ಪ್ರಾರಂಭದಲ್ಲಿ ನಾನು ಒಂದು ಸಂತೋಷದ ಮಾತನ್ನು ಹೇಳಬಯಸುತ್ತೇನೆ. ಕಳೆದ ಐದು ವರ್ಷಗಳಿಂದ ಅಭಾವ ಪರಿಸ್ಥಿತಿಯನ್ನು ಎದುರಿಸಿದಂಥ ರಾಜ್ಯದಲ್ಲಿ ಈ ವರ್ಷ ಶುಭಾರಂಭವಾಗಿದೆ. ಮಳೆ ವರ್ಷದ ಪ್ರಾರಂಭದಲ್ಲೇ ಬಂದಿದೆ. ನಿನ್ನೆ ಮೊನ್ನೆ ಕೂಡ ಕೆಲವು ಕಡೆ ಮಳೆಯಾಗಿದೆ. ಇದು ನಾವೆಲ್ಲರೂ ಸಮಾಧಾನ ಪಡತಕ್ಕಂಥ ವಿಷಯ. ಇನ್ನೂ ಕೂಡಾ ಈ ವರ್ಷ ಚನ್ನಾಗಿ ಮಳೆ ಬರುತ್ತದೆ. ಜೊತೆಗೆ ಗೆಳೆಯರಾದಂಥ ಮಾನ್ಯ ಜೆ.ಹೆಚ್. ಪಟೇಲರ ಸಮಸ್ಯೆ ಕೂಡ ಸ್ವಲ್ಪ ಬಗೆಹರಿಯುತ್ತದೆ. ವಿದ್ಯುಚ್ಛಕ್ತಿ ಕೂಡಾ ಹೆಚ್ಚು ಉತ್ಪಾದನೆಯಾಗುತ್ತದೆ ಎಂಬ ಮಾತನ್ನು ಹೇಳುತ್ತಾ ನೀರಾವರಿಯ ಬಗ್ಗೆ ಎಲ್ಲಾ ಸದಸ್ಯರೂ ಕೂಡ ತಮ್ಮ ಅತ್ಯಂತ ತೀಕ್ಷ್ಣವಾದ ವಿಚಾರಗಳನ್ನು ವ್ಯಕ್ತಮಾಡಿದ್ದಾರೆ. ನಮ್ಮ ರಾಜ್ಯದ ನದಿಗಳಲ್ಲಿರತಕ್ಕಂಥ ನೀರನ್ನು ಸಂಪೂರ್ಣವಾಗಿ ನಿಗದಿತ ಅವಧಿಯಲ್ಲಿ ಉಪಯೋಗಮಾಡಬೇಕೆಂಬುದರ ಬಗ್ಗೆ ಒತ್ತಾಯ ಮಾಡಿರುತ್ತಾರೆ. ಕಟುವಾದ ಟೀಕೆಯನ್ನು ಮಾಡಿರುತ್ತಾರೆ. ನೀರಾವರಿ ವಿಚಾರದಲ್ಲಿ ನಾವು ಆಲೋಚನೆ ಮಾಡುವಾಗ ಸಮಗ್ರವಾಗಿ ರಾಜ್ಯದ ನದಿಗಳ ನೀರಿನ ಪ್ರಯೋಜನ ಪಡೆಯತಕ್ಕಂಥ ವಿಷಯದಲ್ಲಿ ನಾವು ನಮ್ಮ ಪ್ರಾಮಾಣಿಕ ಪ್ರಯತ್ನವನ್ನು ಅರ್ಥ ಮಾಡಿಕೊಳ್ಳಬೇಕೆಂದು ಹೇಳಿ ನಾನು ಕೇಳಿಕೊಳ್ಳುತ್ತೇನೆ. ಮೊಟ್ಟಮೊದಲು ಈ ವಿಚಾರದಲ್ಲಿ ಜನತಾ ಸರಕಾರದ ನೀತಿಯನ್ನು ತಾವೆಲ್ಲರೂ ನೀರಾವರಿ ಮತ್ತು ವಿದ್ಯುಚ್ಛಕ್ತಿ ಈ ಎರಡು

ವಿಚಾರದಲ್ಲಿ ಆದ್ಯತೆ ಕೊಡುವುದರ ಬಗ್ಗೆ ಎರಡು ಅಭಿಪ್ರಾಯ ಇಲ್ಲ. ಈ ಬಗ್ಗೆ ಬರೀ ಬಾಯಿ ಮಾತಿನಿಂದ ಹೇಳಿದರೆ ಅದು ಸರಿಯಲ್ಲ. ಟೀಕೆ ಮಾಡುವಾಗ ಅಥವಾ ಕೊಡುವಾಗ ಕಳೆದ ಐದು ವರ್ಷಗಳಲ್ಲಿ ನಾವು ನಡೆದು ಬಂದ ದಾರಿ ಏನು ಸಾಧನೆ ಏನು ವಿಚಾರ ಎಂಬ ಬಗ್ಗೆ ವಿಹಂಗಮ ನೋಟ ಅವಶ್ಯ. ನಮ್ಮ ರಾಜ್ಯದಲ್ಲಿ ನೀರಾವರಿಗೆ ಯೋಗ್ಯವಾದಂಥ ನೀರು ದೊರಕತಕ್ಕಂಥ ಜಮೀನು ಎಷ್ಟು ಎಂದರೆ, ಅದು ಸಣ್ಣ ನೀರಾವರಿ ಇರಬಹುದು. ದೊಡ್ಡ ನೀರಾವರಿ ಇರಬಹುದು. ಮಧ್ಯಮ ನೀರಾವರಿ ಇರಬಹುದು ಅಥವಾ ಗ್ರೌಂಡ್ ವಾಟರ್ ಇರಬಹುದು. ಇವುಗಳೆಲ್ಲವುಗಳಿಂದ ಸುಮಾರು 55 ಲಕ್ಷ ಹೆಕ್ಟೇರ್ ಭೂಮಿಗೆ ನಾವು ಒದಗಿಸಬಹುದು.

ಪ್ರೀಪ್ಲಾನ್ ಪಿರೀಡ್ ಯೋಜನೆಗಳು ಪ್ರಾರಂಭವಾದ ಮೇಲೆ ಈವರೆವಿಗೆ ನಾವು ನೀರಾವರಿ ಒದಗಿಸಿರುವ ಜಮೀನು 29 ಲಕ್ಷ 6 ಸಾವಿರ ಹೆಕ್ಟೇರ್‌ಗಳು. ಇನ್ನು ಸುಮಾರು 21 ಲಕ್ಷ ಹೆಕ್ಟೇರ್ ಜಮೀನಿಗೆ ನೀರು ಒದಗಿಸತಕ್ಕಂಥ ಕಾರ್ಯ ಮಾಡಬೇಕಾಗಿದೆ. ಸಮಗ್ರವಾಗಿ ನೀರಾವರಿಯೋಜನೆ ಹಾಕಿಕೊಂಡರೆ ಈ ಪ್ರದೇಶದ ಜನರ ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತದೆ. ಅಲ್ಲಿನ ಜನಜೀವನ ಸಮೃದ್ಧಿಯಾಗುತ್ತದೆ. ಎನ್ನುವುದರಲ್ಲಿ ಭಿನ್ನಾಭಿಪ್ರಾಯ ಇಲ್ಲ ಎಂಬುದನ್ನು ನೀರಾವರಿ ವಿಚಾರದಲ್ಲಿ ನಾವು ಅರ್ಥ ಮಾಡಿಕೊಳ್ಳಬೇಕು. ಮಾನ್ಯ ಸದಸ್ಯರು ಹೇಳಿದ ಹಾಗೆ ಸಮಾಜದಲ್ಲಿರುವವರಿಗೆ ಸಾಮಾಜಿಕ ನ್ಯಾಯ ಕೊಡಬೇಕು. ಸಮಾಜದಲ್ಲಿರತಕ್ಕಂಥ ಸರ್ವರ ಏಳಿಗೆಗೆ ಸರ್ಕಾರ ಯೋಜನೆ ಮಾಡಬೇಕಾಗುತ್ತದೆ. ಇದರಲ್ಲಿ ಪ್ರಿಯಾರಿಟಿ ಫಿಕ್ಸ್ ಮಾಡಬೇಕಾಗುತ್ತದೆ. ಈ ಬಗ್ಗೆ ನಾನು ಆ ಮೇಲೆ ಮಾತನಾಡುತ್ತೇನೆ. ಸರ್ಕಾರಿ ಮೂಲಗಳಿಂದ ನೀರಾವರಿ ಲಾಭ ಪಡೆಯತಕ್ಕಂಥ ಕುಟುಂಬಗಳ ಸಂಖ್ಯೆ 3 ಲಕ್ಷ 19 ಸಾವಿರ. ಖಾಸಗಿ ವಲಯಗಳಿಂದ ನೀರಾವರಿ ಪಡೆದಿರತಕ್ಕಂಥ ರೈತರು ಅದು ಕೆರೆಗಳಿಂದ ಇರಬಹುದು, ಬಾವಿಗಳಿಂದ ಇರಬಹುದು. ಅವರ ಸಂಖ್ಯೆ 3 ಲಕ್ಷ 65 ಸಾವಿರ. ನೀರಾವರಿ ಇಲ್ಲದೇ ಇರತಕ್ಕಂಥ ರೈತರು ಒಣಬೇಸಾಯಗಳಿಂದ ಲಾಭ ಪಡೆದಿರತಕ್ಕಂಥ ರೈತರು 17 ಲಕ್ಷ 65 ಸಾವಿರ. ಕೃಷಿ ಕಾರ್ಮಿಕರು 17 ಲಕ್ಷ ಕುಟುಂಬಗಳು ಕೃಷಿಯೇತರರು ಅಂದರೆ ಚಮ್ಮಾರರು, ಬಡಗಿಗಳು, ಕಮ್ಮಾರರು. ಅವರು ಸುಮಾರು 22 ಲಕ್ಷ 39 ಸಾವಿರ ಕುಟುಂಬಗಳು. ಒಟ್ಟು ಗ್ರಾಮಾಂತರದಲ್ಲಿತಕ್ಕವರು 64 ಲಕ್ಷ ಕುಟುಂಬಗಳು. ಇದರ ಪರ್ಸೆಂಟೇಜ್ ನೋಡಿದರೆ ಸರ್ಕಾರಿ ವತಿಯಿಂದ ನೀರು ಪಡೆದುಕೊಂಡಿರತಕ್ಕಂಥವರು 4.38 ಪರ್ಸೆಂಟ್, ಖಾಸಗಿ ವಲಯದಿಂದ ನೀರು ತೆಗೆದುಕೊಂಡಿರತಕ್ಕಂತಹವರು 5.70 ಪರ್ಸೆಂಟ್, ನೀರಾವರಿ ಇಲ್ಲದವರ ಸಂಖ್ಯೆ 27.57 ಪರ್ಸೆಂಟ್, ಕೃಷಿ

ಕಾರ್ಮಿಕರು 26.78 ಪರ್ಸೆಂಟ್, ಕೃಷಿಯೇತರರು 34.97 ಪರ್ಸೆಂಟ್, ಇದು ಗ್ರಾಮೀಣ ಪ್ರದೇಶಗಳಲ್ಲಿರತಕ್ಕಂಥ ಕುಟುಂಬಗಳ ಒಂದು ಚಿತ್ರ, ಇದು ನಮ್ಮ ಮುಂದೆ ಇದೆ. ಈ ಚಿತ್ರದ ಹಿನ್ನೆಲೆಯನ್ನು ಇಟ್ಟುಕೊಂಡು ಯೋಜನೆ ಹಾಕಿಕೊಳ್ಳತಕ್ಕಂಥಾದ್ದು. ಖರ್ಚು ಮಾಡತಕ್ಕಂಥಾದ್ದು. ಈ ವಿಚಾರದಲ್ಲಿ ನಾವು ಹಣ ಖರ್ಚು ಮಾಡುತ್ತಾ ಇದ್ದೇವೆ. ಈಗ ನಾನು ವಾಸ್ತವಿಕ ವಿವರಗಳಿಗೆ ಹೋಗುವುದಕ್ಕೆ ಮೊದಲು ಕೃಷ್ಣಾ ಕೊಳ್ಳದಲ್ಲಿ ಇರುವ ಎಲ್ಲಾ ನೀರನ್ನು ನಾವು ಉಪಯೋಗಿಸಿಕೊಳ್ಳಬೇಕಾದರೆ ನಾವು ಇನ್ನು 2607 ಕೋಟಿ ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತದೆ. ಎರಡು ಸಾವಿರ ಇಸವಿಯೊಳಗೆ ಬಚಾವತ್ ಪ್ರಕಾರ ನೀರನ್ನು ಉಪಯೋಗ ಮಾಡಬೇಕಾದರೆ ನಾವು ಪ್ರತಿ ವರ್ಷ ಈ ಯೋಜನೆಗಾಗಿ 204 ಕೋಟಿ ರೂಪಾಯಿಗಳನ್ನು ಕೃಷ್ಣ ಬೇಸಿನ್ ಯೋಜನೆಗೆ ಕೊಡಬೇಕಾಗುತ್ತದೆ. ಕೃಷ್ಣ ಬೇಸಿನ್‌ನಲ್ಲಿರತಕ್ಕ ಯೋಜನೆಗಳನ್ನು ಪೂರ್ಣಗೊಳಿಸಬೇಕಾದರೆ ಒಟ್ಟು 984 ಕೋಟಿ ರೂಪಾಯಿಗಳು ಬೇಕಾಗುತ್ತದೆ. 5 ವರ್ಷಗಳಲ್ಲಿ ಈ ಯೋಜನೆ ಮುಗಿಸಬೇಕಾಗಿದೆ. ಇದು ನಮ್ಮ ಮುಂದಿರತಕ್ಕ ಚಿತ್ರ ಇದನ್ನು ಪೂರ್ಣ ಮಾಡುವುದು ಹೇಗೆ? ಆ ಬಗ್ಗೆ ಗಂಭೀರವಾಗಿ ನಾವೆಲ್ಲರೂ ಯೋಚನೆ ಮಾಡಬೇಕಾಗಿದೆ. ಈ ಬಗ್ಗೆ ಸರ್ಕಾರದ ಮೇಲೆ ಹೆಚ್ಚಿನ ಜವಾಬ್ದಾರಿ ಇದೆ. ವಿರೋಧ ಪಕ್ಷದ ಸದಸ್ಯರುಗಳಿಂದ ಇದರ ರಚನಾತ್ಮಕವಾದ ಸಲಹೆಗಳು ಬಂದಿವೆ. ಇದರ ಜೊತೆಗೆ ಇನ್ನೂ ಸಲಹೆಗಳನ್ನು ಪಡೆಯಬೇಕಾದರೆ ಇನ್ನೊಂದು ವಿಚಾರ. ಮಾನ್ಯ ಖರ್ಗೆಯವರು, ನೀರಾವರಿ ವಿಚಾರದಲ್ಲಿ ನಾವು ಮಾಡಿದ ಪ್ರಗತಿಗಿಂತ ನೀವು ಬಹಳ ಹಿಂದೆ ಬಿದ್ದಿದ್ದೀರಿ ಎನ್ನುವ ಮಾತನ್ನು ಹೇಳಿದರು, ಹಾಗೆ ಹೇಳಬೇಕಾದರೆ, ಕೃಷ್ಣ ಬೇಸಿನ್‌ನಲ್ಲಿ 1978 ರಿಂದ 1983ರವರೆಗೆ ಅವರು ಖರ್ಚು ಮಾಡಿದ್ದು 150 ಕೋಟಿ 73 ಲಕ್ಷ ರೂಪಾಯಿಗಳು. 1983 ರಿಂದ 1984 ವರೆಗೆ ಅದೇ ಕೃಷ್ಣ ಬೇಸಿನ್ ನಾವು ಖರ್ಚು ಮಾಡಿದಂಥ ಹಣ 400 ಕೋಟಿ 25 ಲಕ್ಷ ರೂಪಾಯಿಗಳು. ನೀರಾವರಿ ಕ್ರಿಯೇಟ್ ಆಗಿರುವ ಬಗ್ಗೆ ಹೇಳಬೇಕಾದರೆ 1978 ರಿಂದ 1983 ರವರೆಗೆ 59 ಸಾವಿರ ಹೆಕ್ಟೇರ್. 1983 ರಿಂದ 1988ರ ವರೆಗೆ 1 ಲಕ್ಷ 42 ಸಾವಿರದ 784 ಹೆಕ್ಟೇರ್.

**ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:** 1978 ರಿಂದ 1983ರವರೆಗೆ ಎಷ್ಟು ನೀರಾವರಿ ಮಾಡಲಾಗಿದೆ ಎಂಬ ಬಗ್ಗೆ ಹೇಳುವುದು ಬೇಡ 1983 ರಿಂದ 1988ರ ವರೆಗೆ ನೀವು ಹಣವನ್ನು ಖರ್ಚು ಮಾಡಬೇಕೆಂದು ತೀರ್ಮಾನ ಮಾಡಿ ಅದರಲ್ಲಿ ಎಷ್ಟು ಹಣವನ್ನು ಖರ್ಚು ಮಾಡಿದ್ದೀರಿ? ಆಮೇಲೆ ಎಷ್ಟು ಹೆಕ್ಟೇರ್‌ಗೆ ನೀರಾವರಿ ಕಲ್ಪಿಸಿದ್ದೀರಿ ಎಂಬುದನ್ನು ಮಾತ್ರ ತಿಳಿಸಿ.

**ಶ್ರೀ ಎಸ್.ಆರ್. ಬೊಮ್ಮಾಯಿ:** ನೀವು ಕೇಳಿರುವಂಥ ಪ್ರಶ್ನೆಗೆ ನಾನು ಎಲ್ಲವನ್ನೂ ಹೇಳಬೇಕಾಗುತ್ತದೆ. ತಾವೇ ಒಂದು ತರಹ ಚಿತ್ರವನ್ನು ಈ ಸಭೆಗೆ ಕೊಟ್ಟಿದ್ದೀರಿ. ಕೃಷ್ಣ ಬೇಸಿನ್‌ನಲ್ಲಿ 1978 ರಿಂದ 1983ರವರೆಗೆ ನೀವು ಖರ್ಚು ಮಾಡಿದಂಥ ಹಣ 150 ಕೋಟಿ 73 ಲಕ್ಷ. 1983 ರಿಂದ 1988ರವರೆಗೆ ನಾವು ಕಾವೇರಿ ಬೇಸಿನ್‌ನಲ್ಲಿ ಖರ್ಚು ಮಾಡಿದಂಥ ಹಣ 314 ಕೋಟಿ 5 ಲಕ್ಷ ರೂಪಾಯಿಗಳು.

**ಶ್ರೀ ಬಿ. ಬಸವಲಿಂಗಪ್ಪ:** ನೀವೇನು ಜಾಸ್ತಿ ಮಾಡಿದ್ದೀರಾ?

**ಶ್ರೀ ಎಸ್.ಆರ್. ಬೊಮ್ಮಾಯಿ:** ನಿಮ್ಮ ಸರ್ಕಾರ ಇದ್ದಾಗ ನೀರಾವರಿಗೆ ಎಷ್ಟು ಖರ್ಚು ಮಾಡಿದ್ದೀರಿ ಎಂಬ ಬಗ್ಗೆ ಹೇಳುತ್ತಿದ್ದೇನೆ. ನಾನು ಎಲ್ಲಾ ಫಿಗರ್ಸ್‌ಗಳನ್ನು ಇಟ್ಟು ಕೊಂಡಿದ್ದೇನೆ.

**ಶ್ರೀ ಬಿ. ಬಸವಲಿಂಗಪ್ಪ:** ಮಾನ್ಯ ಅಧ್ಯಕ್ಷರೇ, ಮಾನ್ಯ ದೇವೇಗೌಡರು ನೀರಾವರಿ ಸಚಿವರಾಗಿದ್ದಾಗ ನಾವು ಅಷ್ಟು ಖರ್ಚು ಮಾಡುತ್ತೇವೆ ನಾವು ಇಷ್ಟು ಖರ್ಚು ಮಾಡುತ್ತೇವೆಂದು ಎಂದು ಹೇಳಿದ್ದರು. ಇದನ್ನೆಲ್ಲಾ ನೀವು ಮಾಡಿದ್ದೀರಾ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಇದರ ಬಗ್ಗೆ ನಾನು ಎಲ್ಲಾ ಹೇಳ್ತೀನಿ. ತಾವು ತಾಳ್ಮೆಯಿಂದ ಕೇಳಬೇಕಷ್ಟೆ. ಮಾನ್ಯ ಖರ್ಗೆಯವರು ಮಾತನಾಡುತ್ತಾ ಅವರ ಸರ್ಕಾರ ಇದ್ದಾಗ 1983ರಲ್ಲಿ 82 ಸಾವಿರ 727 ಹೆಕ್ಟೇರ್‌ಗೆ ಕೃಷ್ಣ ಬೇಸಿನ್‌ನಿಂದ ನೀರಾವರಿ ಆಗಿತ್ತು ಎಂದು ಹೇಳಿದ್ದರು.

**ಶ್ರೀ ಕೆ.ಹೆಚ್. ಶ್ರೀನಿವಾಸ್ :** ನೀವು ದುಡ್ಡು ಖರ್ಚು ಮಾಡಿರುವುದು ಎಷ್ಟು ಎಂದು ಹೇಳಲು ಆಗುವುದಿಲ್ಲ. ಆ ಪೀರಿಯಡ್‌ನಲ್ಲಿ ಎಸ್.ಆರ್. ರಿವಿಜನ್ ಆಗಿದೆಯಲ್ಲಾ ಅದು ಎಷ್ಟು ವೆಚ್ಚವಾಗಿದೆ ಎಂದು ನೋಡಿದರೆ ಗೊತ್ತಾಗುತ್ತದೆ.

**ಶ್ರೀ ಮಲ್ಲಿಕಾರ್ಜುನ ಖರ್ಗೆ :** ತಾವು ಕೊಟ್ಟಿರುವ ಪುಸ್ತಕದಲ್ಲಿ ಪೇಜ್ 34 ರಲ್ಲಿ ನೋಡಿದರೆ ತಿಳಿಯುತ್ತದೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಅದನ್ನೂ ಕೂಡ ರೆಫರ್ ಮಾಡುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ :** ತಾವುಗಳು ಪ್ರಿಂಟ್ ಆಗಿರುವುದನ್ನು ಮಾತ್ರ ಓದುತ್ತೀರಾ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಈಗ ನಾನು ಅಂಕಿಅಂಶಗಳನ್ನು ಕೊಡುತ್ತಾ ಇದ್ದೇನೆ. ತಾವು ಕಾಣುತ್ತಿದ್ದೀರಿ ಅದನ್ನೂ ಕೂಡ ಹೇಳೋಣ. ಕಾವೇರಿ ಮತ್ತು

ಕೃಷ್ಣ ಬೇಸಿನ್‌ನಲ್ಲಿ ಒಟ್ಟು ಖರ್ಚು ಮಾಡಿರುವುದು ಎರಡರಷ್ಟು ಆಗಿದೆ. ಐದು ವರ್ಷಗಳ ಅವಧಿಯಲ್ಲಿ ಅಂದರೆ ಜನತಾ ಆಡಳಿತ ಅವಧಿಯಲ್ಲಿ ಶ್ರೀಮಾನ್ ರಾಮಕೃಷ್ಣ ಹೆಗಡೆಯವರ ಆಡಳಿತದ ಅವಧಿಯಲ್ಲಿ ಎರಡು ರೀತಿಯ ಉದ್ದೇಶಗಳಿಗಾಗಿ ಖರ್ಚು ಮಾಡಲಾಗಿದೆ.

ಆದರೆ ಕೃಷ್ಣಾಗಾಗಲೀ, ಕಾವೇರಿ ಬೇಸಿನ್‌ಗಾಗಲೀ ಕೊಟ್ಟಿರುವುದು ಸಾಕು ಎಂದು ನಾನು ಹೇಳುತ್ತಿಲ್ಲ. ಆದರೆ ಸಾಕಷ್ಟು ಖರ್ಚು ಮಾಡಿದ್ದೇವೆ. ಮತ್ತು ಮಾಡಿರುವುದೂ ಸರಿ ಎಂದು ನಾನು ಹೇಳುತ್ತಿದ್ದೇನೆ. ಚಿಕ್ಕ ನೀರಾವರಿ 1978–83 ರ ಅವಧಿಯಲ್ಲಿ ಆದ ಪ್ರಗತಿ 1,66,000 ಹೆಕ್ಟೇರ್‌ಗಳು 1983–88ರ ಅವಧಿಯಲ್ಲಿ 2,59,000 ಹೆಕ್ಟೇರ್‌ಗಳು.

ಈ ಎಲ್ಲಾ ನದಿಗಳ ಜಲಾಶಯಗಳಲ್ಲಿರತಕ್ಕಂಥ ನೀರಿನ ಉಪಯೋಗದ ಬಗ್ಗೆ ಮತ್ತು ಈ ವರ್ಷದ ಅಂದರೆ 1978ರಿಂದ 83, 83 ರಿಂದ 88 ರ ನಡುವೆ ಇದಕ್ಕೆ ಖರ್ಚಾದಂತಹ ಹಣದ ವಿವರವನ್ನು ಕೊಟ್ಟಿದ್ದೇನೆ. ಈ ವಿವರವನ್ನು ನೋಡಿದರೆ ಈ ಸರ್ಕಾರ ನೀರಾವರಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದೆಯೇ ಅಥವಾ ಇಲ್ಲವೇ ಎಂಬುದು ಅರ್ಥವಾಗುತ್ತದೆ. ಹಿಂದಿಗಿಂತ ಪ್ರಗತಿಯಾಗಿದೆ ಎಂಬುದರ ಬಗ್ಗೆ ಸ್ಪಷ್ಟವಾದ ಚಿತ್ರ ಇಲ್ಲಿ ಇದೆ. ಪ್ರಗತಿ ಸಾಕಷ್ಟು ಆಗಿದೆಯೇ, ಸಮಾಧಾನಕರವಾಗಿ ಆಗಿದೆಯೇ ಎಂದು ಪ್ರಶ್ನೆ ಹಾಕಿದರೆ ಇಲ್ಲವೆಂದು ಹೇಳಬೇಕಾಗುತ್ತದೆ. ಆದರೆ ಏನೂ ಪ್ರಗತಿಯಾಗಿಲ್ಲ ಇದನ್ನು ನಿರ್ಲಕ್ಷಿಸಲಾಗಿದೆ ಮಾನ್ಯ ಹೆಗಡೆಯವರು ನೀರಾವರಿ ಪ್ರಾಶಸ್ತ್ಯ ಕೊಟ್ಟಿಲ್ಲವೆಂದು ಹೇಳುವುದು ಇದೆ, ಅದು ಸರಿಯಾದುದಲ್ಲ. ಇನ್ನೂ ಹೆಚ್ಚು ಹಣವನ್ನು ಕೊಡಬೇಕಾಗುತ್ತದೆ ಪ್ರಾಶಸ್ತ್ಯವನ್ನು ಕೊಡಬೇಕಾಗುತ್ತದೆ. ಆ ಬಗ್ಗೆ ಆಲೋಚನೆ ಮಾಡೋಣ ಈ ಬಗ್ಗೆ ಪೂರ್ಣವಾದ ಚಿತ್ರವನ್ನು ಕೊಡಬೇಕಾಗುತ್ತದೆ ಇನ್ನೂ ಕೆಲವು ವಿಚಾರಗಳನ್ನು ಹೇಳಬೇಕಾಗುತ್ತದೆ. ನೀರಾವರಿ ಯೋಜನೆಯಿಂದ ಪ್ರಯೋಜನ ಪಡೆದಂತವರಿಂದ ವಾಟರ್‌ರೇಟ್ ಮೂಲಕವಾಗಿ ಎಷ್ಟು ಆದಾಯ ಪ್ರತಿ ವರ್ಷ ಬರುತ್ತದೆ ಎಂಬುದನ್ನು ನಾವು ಯೋಚನೆ ಮಾಡಬೇಕು.

**ಶ್ರೀ ಕೆ.ಹೆಚ್. ಪಾಟೀಲ್ :** ಬೆಟರ್‌ಮೆಂಟ್ ಲೆವಿ ಹಾಕಬೇಕೆಂದು ಮಾನ್ಯ ದೇವರಾಜ್ ಅರಸ್‌ರವರು ಇದ್ದಾಗ ಮಾಡಿದರು. ನೀವು ಸೂಟು ಬಿಡಬೇಕೆಂದು ಹೇಳುತ್ತಾ ಅಧಿಕಾರಕ್ಕೆ ಬಂದಿರಿ ಸೂಟು ಬಿಟ್ಟಿದ್ದೀರಿ, ಅದಕ್ಕೆ ಆದಾಯ ಕಡಿಮೆಯಾಯಿತು.

**ಶ್ರೀ ಎಸ್.ಆರ್. ಬೊಮ್ಮಾಯಿ :** ನೀರಾವರಿ ಯೋಜನೆಗಳ ಮೈಂಟನೆನ್ಸ್‌ಗೆ ಎಷ್ಟು ಖರ್ಚಾಗಿದೆ ಎಂಬುದನ್ನು ಹೇಳುತ್ತೇನೆ. ಇತ್ತೀಚಿನದನ್ನು ಮಾತ್ರ ನಾನು

ಹೇಳುತ್ತೇನೆ. 1983–84 ರಲ್ಲಿ 24 ಕೋಟಿ 52 ಲಕ್ಷ 1981–85 ರಲ್ಲಿ 28 ಕೋಟಿ 27 ಲಕ್ಷ 1985–86 ರಲ್ಲಿ 32 ಕೋಟಿ ಲಕ್ಷ 1986–87 ರಲ್ಲಿ 35 ಕೋಟಿ 89 ಲಕ್ಷ, 1987–88 ರಲ್ಲಿ 33 ಕೋಟಿ 29 ಲಕ್ಷ ಮೈಂಟೇನನ್ಸ್ ಚಾರ್ಜ್ ಆಗಿದೆ. ರೈತರು ಚಳವಳಿಯನ್ನು ಮಾಡಿದ್ದಾರೆ. ರೈತರ ವಿಚಾರ ಅವರ ಬೇಡಿಕೆಗಳು ಏನು ಇವೆ ಎಂಬುದು ನನಗೆ ಗೊತ್ತಿದೆ. ಬೆಟರ್‌ಮೆಂಟ್ ಲೆವಿ ಬೇಡವೆಂದು ಹೇಳಿದ್ದು ನಾವು ಅಧಿಕಾರಕ್ಕೆ ಬಂದ ಮೇಲೆ ಅದನ್ನು ಅಬಾಲಿಷ್ ಮಾಡಿದೆವು. ನೀರಿನ ದರ ಹೆಚ್ಚು ಮಾಡುವುದರ ಬಗ್ಗೆ ನಮ್ಮ ವಿರೋಧವಿಲ್ಲ. ಮಾನ್ಯ ವಿದ್ಯುಚ್ಛಕ್ತಿ ಮಂತ್ರಿಗಳು ಇಲ್ಲಿಯೇ ಇದ್ದಾರೆ. ಪವರ್ ಪ್ರಾಜೆಕ್ಟ್‌ಗೆ 200–300 ಕೋಟಿ ಖರ್ಚು ಮಾಡುತ್ತಾರೆ. ಯಾರಿಗೆ ವಿದುಚ್ಛಕ್ತಿಯನ್ನು ಕೊಡುತ್ತಾರೆಯೋ ಅದರ ಮೇಲೆ ಚಾರ್ಜು ಮಾಡುತ್ತಾರೆ. ಇಂಡಸ್ಟ್ರೀಯಲಿಸ್ಟ್ ಇರಬಹುದು. ಇಲ್ಲವೇ ಅವರು ಫಾರ್ಮರ್ ಇರಬಹುದು. ಬೆಟರ್‌ಮೆಂಟ್ ಲೆವಿಯನ್ನು ಹಾಕುವುದಲ್ಲ ಆದರೆ ವಿದ್ಯುಚ್ಛಕ್ತಿಗೆ ಚಾರ್ಜು ಹಾಕುತ್ತಾರೆ. ಆ ಒಂದು ನೀತಿಯನ್ನು ಅನುಸರಿಸಬೇಕಾಗುತ್ತದೆ ಎಂಬ ದೃಷ್ಟಿಯಿಂದ ನಾನು ಈ ಮಾತನ್ನು ಹೇಳಿದೆ. ಅದೇ ರೀತಿ ವಾಟರ್ ರೇಟ್ ಬಗ್ಗೆ ಕೂಡ ಒಂದು ಮಾತನ್ನು ಹೇಳಬೇಕಾಗುತ್ತದೆ. ನಾನು ಅಲ್ಲಿ ನಿಂತು ಒಂದು ಬೇಡಿಕೆಯನ್ನು ಇಟ್ಟಿದ್ದು ಅದರ ಅರಿವು ಕೂಡ ನನಗೆ ಇದೆ. ರೈತರಿಗೆ ಒಂದು ವಾಗ್ದಾನವನ್ನು ನಾವು ಮಾಡಿದ್ದೆವು. ನೀರಿನ ದರ 1976ರಲ್ಲಿ ಇದ್ದಷ್ಟೇ ಇದೆ. ಈ ಕಬ್ಬಿನ ವಿಚಾರ ಮಾತ್ರ ಹೇಳುತ್ತಿದ್ದೇನೆ, 1978ರಲ್ಲಿ 700 ರೂಪಾಯಿ ಮಾಡಿದ್ದೆವು. 1988ರಲ್ಲಿ 150 ರೂಪಾಯಿ ಆಗಿದೆ ಆಗ ಇದನ್ನು ರಿವೈಸ್ ಮಾಡಿದೆವು. 1985 ರಲ್ಲಿ ಇದರ ಬಗ್ಗೆ ಆಜ್ಞೆಯನ್ನು ಹೊರಡಿಸಿ 150 ರೂಪಾಯಿ 1978ರಲ್ಲಿ 30 ರೂಪಾಯಿ ಈ ರೀತಿ ಮಾಡಿದ್ದೇವೆ. ಇದರ ಜೊತೆಗೆ ಈ ನೀರಿನ ದರದ ಬಗ್ಗೆ ನರಗುಂದ ನವಲಗುಂದ ಬೇರೆ ಬೇರೆ ಕಡೆಯಲ್ಲಿ ಆದಂಥ ಚಳವಳಿ ಏನು ಇದೆ. ಅದನ್ನು ಗಮನಿಸಿ ಕ್ರಮ ಕೈಗೊಂಡಿದ್ದೇವೆ. ಈ ಕರವನ್ನು ಒಂದು ಶಾಸ್ತ್ರೀಯವಾಗಿ ಹೇರಿಲ್ಲ. ನೀರನ್ನು ಕೊಡದೆ ವಸೂಲು ಮಾಡತಕ್ಕಂಥದ್ದು ಏನು ಇದೆಯಲ್ಲಾ ಇದರ ಬಗ್ಗೆ ಒಂದು ವಾಗ್ದಾನವನ್ನು ಕೂಡ ಮಾಡಿದ್ದೆವು. 1976ರಲ್ಲಿ ಏನು ನೀರಿನ ದರ ಇದೆ. ಅದನ್ನು ಮಾತ್ರ ವಸೂಲು ಮಾಡುತ್ತೇವೆ. ಮತ್ತೆ ಹೆಚ್ಚು ಮಾಡುತ್ತೇವೆ. ಹಿಂದಿನ ದರವನ್ನೆಲ್ಲಾ 76ರ ರೇಟ್‌ನಲ್ಲಿ ಮಾಡುತ್ತೇವೆಂದು ಹೇಳಿ ಆ ಪ್ರಕಾರ 1985ರಲ್ಲಿ ಆಜ್ಞೆಯನ್ನು ಹೊರಡಿಸಿದ್ದೇವೆ. ಇದರಿಂದ ಸುಮಾರು 40–50 ಕೋಟಿ ರೂಪಾಯಿ ವಸೂಲು ಮಾಡುವುದನ್ನು ಬಿಟ್ಟಿದ್ದೇವೆ. ಇದರಿಂದ ಎಷ್ಟೋ ರೈತರಿಗೆ ಅನುಕೂಲವಾಗಿದೆ.

**ಶ್ರೀ ಆರ್. ವೆಂಕಟರಾಮಯ್ಯ :** ಇದರ ಬಗ್ಗೆ ಹೋದ ಸಾರಿಯೇ ನೀರಿನ ಕರವನ್ನು ವಸೂಲು ಮಾಡಿಲ್ಲ ಎಂದು ಹೇಳಿದ್ದೀರಿ. ಬೇಕಾದರೆ ಇದರ ಬಗ್ಗೆ

ರೆವಿನ್ಯೂ ಕಮಿಷನರ್ ಹತ್ತಿರ ವೆರಿಫೈ ಮಾಡಿಸಿ ಅಲ್ಲಿ ನೀರಿನ ದರವನ್ನು ವಸೂಲು ಮಾಡುತ್ತಿದ್ದಾರೆಯೇನು ನೋಡಿ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಮಾನ್ಯ ಅಧ್ಯಕ್ಷರೇ, ಈ ವಿಚಾರದಲ್ಲಿ ನಾವು ಅಧ್ಯಯನ ಮಾಡುವಾಗ ಚರ್ಚೆ ಮಾಡುವಾಗ ಸಮಗ್ರ ಚಿತ್ರವನ್ನು ನೋಡಬೇಕು ಎನ್ನುವ ವಿಚಾರವನ್ನು ನಾನು ಹೇಳಿದ್ದೇನೆ. ತಾವು ಮಾತನಾಡುವಾಗ ಹೇಳಿದ ವಿಚಾರಗಳು ಎಷ್ಟು, ನೀರಾವರಿಗೆ ಹಣ ಕೊಡತಕ್ಕಂಥದ್ದರಲ್ಲಿ ಕಡಿಮೆಯಾಗಿದೆ ಎನ್ನುವ ಮಾತನ್ನು ಹೇಳಿದ್ದೀರಿ, ಇನ್ನೊಂದು ವಿಚಾರವನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಅಂದರೆ ಈ ಖರ್ಚಿನ ವಿಚಾರ ನೋಡುವಾಗ ಟೋಟಲ್ ಬಜೆಟ್ ಏನು ಇದೆ ಅದರಲ್ಲಿ ಎಷ್ಟು ಹಣ ಯಾವ ಇಲಾಖೆಗೆ ಖರ್ಚು ಮಾಡುತ್ತೇವೆ ಅದು ಬಹಳ ಮುಖ್ಯ. ಕೃಷಿ ಇರಬಹುದು ವಿದ್ಯುಚ್ಛಕ್ತಿ ಇರಬಹುದು. ನೀರಾವರಿ ಇರಬಹುದು, ಕೈಗಾರಿಕೆ ಇರಬಹುದು ಜನ ಕಲ್ಯಾಣ ಕಾರ್ಯಕ್ರಮಗಳು ಇರಬಹುದು, ಇದನ್ನು ಕೂಡಾ ನೋಡಿದಾಗ ಕೃಷಿ ವಲಯ, ಗ್ರಾಮೀಣಾಭಿವೃದ್ಧಿ ಮತ್ತು ಸಹಕಾರಿ ವಲಯಗಳಲ್ಲಿ 38 ರಿಂದ 83 ನೇ ಇಸವಿ ಐದು ವರ್ಷದ್ದು ತೆಗೆದುಕೊಳ್ಳುತ್ತಿದ್ದೇನೆ. ಖರ್ಚು ಮಾಡಿದಂಥ ಹಣ 14.93 ಪರ್‌ಸೆಂಟ್. 83 ರಿಂದ 88ರವರೆಗೆ 14.28 ಪರ್ಸೆಂಟ್ಸ್. ಸಾಮಾಜಿಕ ಸೇವೆಗಳು 20.12 ಪರ್ಸೆಂಟ್ 38 ರಿಂದ 83ರವರೆಗೆ, ಆಮೇಲೆ 83.88ರವರೆಗೆ 24.51 ಪರ್ಸೆಂಟ್ ನೀರಾವರಿಗೆ 1979–83 ರವರೆಗೆ 24.12 ಪರ್‌ಸೆಂಟ್, 1983–88 ರವರೆಗೆ 20.52 ಪರ್ಸೆಂಟ್ ವಿದ್ಯುಚ್ಛಕ್ತಿಗೆ 1978–83 ರವರೆಗೆ 24.12 ಪರ್ಸೆಂಟ್ 1983–88 ರವರೆಗೆ 20.52 ಪರ್ಸೆಂಟ್ ಇಲ್ಲಿ ಕಡಿಮೆಯಾಗಿದೆ ಎಂದು ನಮ್ಮ ಕಾಲದಲ್ಲಿ ಅದನ್ನು ತೋರಿಸುತ್ತಿದ್ದೇವೆ. ಇತರೆ ವಲಯಗಳು 1978–83 ರವರೆಗೆ 7.55 ಪರ್ಸೆಂಟ್ 1983–88 ರವರೆಗೆ 7.62 ಪರ್ಸೆಂಟ್ ಅಂದರೆ ಬಜೆಟ್‌ನಲ್ಲಿ ಏನು ಹಣ ಇದೆ ಅದನ್ನು ಖರ್ಚು ಮಾಡತಕ್ಕಂಥ ಆದ್ಯತೆ ಆದಂತ ಇಲಾಖೆಗೆ ಕೊಟ್ಟಂತ ವಿಚಾರ ಸ್ಪಷ್ಟವಾಗಿದೆ. ಆದರೆ ಸಾಮಾಜಿಕ ಸೇವೆಗಳು ಇದ್ದಾವೆ, ಅಲ್ಲಿ ನಾಲ್ಕು ಪರ್ಸೆಂಟ್ ಹೆಚ್ಚು ಮಾಡಿದ್ದೇವೆ.

ಮಾನ್ಯ ವಿರೋಧ ಪಕ್ಷದವರು ಟೀಕೆ ಮಾಡಿದ್ದಾರೆ ಇಲ್ಲವೆಂದು ಅಲ್ಲ ಅದು ಅವರ ಅಭಿಪ್ರಾಯ. ಪಾಪ್ಯುಲಿಸ್ಟ್ ಪ್ರೋಗ್ರಾಮ್ ಎಂದು ತಾವು ಹೇಳಿದಿರ. ಆಂಟಿ ಪಾವರ್ಟಿ ಪ್ರೋಗ್ರಾಮೆಂದು ನಾವು ಹೇಳುವುದು. ಆಹಾರ ಧಾನ್ಯಗಳನ್ನು ಕೊಡತಕ್ಕ ಹಸಿರು ಕಾರ್ಡ್ ಯೋಜನೆ ಬಟ್ಟೆ ಕೊಡತಕ್ಕ ಯೋಜನೆ. ಪಠ್ಯಪುಸ್ತಕ ಯೋಜನೆ ಇರಬಹುದು. ತಾಳಿಭಾಗ್ಯ ಯೋಜನೆ ಇರಬಹುದು. ಅದೇ ಒಂದು ಅಭಿಪ್ರಾಯ. ಇದರ ಜೊತೆಗೆ ರಾಜ್ಯದ ವಿವಿಧ ರಂಗಗಳಲ್ಲಿ ಆದಂತಹ ಪ್ರಗತಿಯನ್ನು ಗಮನದಲ್ಲಿಟ್ಟುಕೊಂಡು ಟೀಕೆ ಮಾಡಬೇಕಾಗಿದೆ. ಎಜುಕೇಷನ್ ಬಗ್ಗೆ ಹೇಳಬೇಕಾದರೆ

78 ರಿಂದ 83 ರವರೆಗೆ ಆದಂತಹ ಪ್ರೈಮರಿ ಸ್ಕೂಲ್‌ಗಳು 36,356, ಕ್ಯುಮುಲೇಟೀವ್ಸ್ 83ರಲ್ಲಿ ಆಗಿದ್ದು 49,855 ಸೆಕೆಂಡರಿ ಸ್ಕೂಲ್‌ಗಳು 30,178, ಡ್ರೈನೇಜ್ ವಾಟರ್‌ಬೋರ್‌ವೆಲ್ಸ್‌ಗಳು 36,320, 78 ರಿಂದ 83ರವರೆಗೆ 57,988, ನಂಬರ್ ಆಫ್ ವಿಲೇಜಸ್‌ಗಳಿಗೆ ವಾಟರ್ ಕೊಟ್ಟಿರುವುದು 949 ನಂಬರ್ ಆಫ್ ವಿಲೇಜಸ್ ಎಲೆಕ್ಟ್ರಿಫೈಡ್ ಆಗಿರುವುದು 3,222 ಮೊದಲ ಪಿರಿಯಡ್‌ನಲ್ಲಿ 1983–88ರಲ್ಲಿ 8,050 ಟೋಟಲ್ ವಿಲೇಜಸ್ ಎಲೆಕ್ಟ್ರಿಫೈಡ್ 18 ಪರ್ಸೆಂಟ್ ಮೊದಲು, ಈಗ 26,43 ಪರ್ಸೆಂಟ್. ಇರಿಗೇಷನ್ ಪಂಪ್ಸ್ 3 ಲಕ್ಷ 58 ಸಾವಿರ ಮುಂಚೆ ಆದದ್ದು 5 ಲಕ್ಷ 77 ಸಾವಿರ. ಹಣದುಬ್ಬರ ಇದೆ ಎಂದು ಮಾನ್ಯ ಕೆ.ಹೆಚ್.ಪಾಟೀಲ್‌ರವರು ಹೇಳಿದರು. ರೂಪಾಯಿ ಬೆಲೆ ಇಳಿಯುತ್ತಿದೆ. ತಾವು ಫಿಸಿಕಲ್ ಪ್ರೋಗ್ರೆಸ್ ಆಗಿರುವುದನ್ನು ನೋಡಬೇಕು. ಎಷ್ಟು ರಸ್ತೆಗಳು ಆಗಿವೆ, ಎಷ್ಟು ಶಾಲೆಗಳು ಆಗಿವೆ, ಎಷ್ಟು ಕುಡಿಯುವ ನೀರಿನ ಯೋಜನೆಗಳು ಆಗಿವೆ, ಎಷ್ಟು ಹಳ್ಳಿಗಳಿಗೆ ವಿದ್ಯುಚ್ಛಕ್ತಿ ಕೊಟ್ಟಿದ್ದೇವೆ ಎಂಬುದನ್ನು ನೋಡಿ ಹಣದುಬ್ಬರದ ಜೊತೆಗೆ ಆಗಿರತಕ್ಕ ಪ್ರಗತಿಯ ಬಗ್ಗೆ. ಆದ್ಯತೆಯ ವಿಚಾರವನ್ನು ಸಹ ಗಮನದಲ್ಲಿಡಬೇಕಾಗುತ್ತದೆ, ಒಂದು ಮಾತನ್ನು ಇಲ್ಲಿ ಹೇಳಬೇಕಾಗಿದೆ. ನೀರಾವರಿ ಆದ್ಯತೆ ಬೇಕೋ, ವಿದ್ಯುಚ್ಛಕ್ತಿಗೆ ಆದ್ಯತೆ ಬೇಕೋ ಎಂಬ ಬಗ್ಗೆ ಪ್ರಶ್ನೆ ಬರುತ್ತದೆ. ನಾನು ಈಗಾಗಲೇ ಹೇಳಿದ್ದೇನೆ. ಕೃಷಿ ಕುಟುಂಬಗಳು, ಕೃಷಿ ಕಾರ್ಮಿಕರ ಕುಟುಂಬಗಳು ಎಷ್ಟು ಇವೆ. ಕೃಷಿಯೇತರ ಕುಟುಂಬಗಳು ಎಷ್ಟು ಇವೆ ಎಂಬುದನ್ನು ನೋಡಬೇಕು. ಸಮಾಜದಲ್ಲಿ ನೂರಕ್ಕೆ 70 ಜನರಿಗೆ ಭೂಮಿ ಇಲ್ಲ. ಅಂತಹವರಿಗೆ ಸಾಮಾಜಿಕ ನ್ಯಾಯವನ್ನು ಕೊಡಬೇಕಾಗಿದೆ. ಅವರುಗಳಿಗೆ ಆಸರೆಯನ್ನು ಕೊಡತಕ್ಕ ವಿಚಾರದಲ್ಲಿ ಆಗಲಿ, ವಿದ್ಯುಚ್ಛಕ್ತಿ ಕೊಡತಕ್ಕ ವಿಚಾರದಲ್ಲಿಯಾಗಲೀ ಸಾಮಾಜಿಕವಾಗಿ ನ್ಯಾಯ ಮಾಡತಕ್ಕದ್ದು ಅಗತ್ಯವಾಗಿದೆ. ಇದರಲ್ಲಿ ಕೆಲವೊಂದು ಯೋಜನೆಗಳನ್ನು ಮಾಡದೇ ಹೋದರೆ ಅವರು ಎಲ್ಲಿಯವರೆಗೆ ಯೋಜನೆಗಳಿಗಾಗಿ ಕಾಯಬೇಕಾಗುತ್ತದೆ. ಇದು ತಾತ್ವಿಕವಾದ ವಿಚಾರ. ಇದರಲ್ಲಿ ಎರಡು ಅಭಿಪ್ರಾಯಗಳಿವೆ, ಮೊದಲು ನೀರಾವರಿ ಯೋಜನೆಗಳಿಗೆ ಹಣವನ್ನು ಒದಗಿಸಬೇಕೋ, ಅಥವಾ ವಿದ್ಯುಚ್ಛಕ್ತಿ ಯೋಜನೆಗಳನ್ನು ಮಾಡಿ ಬಿಡಬೇಕೋ ಎಂಬ ಸಹಜವಾದ ಪ್ರಶ್ನೆ ಬರುತ್ತದೆ. ಆಮೇಲೆ ಶಾಲೆಗಳನ್ನು ಪ್ರಾರಂಭಿಸುವುದು, ಕುಡಿಯುವ ನೀರಿನ ಯೋಜನೆಯನ್ನು ಕೊಡುವುದು ಮುಂತಾದ ವಿಚಾರಗಳು ಬರುತ್ತವೆ. ಇಲ್ಲಿ ಇವೆರಡರ ನಡುವೆ ಸಮತೋಲನ ತರತಕ್ಕಂಥ ಸಾಮಾಜಿಕ ನ್ಯಾಯವನ್ನು ಕೊಡತಕ್ಕಂಥ ಕೆಲಸವನ್ನು ಮಾಡಬೇಕು. ನಾನು ನೀರಾವರಿಗೆ ಆದ್ಯತೆ ಕೊಡಬೇಕು, ವಿದ್ಯುಚ್ಛಕ್ತಿಗೆ ಆದ್ಯತೆ ಕೊಡಬೇಕು, ಹಾಗೆಯೇ ಸಮಾಜದಲ್ಲಿರತಕ್ಕ ದುರ್ಬಲರಿಗೆ ಸಾಮಾಜಿಕ ನ್ಯಾಯ ಮಾಡತಕ್ಕದ್ದು ಬಹಳ ಅವಶ್ಯಕ ಇದೆ, ಹಸಿರು ಕಾರ್ಡಿನ ವಿಚಾರವನ್ನು ಹೇಳುತ್ತಿದ್ದೇನೆ, ಒಂದು ಕುಟುಂಬಕ್ಕೆ 10 ಕಿಲೋ ಅಕ್ಕಿ

ಸಾಲದು. ಎರಡು ರೂಪಾಯಿಗೆ ಒಂದು ಕಿಲೋ ಜೋಳ ಕೊಡುತ್ತಿದ್ದೇವೆ. ಮಾರುಕಟ್ಟೆಯಲ್ಲಿ ಅಕ್ಕಿ ಬೆಲೆ 5 ರೂಪಾಯಿ ಇದೆ. ಜೋಳ ನಾಲ್ಕು ರೂಪಾಯಿ ಇದೆ. ಕೃಷಿ ಕಾರ್ಮಿಕರಿಗೆ, ಬಡಕುಟುಂಬಗಳಿಗೆ ನಾವು ಯಾವ ರೀತಿ ಸಹಾಯ ಮಾಡುತ್ತಿದ್ದೇವೆ ಎಂಬುದನ್ನು ನೋಡಬೇಕು. ಅವರಿಗೆ ಏನಾದರೂ ತುಟ್ಟಿ ಭತ್ಯೆ ಇದೆಯೇ? ಅವರೇನು ಸಂಬಳ ಪಡೆಯುವವರಾ? ಆ ತರಹ ಅವರು ಏನಾದರೂ ಏರಿಕೆಯನ್ನು ಪಡೆಯುತ್ತಾರೆಯೇ ಏನೂ ಇಲ್ಲ. ಕೊನೆಯ ಪಕ್ಷ ದಿನಕ್ಕೆ ಹತ್ತು ರೂಪಾಯಿಗಳನ್ನು ದುಡಿಯುವವರಿಗೆ ಎರಡು ರೂಪಾಯಿಗಳಿಗೆ ಒಂದು ಕೆ.ಜಿ. ಯಂತೆ ಅಕ್ಕಿ ಕೊಟ್ಟರೆ, ಅದನ್ನು ಕೊಳ್ಳುವ ಶಕ್ತಿ ಇರುತ್ತದೆ. ಇಂತಹವರು 5 ಕೆ.ಜಿ. ಅಕ್ಕಿಯನ್ನು ಕೊಂಡುಕೊಂಡು ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಈ ಯೋಜನೆ ಇಲ್ಲದಿದ್ದರೆ ಅವರು ಹೊರಗಡೆ ಮಾರುಕಟ್ಟೆಯಲ್ಲಿ ಕೆ.ಜಿ.ಗೆ 5 ರೂಪಾಯಿಗಳಂತೆ ಕೇವಲ ಎರಡು ಕೆ.ಜಿ. ಅಕ್ಕಿಯನ್ನು ಮಾತ್ರ ಕೊಳ್ಳಬೇಕಾಗುತ್ತದೆ. ಈ ಒಂದು ಕಲ್ಪನೆಯನ್ನು ನಾವು ಮನಸ್ಸಿನಲ್ಲಿಟ್ಟುಕೊಂಡು ಇದನ್ನು ಜಾರಿಗೆ ತಂದಿದ್ದೇವೆ. ಇದು ನಾನ್ ಪ್ರೊಡಕ್ಟೀವ್ ಇನ್‌ವೆಸ್ಟ್‌ಮೆಂಟ್ ಎಂದು ಕೆಲವರು ಹೇಳಿರುತ್ತಾರೆ. ಆದರೆ ಅದು ತಪ್ಪು ಕಲ್ಪನೆ. ಈ ಬಗ್ಗೆ ನನ್ನ ಸ್ಪಷ್ಟವಾದ ಅಭಿಪ್ರಾಯವೆಂದರೆ ತಾವೇ ಕೃಷಿ ಕಾರ್ಮಿಕರಿಗೆ ಸಾಕಷ್ಟು ಪೌಷ್ಟಿಕ ಆಹಾರವನ್ನು ಕೊಟ್ಟರೆ, ಅವರು ಹೆಚ್ಚು ಶ್ರಮಪಟ್ಟು ಕೆಲಸ ಮಾಡುತ್ತಾರೆ. ಆಗ ಉತ್ಪಾದನೆ ಸಹ ಹೆಚ್ಚಾಗುತ್ತದೆ. ಈ ಕಾರಣದಿಂದ ಅವರಿಗೆ ಈಗ ಕೊಡುತ್ತಿರುವ ಸಹಾಯವನ್ನು ಇನ್ನೂ ಹೆಚ್ಚು ಮಾಡಬೇಕಾಗುತ್ತದೆ. ಅವರು ಹೆಚ್ಚು ತಿಂದರೆ ಹೆಚ್ಚು ಕೆಲಸಮಾಡುತ್ತಾರೆ. ಆದರೆ ಅವರಿಗೆ ಹೊಟ್ಟೆ ತುಂಬುವಷ್ಟು ಆಹಾರವನ್ನು ಕೊಡಲು ನಮಗೆ ಕಳೆದ 41 ವರ್ಷಗಳಿಂದಲೂ ಸಹ ಸಾಧ್ಯವಾಗಿಲ್ಲ. ನಾವು ಬಡವರಿಗೆ ರಿಯಾಯಿತಿ ಬೆಲೆಯಲ್ಲಿ ಕೊಡುತ್ತಿರುವ ಸೀರೆ ಮತ್ತು ಪಂಚೆ ಬಗ್ಗೆ ಸಹ ಟೀಕೆಗಳು ಕೇಳಿ ಬರುತ್ತಿವೆ. ಆದರೆ ಇದು ಮಲ್ಟಿಪರಪಸ್ ಸ್ಕೀಮ್ ಆಗಿದೆ. ಹೇಗೆಂದರೆ ನಾವು 25 ರೂಪಾಯಿಗಳಷ್ಟು ಬೆಲೆ ಬಾಳುವ ಸೀರೆಯನ್ನು 15 ರೂಪಾಯಿಗಳಿಗೆ ಮತ್ತು 25 ರೂಪಾಯಿಗಳಷ್ಟು ಬೆಲೆ ಬಾಳುವ ಪಂಚೆಯನ್ನು ಹತ್ತು ರೂಪಾಯಿಗಳಿಗೆ ಬಡವರಿಗೆ ಕೊಟ್ಟರೆ ಅವರಿಗೆ ಅನುಕೂಲವಾಗುತ್ತದೆ. ಅವರು ವರ್ಷಕ್ಕೆ ಎರಡು ಜೊತೆ ಬಟ್ಟೆಗಳನ್ನಾದರೂ ಇದರಿಂದ ಕೊಳ್ಳಲು ಸಾಧ್ಯವಾಗುತ್ತದೆ. ಈಗ ನಮ್ಮ ರಾಜ್ಯದಲ್ಲಿ ಲಕ್ಷ ನೇಕಾರರು ಇದ್ದಾರೆ. ಇವರು ಈಗ ಉತ್ಪಾದನೆ ಮಾಡುವಂತಹ ಎಲ್ಲ ಸೀರೆ ಮತ್ತು ಪಂಚೆಗಳನ್ನು ನಾವು ಕೊಳ್ಳುತ್ತಿದ್ದೇವೆ. ಇದಕ್ಕೂ ಮೊದಲು ಅವರು ನೇಯ್ದ ಬಟ್ಟೆಗಳನ್ನು 6 ತಿಂಗಳವರೆಗೆ ಇಲ್ಲವೇ ಒಂದು ವರ್ಷದವರೆಗೆ ಮನೆಯಲ್ಲಿಯೇ ಇಟ್ಟಿರಬೇಕಾಗುತ್ತಿತ್ತು. ಏಕೆಂದರೆ ಅವು ಸಕಾಲದಲ್ಲಿ ಮಾರಾಟವಾಗುತ್ತಿರಲಿಲ್ಲ. ಇದು ಮಾನ್ಯ ಪಾಟೀಲ್ ಅವರಿಗೂ ಸಹ ಗೊತ್ತಿದೆ.

ಆದರೆ ಈಗ ನಾವು ಅವರು ನೇಯ್ದ ಎಲ್ಲ ಬಟ್ಟೆಗಳನ್ನು ಕೊಂಡುಕೊಳ್ಳುತ್ತಿದ್ದೇವೆ. ಇದೂ ಸಹ ಸಾಲದೆ ಹೊರಗಡೆಯಿಂದ ಸಹ ತರಿಸುತ್ತಿದ್ದೇವೆ. ಇದರ ಬದಲು ನಮ್ಮ ನೇಕಾರರಿಗೆ ಹೆಚ್ಚು ಮಗ್ಗಗಳನ್ನು ಕೊಟ್ಟು ಇಲ್ಲಿಯೇ ನಮಗೆ ಬೇಕಾದ ಬಟ್ಟೆಗಳನ್ನು ನೇಯಿಸಲು ವ್ಯವಸ್ಥೆ ಮಾಡಬೇಕಾಗಿದೆ. ಅದನ್ನು ನಾವು ಮಾಡುತ್ತಿದ್ದೇವೆ. ಈ ಯೋಜನೆಯಿಂದ ರೈತರಿಗೂ ಲಾಭವಾಗುತ್ತಿದೆ. ಹೇಗೆಂದರೆ ರೈತರು ಬೆಳೆದ ಹತ್ತಿಯನ್ನೆಲ್ಲಾ ನಮ್ಮ ಕೋ ಆಪರೇಟಿವ್ ಸ್ಪಿನ್ನಿಂಗ್ ಮಿಲ್‌ನವರು ಕೊಳ್ಳುತ್ತಿದ್ದಾರೆ. ಆದ್ದರಿಂದ ಈ ಬಗ್ಗೆ ಟೀಕೆ ಮಾಡುವುದಕ್ಕೆ ಮೊದಲು ಅದನ್ನು ಸಮಗ್ರವಾಗಿ ನೋಡುವುದು ಒಳ್ಳೆಯದು. ಇದು ಕಡುಬಡವರಿಗೆ ನೇಕಾರರಿಗೆ ಮತ್ತು ರೈತರಿಗೆ ಅನುಕೂಲವಾಗುವಂತಹ ಒಂದು ಮಲ್ಟಿ ಪರ್‌ಪಸ್ ಸ್ಕೀಮ್ ಆಗಿದೆ. ಇದರಿಂದ ನೇಕಾರರೊಂದು ಸಮಸ್ಯೆ ಸಹ ಪರಿಹಾರ ಆಗಿದೆ. ರೈತರಿಗೂ ಸಹಾಯ ಮಾಡಿದಂತೆ ಆಗಿದೆ. ಆದ್ದರಿಂದ ಈ ಬಗ್ಗೆ ಸುಮ್ಮನೆ ಟೀಕೆಗಾಗಿ ಟೀಕೆ ಮಾಡುವುದು ಸರಿಯಲ್ಲ. ನಮ್ಮ ಜನತಾ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ನಾವು ವಿಧವಾ ವೇತನ ಯೋಜನೆಯನ್ನು ತಾಳಿಭಾಗ್ಯ ಯೋಜನೆಯನ್ನು ವಿದ್ಯಾವಿಕಾಸ ಯೋಜನೆಯನ್ನು ಹಸಿರು ಕಾರ್ಡು ಯೋಜನೆಯನ್ನು ತಾಳಿಭಾಗ್ಯ ಯೋಜನೆಯನ್ನು ಮತ್ತು ಹೆರಿಗೆ ಭತ್ಯೆ ಯೋಜನೆಯನ್ನು ಜಾರಿಗೆ ತಂದಿದ್ದೇವೆ. ವೃದ್ಧಾಪ್ಯ ವೇತನ ಯೋಜನೆ ಮೊದಲಿನಿಂದಲೂ ಜಾರಿಯಲ್ಲಿದೆ. ಈ ಯೋಜನೆಗೆ 1978 ರಿಂದ 1983ರವರೆಗೆ 72.25 ಕೋಟಿ ರೂಪಾಯಿಗಳು ಖರ್ಚಾಗಿದ್ದರೆ ಅಲ್ಲಿಂದೀಚೆಗೆ ಇಲ್ಲಿಯವರೆಗೆ 152.99 ಕೋಟಿ ರೂಪಾಯಿಗಳು ಖರ್ಚಾಗಿದೆ. ಅದೇ ರೀತಿ ನಾವು ಅಧಿಕಾರಕ್ಕೆ ಬಂದಮೇಲೆ ಇಲ್ಲಿಯವರೆಗೆ ವಿಧವಾ ವೇತನಕ್ಕಾಗಿ 64 ಕೋಟಿ ರೂಪಾಯಿಗಳನ್ನು ಹೆರಿಗೆ ಭತ್ಯೆಕ್ಕಾಗಿ 14 ಕೋಟಿ ರೂಪಾಯಿಗಳನ್ನು ತಾಳಿ ಭಾಗ್ಯ ಯೋಜನೆಗೆ 65 ಲಕ್ಷ ರೂಪಾಯಿಗಳನ್ನು ಗ್ರೀನ್ ಕಾರ್ಡ್ ಯೋಜನೆಗೆ 80.93 ಕೋಟಿ ರೂಪಾಯಿಗಳನ್ನು ವಿದ್ಯಾವಿಕಾಸ ಯೋಜನೆಗೆ 41 ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದ್ದೇವೆ ಈ ಕೆಲವು ಯೋಜನೆಗಳ ಮೂಲಕ ನಾವು ಸಾಮಾಜಿಕ ನ್ಯಾಯವನ್ನು ಒದಗಿಸಿದಂತೆ ಆಗಲಿಲ್ಲವೇ? ಇದರ ಒಂದು ಅವಶ್ಯಕತೆ ಇದೆಯೋ ಅಥವಾ ಇಲ್ಲವೋ ಎಂಬುದನ್ನು ತಾವೇ ಹೇಳಬೇಕು. ನಾನು ಹೆಚ್ಚಿನ ವಿವರಕ್ಕೆ ಹೋಗುವುದಿಲ್ಲ. ವೃದ್ಧಾಪ್ಯ ವೇತನ ಯೋಜನೆ ಹಿಂದಿನಿಂದಲೂ ಜಾರಿಯಲ್ಲಿದೆ. ಹೆರಿಗೆ ಭತ್ಯೆ ಕೊಡುವ ಬಗ್ಗೆ ಇಲ್ಲಿ ಸಾಕಷ್ಟು ಚರ್ಚೆ ಆಗಿದೆ. ಆದರೆ ಸಾಮಾಜಿಕ ನ್ಯಾಯವನ್ನು ಒದಗಿಸುವಂತಹ ಈ ಕೆಲವು ಯೋಜನೆಗಳು ಅತೀ ಅವಶ್ಯಕವಾಗಿದೆ. ಕಡು ಬಡವರಿಗೆ ಕೊನೆಯ ಪಕ್ಷ ಸ್ವಲ್ಪವಾದರೂ ಸಹಾಯ ಮಾಡಬೇಕೆಂದು ನಾವು ಈ ಯೋಜನೆಯನ್ನು ಜಾರಿಗೆ ತಂದಿದ್ದು. ಕೇವಲ ಜನಪ್ರಿಯತೆಗೋಸ್ಕರವಾಗಿ ನಾವು ಇದನ್ನು ಜಾರಿಗೆ ತಂದಿಲ್ಲ. ಇವೆಲ್ಲಾ ಕಡುಬಡವರಿಗೆ ಸಹಾಯ ಮಾಡುವಂತಹ

ಯೋಜನೆಗಳಾಗಿವೆ ಈ ಯೋಜನೆಗಳ ಬಗ್ಗೆ ಇಲ್ಲಿ ಸಾಕಷ್ಟು ಟೀಕೆಗಳು ಬಂದಿದ್ದರಿಂದ ನಾನು ಇಷ್ಟು ವಿವರಕ್ಕೆ ಹೋಗಬೇಕಾಗಿ ಬಂತು.

ಮಾನ್ಯ ಅಧ್ಯಕ್ಷರೆ, ನೀರಾವರಿ ವಿಚಾರದಲ್ಲಿ ಹೇಳಿದ್ದೇನೆ. ಇನ್ನು ಕಾಡಾ ವಿಚಾರದಲ್ಲಿ ಒಂದು ವಿಚಾರ ಹೇಳಬೇಕು. ಮಾನ್ಯ ಶ್ರೀನಿವಾಸ್‌ರವರು ಇದರ ಬಗ್ಗೆ ಬಹಳ ಟೀಕೆ ಮಾಡಿದ್ದೀರ. ಅವರು ಟೀಕೆ ಮಾಡಿದ್ದು ಸರಿ ಇದೆ. ಇನ್ನೂ ಕಾನೂನು ಆಗಿಲ್ಲ ಅವರು ಪ್ರಪೋಸ್ಡ್ ಅಮೆಂಡ್ಮೆಂಟನ್ನು ಓದಿ ಹೇಳಿದರು. ಅದರಲ್ಲಿ ಕ್ಲಾಸ್ ಇದೆ. ತಾವು ಆಜ್ಞೆಯಾಗಿದೆ ಎಂದು ಹೇಳಿದಿರಲ್ಲಾ ಅದು ಪ್ರಪೋಸ್ ಅಮೆಂಡ್‌ಮೆಂಟ್.

**ಶ್ರೀ ಕೆ.ಹೆಚ್. ಶ್ರೀನಿವಾಸ್ :** ಸರ್ಕಾರಿ ಆಜ್ಞೆ ಮಾಡಿದ್ದೀರಿ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಇನ್ನೂ ಆರ್ಡರ್ ಇಷ್ಯೂ ಆಗಿಲ್ಲ ಅದು ಇನ್ನೂ ಕಾನೂನು ಆಗಿಲ್ಲ.

**ಶ್ರೀ ಕೆ.ಹೆಚ್. ಶ್ರೀನಿವಾಸ್ :** ಇನ್ನೂ ಕಾನೂನು ಆಗಿಲ್ಲ ಅಂದ ಮೇಲೆ ಅದನ್ನು ತಡೆ ಹಿಡಿಯಿರಿ.

**ಶ್ರೀ ಎಸ್.ಆರ್. ಬೊಮ್ಮಾಯಿ :** ನಮ್ಮ ಸಲಹೆ ಹಾಗೂ ಪಬ್ಲಿಕ್ ಅಕೌಂಟ್ಸ್ ಕಮಿಟಿಯಲ್ಲಿ ಕೊಟ್ಟಂಥ ಸಲಹೆಯನ್ನು ಗಮನದಲ್ಲಿಟ್ಟುಕೊಂಡು ಮಾಡುತ್ತಾ ಇದ್ದೇವೆ. ಕಾಡಾ ವಿಚಾರದಲ್ಲಿ ಹಣ ಖರ್ಚಾದ ವಿವರವನ್ನು ತಾವು ಹೇಳಿದಿರಿ. ಅದು ಒಳ್ಳೆಯ ಯೋಜನೆ. ಅದು ಯೋಜನಾ ಇಲಾಖೆಯ ಕೆಳಗೆ ಇತ್ತು ಅದು ನೀರಾವರಿ ಇಲಾಖೆಯಲ್ಲಿ ಇದ್ದರೆ ಸ್ವಲ್ಪ ದಕ್ಷವಾಗಿ ಚೆನ್ನಾಗಿ ಆಗುತ್ತದೆ ಎನ್ನುವ ಇಚ್ಛೆಯಿಂದ ಅದಕ್ಕೆ ಕೊಟ್ಟಿದ್ದೇವೆ. ಅದು ನೀರಾವರಿಗೆ ಸಂಬಂಧಪಟ್ಟ ವಿಚಾರವೇ ಅಲ್ಲೂ ಕೂಡ ತಾವು ಹೇಳಿದಂತೆ ಹೆಚ್ಚಿನ ಪ್ರಗತಿಯಾಗಿಲ್ಲ. ಅಲ್ಲಿ ಇನ್ನೂ ಹೆಚ್ಚಿನ ಒಂದು ಕೋ ಆರ್ಡಿನೇಷನ್ ಬೇಕಾಗಿದೆ ಮತ್ತು ಹೆಚ್ಚಿನ ಹಣ ಒದಗಿಸಿಕೊಡಬೇಕಾಗಿದೆ. ಆ ಬಗ್ಗೆ ಹೆಚ್ಚಿನ ಅಧಿಕಾರ ಕೊಡಬೇಕಾಗಿದೆ ಅದು ಸರ್ಕಾರದ ಆಲೋಚನೆಯಲ್ಲಿದೆ.

**ಶ್ರೀ ಕೆ.ಎಚ್. ಶ್ರೀನಿವಾಸ್:** ನೀರು ಬಳಕೆದಾರರು ಮತ್ತು ನೀರು ಹಂಚಿಕೆ ಕುರಿತಂತೆ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯಲ್ಲಿ ಒಂದು ಲೇಖನ ಬಂದಿದೆ. ಇದನ್ನು ತಾವು ಓದಬೇಕು.

**ಶ್ರೀ ಎಸ್.ಆರ್. ಬೊಮ್ಮಾಯಿ :** ಮಾನ್ಯ ಸಭಾಪತಿಗಳೇ, ಅನೇಕ ಸಲ ಈ ವಿಚಾರವನ್ನು ಮಾನ್ಯ ದೇವೇಗೌಡರು ಸಹ ನೀರನ್ನು ಉಪಯೋಗ ಮಾಡುವ

ವಿಚಾರದಲ್ಲಿ ಹೇಳಿದ್ದಾರೆ. ನೀರನ್ನು ಉಪಯೋಗ ಮಾಡುವ ವಿಚಾರದಲ್ಲಿ ಡ್ಯಾಮ್ ಹತ್ತಿರ ಇರುವವರು ಕಾಲುವೆ ಹತ್ತಿರ ಇರತಕ್ಕವರು ನೀರನ್ನು ಸರಿಯಾಗಿ ಬಳಸಬೇಕು. ನಮ್ಮ ರಾಜ್ಯದಲ್ಲಿ ನೀರಾವರಿ ಕಾಲುವೆ ಮಾಡತಕ್ಕ ಕೆಲಸ ಸ್ವಲ್ಪ ತಡವಾಗಿದೆ. ಎಲ್ಲಿ ಕಾಲುವೆಗಳು ಬಂದಿವೆಯೋ ಅಲ್ಲಿ ರೈತರು ಕಬ್ಬು ಭತ್ತವನ್ನು ಬೆಳೆದಿದ್ದಾರೆ. ಸಂಪೂರ್ಣವಾಗಿ ನೀರಿನ ಪ್ರಯೋಜನವನ್ನು ಅಚ್ಚುಕಟ್ಟುದಾರರಲ್ಲಿ ಪ್ರತಿಯೊಬ್ಬ ರೈತನಿಗೂ ನೀರು ಮುಟ್ಟಬೇಕಾದರೆ ನಮ್ಮ ನೀರಾವರಿ ವ್ಯವಸ್ಥೆಯಲ್ಲಿ ಸಮಗ್ರವಾದ ಬದಲಾವಣೆ ಆಗಬೇಕು.

ಹಿಂದಿನಿಂದಲೂ ಸರ್ಕಾರಗಳು ರಾಜಕೀಯ ಒತ್ತಡಕ್ಕಾಗಿ ಹಾಗೂ ಬೇರೆ ಬೇರೆ ಕಾರಣಗಳಿಂದಾಗಿ ನೀರು ಹಂಚಿಕೆ ಕುರಿತು ಕಠಿಣ ನೀತಿ ರೂಪಿಸುವ ವಿಚಾರವನ್ನು ಮುಂದೂಡುತ್ತಾ ಇದ್ದಾರೆ. ಇನ್ನು ಇದು ಮುಂದುವರಿಯಕೂಡದು. ಸಂಪೂರ್ಣವಾಗಿ ಯೋಜನಾ ಬದ್ಧವಾಗಿ ನೀರನ್ನು ಹಂಚಿಕೆ ಮಾಡುವುದರ ಬಗ್ಗೆ ಸರ್ಕಾರದವರು ಆಲೋಚನೆ ಮಾಡಿದ್ದಾರೆ. ಯಾರೂ ನೀರಿನ ಹಂಚಿಕೆಯಲ್ಲಿ ದುರ್ಲಾಭ ಪಡೆಯುವುದಕ್ಕೆ ಪ್ರಯತ್ನಮಾಡಲು ಮತ್ತೊಬ್ಬರ ನೀರನ್ನು ಕಬಳಿಸುವುದಕ್ಕೆ ಪ್ರಯತ್ನ ಮಾಡುತ್ತಾರೋ ಅಂತಹವರ ವಿಚಾರದಲ್ಲಿ ಸರಿಯಾದ ಕ್ರಮವನ್ನು ತೆಗೆದುಕೊಳ್ಳಲು ಕಾಡಾಗೆ ಅಧಿಕಾರವನ್ನು ಕೊಡತಕ್ಕ ವ್ಯವಸ್ಥೆ ಮಾಡಿದ್ದೇವೆ.

**ಶ್ರೀ ಸಿ.ಎಂ. ರೇವಣಸಿದ್ದಯ್ಯ (ಸಿರಗುಪ್ಪ):** ಮಾನ್ಯ ಅಧ್ಯಕ್ಷರೆ, ಮಾನ್ಯ ಸಚಿವರು ನೀರಾವರಿಗೆ ಎಷ್ಟು ಖರ್ಚು ಮಾಡುತ್ತಿದ್ದೇವೆ, ಆದ್ದರಿಂದ ಸರ್ಕಾರಕ್ಕೆ ಎಷ್ಟು ಆದಾಯ ಬರುತ್ತದೆ ಎಂಬುದರ ಬಗ್ಗೆ ಹೇಳುತ್ತಿದ್ದಾರೆ ಅವರು ಕೇವಲ ವಾಟರ್ ರೇಟ್ ಮಾತ್ರ ಹೇಳುತ್ತಾರೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಮಾನ್ಯ ಅಧ್ಯಕ್ಷರೆ, ಇದರ ಬಗ್ಗೆ ನಾನು ಆಗಲೇ ಹೇಳಿದ್ದೇನೆ. ಆದರೆ ಆಗ ಮಾನ್ಯ ಸದಸ್ಯರು ಇರಲಿಲ್ಲವೆಂದು ಕಾಣುತ್ತದೆ. ಯಾವ ರೀತಿಯ ಉತ್ಪಾದನೆ ಆಗುತ್ತದೆ ಅದರಿಂದ ಎಷ್ಟು ಆದಾಯ ಬರುತ್ತದೆಂಬುದನ್ನು ನಾನು ಆಗಲೇ ಹೇಳಿದೆ. ನೀರಾವರಿಗೋಸ್ಕರ ನಾವು ಏನು ಹಣವನ್ನು ತೊಡಗಿಸುತ್ತೇವೋ ಅದಕ್ಕೆ ತಕ್ಕಂತೆ ಆದರೂ ಶಾಸ್ತ್ರೀಯ ಆಧಾರದ ಮೇಲೆ ನಮಗೆ ವರಮಾನ ಬರಬೇಕು. ಏಕೆಂದರೆ ನಾವು ನೀರಾವರಿಗಾಗಿ ಕನ್‌ಸಾಲಿಡೇಟೆಡ್ ಫಂಡ್ನಿಂದ ಹಣವನ್ನು ಖರ್ಚು ಮಾಡುತ್ತೇವೆ. ರಾಜ್ಯದ ಎಲ್ಲಾ ವರ್ಗದ ಜನರೂ ಕೊಟ್ಟಂಥ ಹಣದಿಂದ ನಾವು ಈ ನೀರಾವರಿಗಾಗಿ ಖರ್ಚು ಮಾಡುತ್ತೇವೆ. ಅದು ವ್ಯಾಪಾರ ಮಾಡತಕ್ಕವರಿರಬಹುದು. ಕೃಷಿ ಕಾರ್ಮಿಕರಿರಬಹುದು. ಅಥವಾ ಇನ್ನೂ ಬೇರೆ ಬೇರೆ ವೃತ್ತಿಯನ್ನು ಮಾಡತಕ್ಕವರಿರಬಹುದು ಅವರೆಲ್ಲರೂ

ಕೊಡತಕ್ಕ ಹಣದಿಂದ ನಾವು ಈ ನೀರಾವರಿಗೆ ಹಣ ತೊಡಗಿಸುತ್ತೇವೆ. ಒಂದು ಮಾತನ್ನು ಹೇಳುವುದಾದರೆ ನಮ್ಮ ಪಕ್ಕದ ರಾಜ್ಯದಲ್ಲಿ ನೀರಾವರಿ ತೆರಿಗೆಯನ್ನು ಏನು ಕೊಡುತ್ತಿದ್ದಾರೆ ಅದರ ಹತ್ತಿರ ಹತ್ತಿರವಾದರೂ ನಮ್ಮ ರಾಜ್ಯದ ರೈತರು ಕೊಡಬಾರದೇ? ಪಕ್ಕದ ರಾಜ್ಯದಲ್ಲಿ ಕೊಡುವಷ್ಟು ಪೂರ್ತಿ ಕೊಡುವುದು ಬೇಡ. ಮಹಾರಾಷ್ಟ್ರ, ಗುಜರಾತ್ ಮುಂತಾದ ರಾಜ್ಯಗಳಲ್ಲಿ ಏನು ನೀರಾವರಿ ತೆರಿಗೆಯನ್ನು ಕೊಡುತ್ತಿದ್ದಾರೆ ಅದಕ್ಕಿಂತ ಸ್ವಲ್ಪ ಕಡಿಮೆಯಾದರೂ ನಮ್ಮ ರಾಜ್ಯದವರು ಕೊಡಬೇಕು. ಇದನ್ನು ಮಾನ್ಯ ಸದಸ್ಯರ ಜೊತೆ ಚರ್ಚೆ ಮಾಡಿದ್ದೇವೆ.

**ಶ್ರೀ ಆರ್. ವೆಂಕಟರಾಮಯ್ಯ** : ನಾವು ಹೇಳಿದ್ದನ್ನು ತಾವು ಒಪ್ಪಿಕೊಂಡಿದ್ದೀರಿ.

**ಶ್ರೀ ಎಸ್.ಆರ್. ಬೊಮ್ಮಾಯಿ** : ನೋಡುತ್ತೇವೆಂದು ಹೇಳಿದ್ದೇವೆ. ನೀವು ಹೇಳಿದ್ದನ್ನು ನಾವು ಒಪ್ಪಿಕೊಂಡಿಲ್ಲ. ಮಾನ್ಯ ಅಧ್ಯಕ್ಷರೆ ನಿಮಗೆ ಇನ್ನೂ ಎಷ್ಟು ಹಣ ಬೇಕಾಗುತ್ತದೆಂದು ಮಾನ್ಯ ಶ್ರೀ ಕೆ.ಹೆಚ್. ಪಾಟೀಲ್‌ರವರು ಕೇಳಿದರು. ಇದಕ್ಕೆ ಹೇಳುವುದಾದರೆ ಈಗ ಒಂದು ರೀತಿಯ ಗಂಭೀರವಾದ ಆರ್ಥಿಕ ಇಕ್ಕಟ್ಟಿನಲ್ಲಿ ನಾವಿದ್ದೇವೆ. ಕಾವೇರಿ ವಲಯದ ನೀರನ್ನು ಇನ್ನು 45 ವರ್ಷಗಳಲ್ಲಿ ಪೂರ್ಣವಾಗಿ ಉಪಯೋಗ ಮಾಡಿಕೊಳ್ಳಬೇಕಾಗಿದೆ. ಇದಕ್ಕೆ 984 ಕೋಟಿ ರೂಪಾಯಿ ಬೇಕಾಗುತ್ತದೆ. ಕೃಷ್ಣ ನೀರನ್ನು 2000ನೇ ಇಸವಿಯೊಳಗೆ ನಾವು ಉಪಯೋಗ ಮಾಡಿಕೊಳ್ಳಬೇಕಾಗುತ್ತದೆ. ಇದಕ್ಕೆ 2607 ಕೋಟಿ ರೂಪಾಯಿ ಬೇಕಾಗುತ್ತದೆ. ಇದೇ ರೀತಿ ಗೋದಾವರಿ ನೀರನ್ನು ಉಪಯೋಗಮಾಡಿಕೊಳ್ಳಬೇಕಾದರೆ 97 ಕೋಟಿ ರೂಪಾಯಿಗಳು ನಮಗೆ ಬೇಕಾಗುತ್ತದೆ. ನಾವು ಪ್ರತಿ ವರ್ಷ ನೀರಾವರಿಗಾಗಿ ಸುಮಾರು 450 ಕೋಟಿ ರೂಪಾಯಿಗಳನ್ನು ಒದಗಿಸಬೇಕಾಗುತ್ತದೆ. ಹೀಗೆ ಒದಗಿಸಿದರೆ ಮಾತ್ರ ನಮ್ಮ ಗುರಿಯನ್ನು ನಾವು ಸಾಧನೆ ಮಾಡುವುದಕ್ಕೆ ಅನುಕೂಲವಾಗುತ್ತದೆ.

****

# ಕಂದಾಯ ಇಲಾಖೆ

ದಿನಾಂಕ: 26.6.1988

**ರಾಮಕೃಷ್ಣ ಹೆಗಡೆಯವರ ಸಂಪುಟದಲ್ಲಿ ಸಚಿವರಾಗಿದ್ದ ದಿನಗಳು ಬೊಮ್ಮಾಯಿಯವರ ಪಾಲಿಗೆ ಅತ್ಯಂತ ಸವಾಲಿನದಾಗಿದ್ದವು. ಆಗ ರಾಜ್ಯವನ್ನು ತೀವ್ರ ಬರಗಾಲ ಕಾಡುತ್ತಿತ್ತು. ಮಳೆ ಕೈ ಕೊಟ್ಟಿತ್ತು ಇದೆಲ್ಲವನ್ನು ಸಮರ್ಥವಾಗಿ ಎದುರಿಸಿ ಇಲಾಖೆಯನ್ನು ನಿರ್ವಹಿಸಿದ ಬೊಮ್ಮಾಯಿಯವರು ಇಲಾಖಾ ಬೇಡಿಕೆಯ ಮೇಲಿನ ಚರ್ಚೆಗೆ ಸುದೀರ್ಘವಾದ ಉತ್ತರವನ್ನು ಸದನದಲ್ಲಿ ನೀಡಿದರು.**

**ಶ್ರೀ ಎಸ್.ಆರ್. ಬೊಮ್ಮಾಯಿ :** ಮಾನ್ಯ ಅಧ್ಯಕ್ಷರೆ, ಕಂದಾಯ ಇಲಾಖೆಯ ಬಗ್ಗೆ ಚರ್ಚೆ ಆದಾಗ, ಎಲ್ಲಾ ಮಾನ್ಯ ಸದಸ್ಯರುಗಳು ಇದು ಬಹಳ ಮುಖ್ಯವಾದಂಥ ಇಲಾಖೆ, ಇದು ಮದರ್ ಆಫ್ ಆಲ್ ಡಿಪಾರ್ಟ್‌ಮೆಂಟ್ಸ್ ಎಂದು ಹೇಳಿದ್ದಾರೆ. ಆ ಕುರಿತು ನನ್ನ ಅಭಿಪ್ರಾಯಗಳನ್ನು ಕೂಡ ಹೇಳಿದ್ದೇನೆ. ಈ ಇಲಾಖೆಯ ಕೆಲಸವು ಶ್ರೀ ಸಾಮಾನ್ಯನಿಗೆ ಹೆಚ್ಚಿನ ಸಂಪರ್ಕ ಇರುವುದರಿಂದ ಸಾಮಾನ್ಯವಾಗಿ ಈ ಇಲಾಖೆಯ ಮೇಲಿನ ಚರ್ಚೆಯಾದಾಗ ಗ್ರಾಮಲೆಕ್ಕಿಗಳು ಸಬ್ ರಿಜಿಸ್ಟ್ರಾರ್, ತಹಶೀಲ್ದಾರ್ ಕಚೇರಿಗಳ ಬಗ್ಗೆ ಕಟುವಾಗಿ ಟೀಕೆಬರುತ್ತದೆ ನಮ್ಮ ರಾಜ್ಯದಲ್ಲಿ ಜಿಲ್ಲಾ ಪರಿಷತ್ತಿನ ಏರ್ಪಾಡು ಬಂದ ಮೇಲೆ ಇವುಗಳ ಬಗ್ಗೆ ಟೀಕೆ ಬಹಳ ಕಡಿಮೆಯಾಗಿದೆ. ಮೊದಲು ಬೇರೆ ಬೇರೆ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಕಂದಾಯ ಇಲಾಖೆ ಪಾಲ್ಗೊಳ್ಳುತ್ತಾ ಇತ್ತು ಆದರೆ ಇವತ್ತು ಬೇರ್ಪಡೆಯಾಗಿದೆ. ಈಗ ಕಂದಾಯ ಇಲಾಖೆಯವರು ಇನ್ನು ಹೆಚ್ಚು ಇಲಾಖೆಗಳ ಗಮನ ಕೊಡಬೇಕಾಗಿದೆ. ಅದೇ ರೀತಿಯಲ್ಲಿ ಹೆಚ್ಚು ಗಮನ ಕೊಡಲು ಪ್ರಾರಂಭ ಮಾಡಿದ್ದಾರೆ. ಈ ಇಲಾಖೆಯ ಬಗ್ಗೆ ಚರ್ಚೆ ಮಾಡುವಾಗ ಪ್ರಾಮುಖ್ಯವಾಗಿ ಬಗರ್ ಹುಕುಂ ಸಾಗುವಳಿ ಮಾಡುವಂತೆ ಜಮೀನುಗಳನ್ನು ಸಕ್ರಮಗೊಳಿಸತಕ್ಕಂಥ ಕಾಲದಲ್ಲಿ ಮತ್ತು ಲ್ಯಾಂಡ್ ರಿಫಾರ್ಮ್ಸ್ ಜಾರಿಗೆ ಗೊಳಿಸುವಂತಹ ಕಾಲದಲ್ಲಿ ಆಗಿರುವಂತಹ ವಿಳಂಬದ ಬಗ್ಗೆ ಅನೇಕ ಜನಸಾಮಾನ್ಯರು, ಸದಸ್ಯರು ಮಾತನಾಡಿದ್ದಾರೆ.

ಅನೇಕ ಸದಸ್ಯರು ಅನಧಿಕೃತ ಸಾಗುವಳಿ ಮಾಡಿರುವವರ ಬಗ್ಗೆ ಹೇಳಿದ್ದಾರೆ. ಅದರ ವಿವರ ಹೀಗಿದೆ. 1719–84 ಅನಧಿಕೃತವಾದ ಸಾಗುವಳಿ ಮಾಡಿರುವವರಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರ ಸಂಖ್ಯೆ 80,729. ವಿಸ್ತೀರ್ಣ 1,51,512 ಎಕರೆ ಒಟ್ಟು ಪ್ರಮಾಣ 299 ಪರ್ಸೆಂಟ್. ಭೂ ಹೀನರ ಸಂಖ್ಯೆ. 63,633 ವಿಸ್ತೀರ್ಣ 1,55,564 ಎಕರೆ ಒಟ್ಟು ಪ್ರಮಾಣ 229 ಪರ್ಸೆಂಟ್. ಅತೀ

ಸಣ್ಣ ರೈತರ ಸಂಖ್ಯೆ. 58,146 ವಿಸ್ತೀರ್ಣ 1,07,1,6 ಎಕರೆ ಒಟ್ಟು ಪ್ರಮಾಣ 209 ಪರ್ಸೆಂಟ್. ಇತರರು ಸಂಖ್ಯೆ 75,351 ವಿಸ್ತೀರ್ಣ 1,46,501 ಎಕರೆಗಳು. ಈ ವಿವರಗಳನ್ನು ನೋಡಿದರೆ ಕೇವಲ ಸಿರಿವಂತರು ಮಾತ್ರ ಕಬಳಿಸಿಲ್ಲ ಎಂಬುದು ತಿಳಿಯುತ್ತದೆ. ಪರಿಶಿಷ್ಟ ಜಾತಿ ಪಂಗಡದವರು ಕೂಡ ಹೆಚ್ಚಿಗೆ ಬಗರ್ ಹುಕುಂ ಮಾಡುತ್ತಿದ್ದಾರೆ. ಆ ರೀತಿ 84 ರಿಂದ ಈಚೆಗೆ ನಾವು ಮಾಡಿದ್ದ ಕಾನೂನು ವಿಚಾರ ಸಾರ್ವಜನಿಕರಿಗೆ ತಿಳಿದ ಮೇಲೆ ಕೆಲವರು ಒತ್ತುವರಿ ಮಾಡಿದ್ದಾರೆ. ನಾನು ಈ ಬಗ್ಗೆ ಹೇಳುವುದು ಇಷ್ಟೇ 1984 ರಿಂದ ಈಚೆಗೆ ಅಕ್ರಮ ಸಾಗುವಳಿ ಮಾಡಿದವರಿಗೆ ಸಕ್ರಮ ಪಡಿಸುವ ಪ್ರಶ್ನೆಯೇ ಇಲ್ಲ. ಇನ್ನು ಪ್ಲಾಂಟೇಷನ್ ಕ್ರಾಪ್ ವಿಚಾರದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರು 863 ವಿಸ್ತೀರ್ಣ 1,889 ಎಕರೆ. ಭೂಹೀನರು 1966 ವಿಸ್ತೀರ್ಣ 4,402 ಎಕರೆ. ಅತೀ ಸಣ್ಣ ರೈತರು 2798 ವಿಸ್ತೀರ್ಣ 5363 ಎಕರೆ. ಈ ಬಗ್ಗೆ ಈ ಸದನದ ಮುಂದೆ ಮಸೂದೆ ಇದೆ ಅದರ ಬಗ್ಗೆ ಜಾಯಿಂಟ್ ಸೆಲೆಕ್ಟ್ ಕಮಿಟಿಯವರು ಒಮ್ಮತದಿಂದ ಒಂದು ರಿಪೋರ್ಟನ್ನು ಕೊಟ್ಟಿದ್ದು ಸಮಾಜದ ಅನೇಕ ಕಡೆಗಳಿಂದ ಅದನ್ನೆಲ್ಲಾ ಸಕ್ರಮಗೊಳಿಸಬೇಕೆಂಬುದು ಬಹಳ ಒತ್ತಡ ಇದೆ. ಈ ಸದನದ ಮುಂದೆ ನಾನು ವಿನಯಪೂರ್ವಕ ಮನವಿ ಮಾಡುವುದೇನೆಂದರೆ ಈ ಆದೇಶದಲ್ಲೇ ಆ ಮಸೂದೆಯನ್ನು ಪಾಸು ಮಾಡಿಕೊಟ್ಟರೆ ಅವರು ಬೇರೆ ಸಂಘ ಸಂಸ್ಥೆಗಳಿಗೆ ಸಾಲ ಪಡೆಯಲು ಭೂಮಿಯನ್ನು ಅಭಿವೃದ್ಧಿಪಡಿಸಲು ಈ ಕಾನೂನು ಬಂದ ಮೇಲೆ ಅನುಕೂಲವಾಗುತ್ತದೆಂದು ಎಂಬುದು.

ಈ ಭೂ ಸುಧಾರಣೆ ಕಾನೂನು ಜಾರಿಗೆ ಬಂದ ಮೇಲೆ ರೈತರಿಂದ ಬಂದ ಅರ್ಜಿಗಳ ಸಂಖ್ಯೆ 1,15,587 ವಿಲೇವಾರಿ ಆದವುಗಳು, 8,14,655. ಬಾಕಿ ಉಳಿದಿರುವುದು 1,132. ಈ ಅರ್ಜಿಗಳಲ್ಲಿ 4,83,557 ಪ್ರಕರಣಗಳು ರೈತರ ಪರವಾಗಿ ಆಗಿವೆ. ಖರ್ಗೆಯವರು ಬಸವಲಿಂಗಪ್ಪನವರು ಇದನ್ನೆಲ್ಲಾ ಕೇಳಬೇಕಾಗಿತ್ತು. ಐಟೆಕ್‌ನಿಂದ ಸುಮಾರು 60,953 ಕೇಸುಗಳು ಮತ್ತು ಅಫಿಲೇಟ್ ಅಥಾರಿಟಿಗೆ ರಿಮ್ಯಾಂಡಾಗಿವೆ. ಅಫಿಲೇಟ್ ಅಥಾರಿಟಿಗೆ 24,138 ಕೇಸುಗಳು ಟ್ರಾನ್ಸ್‌ಫರ್ ಆಗಿವೆ. ಟ್ರಿಬ್ಯೂನಲ್‌ಗೆ ಟ್ರಾನ್ಸ್‌ಫರ್ ಆದಂತಹ ಕೇಸುಗಳು 36,815 ಇಲ್ಲಿ ವಿಳಂಬವಾಗುತ್ತದೆಂದು ಮಾನ್ಯ ಸದಸ್ಯರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಪ್ರಾರಂಭದಲ್ಲೆ ಅಫಿಲೇಟ್ ಅಥಾರಿಟಿಗಳು ಕೆಲಸ ಮಾಡುವುದಕ್ಕೆ ಅನೇಕ ರೀತಿಯ ತೊಂದರೆಗಳು ಇದ್ದವು. ಕಟ್ಟಡಗಳ ಅಭಾವ ಸ್ಟಾಫ್ ಅಭಾವ ಮತ್ತು ಜಿಲ್ಲಾ ನ್ಯಾಯಾಧೀಶರುಗಳನ್ನು ಅಲ್ಲಿ ನೀಡುವ ಬಗ್ಗೆ ತೊಂದರೆ ಇತ್ತು. ಆದರೆ ಇತ್ತೀಚೆಗೆ ಎಲ್ಲಾ ಟ್ರಿಬ್ಯೂನಲ್‌ಗಳು ಕೆಲಸ ಮಾಡುತ್ತಿವೆ. ಟ್ರಿಬ್ಯೂನಲ್‌ನಲ್ಲಿ ಜ್ಯೂಡಿಷಿಯಲ್

ಮೆಂಬರ್ ಇರಲಿಲ್ಲ. ಈಗ ಹೈಕೋರ್ಟ್ ನವರು ಒಪ್ಪಿಗೆ ಕೊಟ್ಟಿರುವುದರಿಂದಾಗಿ ಜ್ಯುಡಿಷಿಯಲ್ ಮೆಂಬರ್ ಕೂಡ ಅಲ್ಲಿಗೆ ಹೋಗುತ್ತಿದ್ದಾರೆ. ಮಾನ್ಯ ಶ್ರೀನಿವಾಸ್‌ರವರು ಅನೇಕ ಸಲ ಪ್ರಶ್ನೆಯನ್ನು ಎತ್ತಿದ್ದಾರೆ. ಅಫಿಲೇಟ್ ಅಥಾರಿಟಿಯವರು ಈಗಾಗಲೇ ಮೊಕಾಲ್ ಮಾಡಿದಂತಹ ಪ್ರಕರಣಗಳು 6614. ಅದರಲ್ಲಿ 2147 ಪ್ರಕರಣಗಳು ಗೇಣಿದಾರರ ಪರವಾಗಿವೆ. 1965 ಪ್ರಕರಣಗಳು ಭೂ ಮಾಲೀಕರ ಪರವಾಗಿ ಆಗಿವೆ. ಈ ಪ್ರಕರಣಗಳ ವಿಚಾರದಲ್ಲಿ ಆತಂಕವಿತ್ತು. ಒಂದು ರೀತಿ ಭೂ ಒಡೆಯರ ಪರವಾಗಿ ಆಗುತ್ತದೆಂದು, ಮಾನಿಟರಿ ಮಾಡತಕ್ಕಂತಹ ರಿವ್ಯೂ ವಿಚಾರವನ್ನು ಕೂಡ ಕೆಲವರು ವ್ಯಕ್ತಪಡಿಸಿದ್ದಾರೆ. ಪ್ರತಿ ತಿಂಗಳು ವಿವರವನ್ನು ತರಿಸಿ ಜಡ್ಜ್‌ಮೆಂಟ್‌ಗಳನ್ನು ಅಧ್ಯಯನ ಮಾಡಿ ಇದರಲ್ಲಿ ಕೊಟ್ಟಂತಹ ಕಾರಣಗಳು ಸರಿಯಿದೆಯೇ ಇಲ್ಲವೇ ಎಂಬುದನ್ನು ಪರಿಶೀಲನೆ ಮಾಡತಕ್ಕಂತಹ ವಿಚಾರವನ್ನು ಕೂಡ ಸರ್ಕಾರ ಮಾಡುತ್ತಿದೆ. ಮಾನ್ಯ ಶ್ರೀನಿವಾಸರವರು ಆಗಾಗ ಈ ವಿಚಾರವನ್ನು ಪ್ರಸ್ತಾಪ ಮಾಡುತ್ತಿರುತ್ತಾರೆ. ಗೇಣಿದಾರರ ತೀರ್ಮಾನಗಳ ಸಮೀಕ್ಷೆಯಲ್ಲಿ 32000 ಪ್ರಕರಣಗಳನ್ನು ಸರ್ಕಾರಕ್ಕೆ ಕಳುಹಿಸಲಾಗಿದೆ. 10 ವರ್ಷಗಳಿಂದ ಪೆಂಡಿಂಗ್ ಇರತಕ್ಕವುಗಳು ಇಲ್ಲಿ ಇವೆ. ಇದಕ್ಕೆ ಸರ್ಕಾರವೇ ಅಪೀಲು ಮಾಡತಕ್ಕಂತಹ ನಿರ್ಣಯವನ್ನು ಮಾಡಿದೆ. 32,000 ಪ್ರಕರಣಗಳ ಪೈಕಿ 3500 ಪ್ರಕರಣಗಳಿಗೆ ರಿಟ್ ಅರ್ಜಿಗಳನ್ನು ಹಾಕಿದೆ. ಉಳಿದ ಅರ್ಜಿಗಳಿಗೆ ಟೈಂ ಬಾರ್ ಆಗಿದೆ. ಇದನ್ನು ಮತ್ತೆ ಪರಿಶೀಲನೆ ಮಾಡತಕ್ಕದ್ದು ಪ್ರಯೋಜನವಿಲ್ಲವೆಂದು ಸರ್ಕಾರ ಕೈಬಿಟ್ಟಿದೆ.

**ಶ್ರೀ ಕೆ.ಎಚ್. ಶ್ರೀನಿವಾಸ್:** 3500 ರಿಟ್ ಪಿಟಿಷನ್‌ಗಳ ಬಗ್ಗೆ ವಿವರಗಳನ್ನು ಕೊಡಿ.

**ಶ್ರೀ ಎಸ್. ಆರ್. ಬೊಮ್ಮಾಯಿ:** ಇದರ ಬಗ್ಗೆ ನನ್ನ ಹತ್ತಿರ ವಿವರ ಇಲ್ಲ. ತರಿಸಿ ನೋಡುತ್ತೇನೆ. ಸರ್ವೆ ಇಲಾಖೆಯ ಬಗ್ಗೆ ಟೀಕೆ ಇದೆ. ಆದರೆ ಸರ್ವೆ ಇಲಾಖೆಯ ಕೆಲಸಕೂಡ ಅಷ್ಟೇ ಕಷ್ಟಕರವಾದುದು. ಹರಿಬರಿಯಲ್ಲಿ ಏನು ಮಾಡತಕ್ಕದ್ದು. ಅಲ್ಲಿ ಇಂಚು ಇಂಚು ಭೂಮಿಯನ್ನು ಅಳತೆ ಮಾಡಿ ನಕಾಶೆ ತಯಾರು ಮಾಡತಕ್ಕದ್ದು. ಅವುಗಳನ್ನು ಒದಗಿಸತಕ್ಕದ್ದು ಏನು ಇದೆ ಅದೆಲ್ಲಾ ಶಾಸ್ತ್ರೀಯವಾಗಿ ನಡೆಯಬೇಕಾಗುತ್ತದೆ. ಅಲ್ಲಿ ಹಳೆಯ ಪದ್ಧತಿಯಿಂದ ಮಾಡುತ್ತಿದ್ದಾರೆ. ದರ ಮುಂತಾದವುಗಳನ್ನೆಲ್ಲಾ ಹಿಡಿದುಕೊಂಡು ಅಳೆಯತಕ್ಕದ್ದು ಇದೆ. ಇದು ಬದಲಾವಣೆಯಾಗಬೇಕೆಂದು ಸರ್ಕಾರ ವಿಚಾರ ಮಾಡುತ್ತಿದೆ.

**ಶ್ರೀ ರೇವಣಸಿದ್ದಯ್ಯ:** ಮಾನ್ಯ ಮಂತ್ರಿಗಳು ಲ್ಯಾಂಡ್ ರಿಫಾರ್ಮ್ಸ್ ಬಗ್ಗೆ ಹೇಳಿದರು. ನಾನು ಕೆಲವು ವಿಚಾರಗಳನ್ನು ಪ್ರಸ್ತಾಪ ಮಾಡಿದೆ ಅದಕ್ಕೆ ಉತ್ತರ ಹೇಳಲಿಲ್ಲ.

**ಶ್ರೀ ಎಸ್.ಆರ್. ಬೊಮ್ಮಾಯಿ:** ನಾನು ಈ ಬಗ್ಗೆ ಮುಕ್ತಾಯ ಮಾಡುತ್ತೇನೆ. ನಂತರ ಹೇಳಿ ಬಳ್ಳಾರಿಯ 26 ಗ್ರಾಮಗಳಲ್ಲಿ ಸರ್ವೆ ಮಾಡತಕ್ಕಂತಹ ಪ್ರಶ್ನೆಯೇ ಇಲ್ಲಿ ಬಂದಿಲ್ಲ. ಅದನ್ನು ಈಗಾಗಲೇ ಕಾನೂನು ಇಲಾಖೆಗೆ ಕಳುಹಿಸಿ ಕೊಟ್ಟಿದೆ. ಅವರು ನೋಟಿಫಿಕೇಷನ್ ಅನ್ನು ಹೊರಡಿಸುತ್ತಾರೆ. ಸರ್ವೆ ಮಾಡತಕ್ಕಂತಹ ಕೆಲಸವನ್ನು ಆದಷ್ಟು ಬೇಗ ಪ್ರಾರಂಭ ಮಾಡುತ್ತಿದ್ದೇವೆ.

**ಶ್ರೀ ಯು. ಭೂಪತಿ:** ಸಂಡೂರ್ ತಾಲ್ಲೂಕಿನಲ್ಲಿ ಪೆಂಡಿಂಗ್ ಜಾಸ್ತಿ ಇದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಾನ್ಯ ಸದಸ್ಯರು ಇನ್ನೊಂದು ಪ್ರಮುಖ ವಿಚಾರವಾದ ಸರ್‌ಪ್ಲೆಸ್ ಲ್ಯಾಂಡ್ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. 5 ವರ್ಷದಲ್ಲಿ 2866 ಎಕರೆ ಸರ್‌ಪ್ಲೆಸ್ ಲ್ಯಾಂಡನ್ನು ಡಿಸ್ಟ್ರಿಬ್ಯೂಷನ್ ಮಾಡಿದ್ದೇವೆ. ಇನ್ನು ಲ್ಯಾಂಡ್ ಲಾರ್ಡ್ಸ್‌ಗೆ ಕಾಂಪನ್ಸೇಷನ್ ಕೊಡತಕ್ಕಂತಹ ವಿಚಾರ 20 ವರ್ಷಗಳಿಂದ ನೆನೆಗುದಿಗೆ ಬಿದ್ದಿದೆ. 1,19,920 ಜನರಿಗೆ ಈಗಾಗಲೆ ಎನ್.ಎಸ್.ಸಿ. ಸರ್ಟಿಫಿಕೇಟ್ ಮುಖಾಂತರವಾಗಿ ಕಾಂಪನ್ಸೇಷನ್ ಕೊಟ್ಟಿದೆ. ಇನ್ನು 18 ಕೋಟಿ ಬಾಕಿ ಕೊಡತಕ್ಕದ್ದು ಇದೆ. ಈ ವರ್ಷ ಇದಕ್ಕಾಗಿ 18 ಕೋಟಿ ರೂಪಾಯಿಯನ್ನು ಬಜೆಟ್‌ನಲ್ಲಿ ನಾವು ಒದಗಿಸಿದ್ದೇವೆ. ಎಲ್ಲಾ ಲ್ಯಾಂಡ್‌ಲಾರ್ಡ್ಸ್‌ಗೆ ಸಲ್ಲತಕ್ಕಂಥ ಕಾಂಪೆನ್ಸೇಷನ್ ಅನ್ನು ಈ ವರ್ಷದ ಅಂತ್ಯದೊಳಗಾಗಿ ಕೊಡತಕ್ಕಂಥ ನಿರ್ಧಾರವನ್ನು ಸರ್ಕಾರ ಮಾಡಿದೆ. ಹರಿಜನ ಗಿರಿಜನರ ಭೂಮಿಯನ್ನು ಪರಭಾರೆ ಮಾಡುವಂಥ ವಿಚಾರವನ್ನು ಮಾನ್ಯ ಬಸವಲಿಂಗಪ್ಪನವರು, ಮಾನ್ಯ ಖರ್ಗೆಯವರು ಎತ್ತಿದರು. ಪಿಟಿಎಲ್‌ಆರ್‌ಸಿ ಆಕ್ಟ್ ಕೆಳಗೆ ನಾನು ಈ ಮೊದಲೇ ಹೇಳಿದಂತೆ ಈ ಕಾನೂನು ಬಂದಿದ್ದರೂ ಕೂಡ ಅದು ಜಾರಿಯಲ್ಲಿರಲಿಲ್ಲ. ನಮ್ಮ ಸರ್ಕಾರ ಬಂದ ಮೇಲೆ ಇದರ ಬಗ್ಗೆ ತೀವ್ರವಾಗಿ ಗಮನವನ್ನು ಹರಿಸಿದ್ದೇವೆ. ಏಕೆಂದರೆ ಷೆಡ್ಯೂಲ್ಡ್ ಕಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್ ಜನ ಮುಂದೆ ಬಂದು ಅರ್ಜಿ ಕೊಡಲಿಕ್ಕೆ ಹಿಂದೆ ಮುಂದೆ ನೋಡುತ್ತಿದ್ದರು. ಇದರ ಪ್ರಗತಿ ಈ ರೀತಿ ಇದೆ. ವಾಪಸ್ ತೆಗೆದುಕೊಳ್ಳುವುದು ಬಹಳ ಕಷ್ಟದ ಕೆಲಸ. ಏಕೆಂದರೆ ಅವರಿಗೆ ಸೇಲ್ ಡೀಡ್ ಆಗಿರುತ್ತದೆ. ಖರೀದಿ ಮಾಡಿದಂಥವರು ಅದರಲ್ಲಿ ಹಣವನ್ನು ಹಾಕಿರುತ್ತಾರೆ. ಆ ಜಮೀನನ್ನು ಅಭಿವೃದ್ಧಿ ಮಾಡಿರುತ್ತಾರೆ. ವಾಪಸ್ ಕಿತ್ತುಕೊಳ್ಳತಕ್ಕಂಥದ್ದು ಬಹಳ ಕಷ್ಟದ ಕೆಲಸ. ಆದರೆ ಕಾನೂನನ್ನು ಜಾರಿಗೊಳಿಸಲಿಕ್ಕೆ ಸರ್ಕಾರ ಹಿಂದೆ ಮುಂದೆ ನೋಡುವುದಿಲ್ಲ 1983–84 ರಲ್ಲಿ 10,102 ಜನರಿಗೆ 26,967 ಎಕರೆಭೂಮಿಯನ್ನು ಕೊಡಿಸಿದ್ದೇವೆ. 1984–85 ರಲ್ಲಿ 2890 ಜನರಿಗೆ 37,732 ಎಕರೆ ಜಮೀನನ್ನು ಕೊಡಿಸಿದ್ದೇವೆ. ಒಟ್ಟು 1983–84 ರಿಂದ 1988ರವರೆಗೆ 34,889 ಜನರಿಗೆ 1.14,559 ಎಕರೆ ಜಮೀನನ್ನು ವಾಪಸ್ಸು ಕೊಡಿಸಿದ್ದೇವೆ. ಒಟ್ಟಿನಲ್ಲಿ ಹರಿಜನ ಗಿರಿಜನರ ವಿಚಾರದಲ್ಲಿ ಅವರಿಗೆ ಕಾನೂನು

ಪ್ರಕಾರ ದೊರೆಯತಕ್ಕಂಥ ಹಕ್ಕುಗಳ ಬಗ್ಗೆ ಬಹಳ ಚುರುಕಾಗಿ ಈ ಇಲಾಖೆ ಕೆಲಸ ಮಾಡಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

**ಶ್ರೀ ಕೆ.ಹೆಚ್.ಶ್ರೀನಿವಾಸ್ :** ಒಂದೇ ನಿಮಿಷ

**ಶ್ರೀ ಎಸ್.ಆರ್. ಬೊಮ್ಮಾಯಿ :** ಕ್ಲಾರಿಫಿಕೇಷನ್ ಆಮೇಲೆ ಕೇಳಿ.

**ಶ್ರೀ ಕೆ.ಹೆಚ್. ಶ್ರೀನಿವಾಸ್ :** ಇದರಲ್ಲಿ ತಾವು ಹೇಳುತ್ತಿರತಕ್ಕಂಥದ್ದು ಅಸಿಸ್ಟೆಂಟ್ ಕಮಿಷನರ್ ಲೆವೆಲ್‌ನಲ್ಲಿ ಆರ್ಡರ್ ಆಗಿ ಕಬ್ಜಾ ಕೊಡಬೇಕು. ಎನ್ನುವ ಆಧಾರದ ಮೇಲೆ ಆ ಅಂಕಿ ಸಂಖ್ಯೆಯನ್ನು ಹೇಳುತ್ತಿದ್ದಿರಿ ಎಂದು ನನ್ನ ಭಾವನೆ. ಅದರ ನಂತರ ಏನಾಗಿದೆ ಎಂದರೆ ಸುಪ್ರೀಂಕೋರ್ಟ್ ಆರ್ಡರ್ ಪ್ರಕಾರ ಡೆಪ್ಯೂಟಿ ಕಮಿಷನರ್ ಹತ್ತಿರ ಹೋಗಿ ಎಲ್ಲಾ ಕೇಸುಗಳ ಮೇಲೂ ಸ್ಟೇ ತೆಗೆದುಕೊಂಡು ಬಿಟ್ಟಿದ್ದಾರೆ. ಈ ಮೂಲಕ ಕಬ್ಜಾ ಕೊಟ್ಟಿದ್ದನ್ನು ವಾಪಸ್ಸು ಪೋಲೀಸ್ ಪ್ರೊಟೆಕ್ಷನ್‌ನಿಂದ ತೆಗೆದುಕೊಂಡಿದ್ದಾರೆ. ಇಷ್ಟೇ ಅಲ್ಲದೆ ಕೆಲವು ಕೇಸುಗಳು ಡಿಸ್ಪೋಸ್ ಆಗಿದೆ. ಲ್ಯಾಂಡ್ ಲಾರ್ಡ್ಸ್ ಪರವಾಗಿ ರಿಗ್ರ್ಯಾಂಟ್ ಮಾಡುತ್ತಿದ್ದಾರೆ ಎಂದೂ ನಾನು ಹೇಳುತ್ತೇನೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಈ ಬಗ್ಗೆ ಯಾವುದಾದರೂ ನಿರ್ದಿಷ್ಟ ಉದಾಹರಣೆ ಇದ್ದರೆ ಕೊಡಿ, ಅದನ್ನು ನೋಡುತ್ತೇನೆ. ಸುಪ್ರೀಂ ಕೋರ್ಟು ನಿರ್ಣಯ ಕೂಡಾ ಈ ಕಾನೂನು ಸಿಂಧು ಎಂದಿದೆ. ಹಿಂದೆ ಸುಪ್ರಿಂ ಕೋರ್ಟು ಸ್ಟೇ ಕೊಟ್ಟಿತ್ತು. ಅದಾದ ಮೇಲೆ ಸುಪ್ರಿಂಕೋರ್ಟಿನ ಕೊನೆಯ ನಿರ್ಣಯ ಬಂದಿದೆ. ಅದು ಅಡ್ವರ್ಸ್ ಪೊಸೆಷನ್ ವಿಚಾರ. 12 ವರ್ಷದ ವಿಚಾರ ಎತ್ತಿದರು. 12 ವರ್ಷ ಆದ ಮೇಲೆ ಈ ಕೇಸ್ ಟೈಂ ಬಾರ್ ಆಗಿದೆ. ಇದಕ್ಕೆ ಸರ್ಕಾರದ ಸುತ್ತೋಲೆಯನ್ನು ಕಳುಹಿಸಿದ್ದೇವೆ. ಈ ಜಮೀನನ್ನು ಸರ್ಕಾರ ಗ್ರಾಂಟ್ಮಾಡಿದೆ. ಈ ಗ್ರಾಂಟ್ ಆದ ಜಮೀನುಗಳ ಕಂಡೀಷನ್ಸ್, ಈ ಟರ್ಮ್ಸ್ ಆಫ್ ಗ್ರಾಂಟ್ ಏನು ಇದೆ. ಅದು ಪೂರ್ತಿಗೊಳ್ಳುವವರೆಗೆ ಅದಕ್ಕೆ ಸರ್ಕಾರವೇ ಒಡೆಯ. ಅದು ಆಗುವುದಕ್ಕೆ ಮೂವತ್ತು ವರ್ಷಗಳು ಬೇಕಾಗುತ್ತದೆ. ನಾವು ಈಗಾಗಲೇ ವಿವರಣೆಯನ್ನು ಆ ಕೇಸ್‌ಗಳಿಗೆ ಕೊಟ್ಟು ಬಿಟ್ಟಿದ್ದೇವೆ. ಅದು ಲಿಮಿಟೇಷನ್ ಒಳಗೆ ಬರುವುದಿಲ್ಲ. 12 ವರ್ಷದ ವಿಚಾರ ಹೆಚ್ಚಾಗಿ ಇಲ್ಲಿ ಹತ್ತುವುದಿಲ್ಲ. ನಾವು ಮೂವತ್ತು ವರ್ಷಕ್ಕಿಂತ ಒಳಗೆ ಇರತಕ್ಕಂಥ ಎಲ್ಲಾ ಕೇಸ್‌ಗಳನ್ನು ಕಾನೂನು ಪ್ರಕಾರ ಇತ್ಯರ್ಥ ಮಾಡಬೇಕೆಂದು ಆದೇಶವನ್ನು ಕೊಟ್ಟಿದ್ದೇವೆ. ಇದರ ಬಗ್ಗೆ ಕ್ಲಾರಿಫಿಕೇಷನ್ ಕೂಡಾ ಕೊಟ್ಟಿದ್ದೇವೆ.

**ಶ್ರೀ ಕೆ.ಹೆಚ್. ಶ್ರೀನಿವಾಸ್ :** ಇಲ್ಲಿ ಸರಿ ಇದೆ. ಯಾವುದೂ ತಪ್ಪಿಲ್ಲ. ಅಲ್ಲಿ ಒಂದು ಬುದ್ಧಿವಂತಿಕೆ ಏನಾಗಿದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತೇನೆ. ಸುಪ್ರೀಂ ಕೋರ್ಟಿನಲ್ಲಿ ಡೆಪ್ಯೂಟಿ ಕಮೀಷನರ್‌ಗೆ ಅಪೀಲ್ ಮಾಡುವುದಕ್ಕೆ ಒಂದು

ಪ್ರಾವಿಷನ್ ಇಟ್ಟು ಸ್ಟೇ ಕೊಡುವುದಕ್ಕೆ ಏನು ಒಂದು ಅಧಿಕಾರವನ್ನು ಕೊಟ್ಟರು. ಅದರ ಸಂಪೂರ್ಣ ಉಪಯೋಗವನ್ನು ಹಿಂದಿನ ಭೂಮಾಲೀಕರು ಮಾಡಿಕೊಳ್ಳುತ್ತಿದ್ದಾರೆ. ಡೆಪ್ಯೂಟಿ ಕಮಿಷನರ್‌ಗೆ ಅಪೀಲನ್ನು ಹಾಕಿ ಸ್ಟೇ ತೆಗೆದುಕೊಳ್ಳುವುದು ಮತ್ತು ಪೋಲೀಸರು ಹಿಡಿದುಕೊಂಡು ಹೋಗಿ ಕಬ್ಜಾವನ್ನು ವಾಪಸ್ ತೆಗೆದುಕೊಂಡು ಬಂದು ಕುಳಿತು ಕೊಳ್ಳುವುದು. ಆ ಅಪೀಲ್ ಎಂದೆಂದು ತೀರ್ಮಾನವಾಗುವ ಪ್ರಶ್ನೆಯೇ ಇಲ್ಲ. ಆ ಪರಿಸ್ಥಿತಿ ಇದೆ. ಡೆಪ್ಯೂಟಿ ಕಮೀಷನರ್ ಅವರಿಂದ ಈ ಬಗ್ಗೆ ಅಂಕಿಸಂಖ್ಯೆ ತೆಗೆದುಕೊಂಡು ಎಷ್ಟು ಸ್ಟೇ ಆರ್ಡರ್ ಕೊಟ್ಟಿದ್ದಾರೆ ಎಂದು ಕೇಳಿ. ಆಗ ನಿಮಗೆ ಗೊತ್ತಾಗುತ್ತದೆ.

**ಶ್ರೀ ಆರ್. ವೆಂಕಟರಾಮಯ್ಯ :** ಈ ಜನರಿಗೆ ನೀವು ಕೊಟ್ಟಿರುವ ಜಮೀನನ್ನು ಬೇರೆಯವರು 30 ವರ್ಷಗಳವರೆಗೆ ಕೊಂಡುಕೊಳ್ಳುವುದಕ್ಕೆ ಬರುವುದಿಲ್ಲವೆಂದು ತಾವು ಈಗ ತಾನೇ ಹೇಳಿದಿರಿ ಮತ್ತು ಈ ಬಗ್ಗೆ ಎಲ್ಲ ಅಧಿಕಾರಿಗಳಿಗೂ ಸುತ್ತೋಲೆ ಕಳುಹಿಸಿಕೊಟ್ಟಿರುವುದಾಗಿ ಹೇಳಿದಿರಿ. ಆದರೆ ಈ ಜಮೀನುಗಳಿಗೆ ಸಂಬಂಧಪಟ್ಟಂತೆ ಅನೇಕ ಕೇಸುಗಳು ಹೈಕೋರ್ಟಿನ ಮುಂದಿವೆ. ಇಂತಹ ಜಮೀನುಗಳನ್ನು ಎಸ್.ಸಿ. ಮತ್ತು ಎಸ್.ಟಿ. ಜನರಿಂದ ಖರೀದಿ ಮಾಡಿ 12 ವರ್ಷಗಳಾಗಿ ಬಿಟ್ಟರೆ, ಅಂತಹ ಕೇಸುಗಳನ್ನ ಅಡ್ಮಿಟ್ ಮಾಡಿಕೊಳ್ಳುವುದಕ್ಕೆ ಬರುವುದಿಲ್ಲ. ಟೈಮ್ ಬಾರ್ ಆಗಿದೆ ಎನ್ನುವಂತಹ ವಾದವನ್ನು ಕೆಲವರು ಮಾಡುತ್ತಿದ್ದಾರೆ. ಇದಕ್ಕೆ ತಾವು ಏನು ಹೇಳುತ್ತೀರಿ?

**ಶ್ರೀ ಎಸ್.ಆರ್. ಬೊಮ್ಮಾಯಿ :** ಇಂತಹ ವಾದ ವಿವಾದದ ಕಾರಣ ಈ ಬಗ್ಗೆ ಹೈಕೋರ್ಟಿನಿಂದ ತೀರ್ಮಾನ ಬರುವುದು ತಡವಾಗಿದೆ. ಇಷ್ಟರವರೆಗೆ ಹೈಕೋರ್ಟಿನಲ್ಲಿ ತೀರ್ಮಾನವಾಗಿದ್ದರೆ ಇಂತಹ ಸಮಸ್ಯೆಗಳು ನಮಗೆ ಬರುತ್ತಿರಲಿಲ್ಲ. ಆದರೂ ಈ ಬಗ್ಗೆ ಸರ್ಕಾರ ಏನು ಮಾಡಬೇಕೋ ಅದನ್ನು ಮಾಡಿದೆ. ಹೈಕೋರ್ಟಿನ ಮುಂದೆ ಕೇಸುಗಳಿದ್ದರೆ ಅದು ಅಲ್ಲಿ ಇತ್ಯರ್ಥ ಆಗಬೇಕಾಗುತ್ತದೆ. ಈ ಕೇಸುಗಳ ಬಗ್ಗೆ ಆದಷ್ಟು ಬೇಗ ನಿರ್ಣಯ ಕೊಡಬೇಕೆಂದು ಸರ್ಕಾರ ಅವರಲ್ಲಿ ಕೇಳಿಕೊಳ್ಳುತ್ತದೆ. ಇಂತಹ ಜಮೀನುಗಳನ್ನು ಕೊಂಡುಕೊಂಡವರ ಪೈಕಿ ಎಷ್ಟು ಜನರು ಜಿಲ್ಲಾಧಿಕಾರಿಗಳವರ ಹತ್ತಿರಹೋಗಿ ಅಪೀಲು ಮಾಡಿಕೊಂಡು ಅವರ ಕಡೆಯಿಂದ ಸ್ಟೇ ತೆಗೆದುಕೊಂಡಿದ್ದಾರೆಂಬ ಬಗ್ಗೆ ವಿವರಗಳನ್ನು ತರಿಸಿಕೊಳ್ಳಿ ಎಂದು ಮಾನ್ಯ ಸದಸ್ಯರು ಹೇಳಿದ್ದಾರೆ. ಇದರ ಬಗ್ಗೆ ಸಹ ನಾವು ಯೋಗ್ಯ ಕ್ರಮ ಕೈಗೊಳ್ಳುತ್ತೇವೆ.

ಇನ್ನು ಲ್ಯಾಂಡ್ ರಿಫಾರ್ಮ್ಸ್ ಆಕ್ಟ್ ಕೆಳಗೆ ಇದುವರೆಗೆ ಹೆಚ್ಚುವರಿ ಭೂಮಿ ಎಂದು ಡಿಕ್ಲೇರಾಗಿದ್ದುದು 2,92,458 ಎಕರೆಗಳು. ಇದರ ಪೈಕಿ 1,54,428 ಎಕರೆಗಳನ್ನು ನಾವು ಹಂಚಿಕೆ ಮಾಡಿದ್ದೇವೆ. ಮತ್ತೆ. 1,69,906 ಎಕರೆಗಳಷ್ಟು ಜಮೀನಿನ ಹಂಚಿಕೆ

ಬಗ್ಗೆ ಕೋರ್ಟಿನಲ್ಲಿ ಸ್ಟೇ ಇರುವುದರಿಂದ ನಾವು ಹಂಚಿಕೆ ಮಾಡಲು ಸಾಧ್ಯವಾಗಿಲ್ಲ. ಈ ಬಗ್ಗೆ ಕೋರ್ಟಿನಲ್ಲಿರುವಂತಹ ಕೇಸ್‌ಗಳನ್ನು ತ್ವರಿತಗತಿಯಲ್ಲಿ ಇತ್ಯರ್ಥ ಮಾಡಬೇಕೆಂದು ನಾವು ಅದರಲ್ಲಿ ಕೇಳಿಕೊಳ್ಳುತ್ತಿದ್ದೇವೆ.

ಇನ್ನು ಹಳೆಯ ರೆಕಾರ್ಡ್ಸ್ ಹಾಳಾಗುತ್ತಿವೆ ಎಂದು ಹೇಳಿದ್ದಾರೆ. ಈ ಬಗ್ಗೆ ಮಾನ್ಯ ಸದಸ್ಯರ ವಾದ ಸರಿಯಾಗಿದೆ. ನೂರಾರು ವರ್ಷಗಳ ಹಿಂದಿನ ರೆಕಾರ್ಡ್ಸ್‌ನ್ನು ನಾವು ಕಾಪಾಡಿಕೊಳ್ಳಬೇಕಾಗಿದೆ. ಆದ್ದರಿಂದ ಅಂತಹ ರೆಕಾರ್ಡ್ಸ್‌ನ್ನು ಮೈಕ್ರೋಫಿಲಂ ಮಾಡಿ ಪ್ರಿಜರ್ವ್ ಮಾಡುವುದಕ್ಕೆ ಈ ವರ್ಷದಿಂದ ನಾವು ಪ್ರಯತ್ನ ಮಾಡುತ್ತಿದ್ದೇವೆ.

ಇನ್ನೂ ಲ್ಯಾಂಡ್ ರಿಫಾರ್ಮ್ಸ್ ಆಕ್ಟ್ ಬಗ್ಗೆ ತಿದ್ದುಪಡಿಗಳನ್ನು ತರಬೇಕೆಂದು ಮೇಲಿಂದ ಮೇಲೆ ಈ ಸಭೆಯಲ್ಲಿ ಮಾನ್ಯ ಸದಸ್ಯರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತ ಮಾಡಿದ್ದಾರೆ. ಈ ಬಗ್ಗೆ ಸಾರ್ವಜನಿಕರಿಂದಲೂ ಸಹ ಸರ್ಕಾರಕ್ಕೆ ಸಾಕಷ್ಟು ಬೇಡಿಕೆಗಳು ಬಂದಿವೆ. ಈ ಆಕ್ಟ್‌ನಲ್ಲಿರುವಂತಹ ಲೋಪದೋಷಗಳ ಬಗ್ಗೆ ಮತ್ತು ತೊಂದರೆಗಳ ಬಗ್ಗೆ ಸಾರ್ವಜನಿಕರು ಸರ್ಕಾರದ ಗಮನವನ್ನು ಸೆಳೆದಿದ್ದಾರೆ. ಈ ಆಕ್ಟ್ ಜಾರಿಗೆ ಬಂದ ಮೇಲೆ ರೈತರಿಗೆ ತೊಂದರೆಗಳು ಆಗಿರಬಹುದು. ಭೂ ಒಡೆಯನಿಗೆ ತೊಂದರೆಗಳು ಆಗಿರಬಹುದು. ಹೊಸದಾಗಿ ಭೂಮಿಯನ್ನು ಕೊಂಡವರಿಗೆ ತೊಂದರೆಗಳು ಆಗಿರಬಹುದು. ಈ ಕೆಲವು ತೊಂದರೆಗಳ ಬಗ್ಗೆ ಮಾನ್ಯ ಸದಸ್ಯರು ಇಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಾರೆ. ಆದ್ದರಿಂದ ಇದನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಸಮಗ್ರವಾದಂಥ ತಿದ್ದುಪಡಿಗಳನ್ನು ಮುಂದಿನ ಅಧಿವೇಶನದಲ್ಲಿ ತರುವಂತಹ ವಿಚಾರ ಸರ್ಕಾರಕ್ಕೆ ಇದೆ. ಬಗೆಗೆ ಡ್ರಾಫ್ಟ್ ಬಿಲ್ಲನ್ನು ತಯಾರು ಮಾಡಿ ಈ ಸಭೆಯ ಮುಂದೆ ತಂದಾಗ ಮಾನ್ಯ ಸದಸ್ಯರುಗಳು ತಮ್ಮ ಸಲಹೆಗಳನ್ನು ಕೊಡಬಹುದು.

ಇನ್ನೂ ಲ್ಯಾಂಡ್ ಅಕ್ವಿಜಿಷನ್ ವಿಚಾರದಲ್ಲಿ ಸಹ ಒಂದು ನಿಗದಿತ ಸಮಯದಲ್ಲಿ ಅಂದರೆ ಮೂರು ವರ್ಷಗಳಲ್ಲಿ ಅವಾರ್ಡ್ ಪಾಸಾಗಬೇಕು. ಅವಾರ್ಡ್ ಪಾಸಾದ ಮೇಲೆ ನಾವು ಹಣ ಕೊಡಬೇಕಾಗುತ್ತದೆ. ಹಣ ಕೊಡುವುದು ತಡವಾದರೆ ಸರ್ಕಾರ ಆ ಹಣಕ್ಕೆ ಬಡ್ಡಿ ಕೊಡಬೇಕಾಗುತ್ತದೆ. ಆಗ ಸರ್ಕಾರಕ್ಕೆ ಹೆಚ್ಚಿನ ದೊಡ್ಡಭಾರವಾಗುತ್ತದೆ. ಈ ಲ್ಯಾಂಡ್‌ಅಕ್ವಿಜಿಷನ್‌ಗೆ ಸಂಬಂಧಪಟ್ಟಂತೆ ಅವಾರ್ಡ್ ಆದಂಥ ಹಣ ಸಂಬಂಧಪಟ್ಟವರಿಗೆ ಸರಿಯಾಗಿ ಮುಟ್ಟುವುದಿಲ್ಲ ಎಂದು ದೂರು ಇತ್ತು. ಆದ್ದರಿಂದ ಸರ್ಕಾರ ಇತ್ತಿಚೆಗೆ ಒಂದು ಆಜ್ಞೆ ಮಾಡಿದೆ. ಏನೆಂದರೆ ಈ ಹಣವನ್ನು ಚೆಕ್ಸ್ ಮುಖಾಂತರ ಜಿಲ್ಲಾಧಿಕಾರಿಗಳು ಅಥವಾ ಹಿರಿಯ ಅಧಿಕಾರಿಗಳ

ಕಛೇರಿಯಲ್ಲಿ ಸಾಧ್ಯವಾದರೆ ಶಾಸಕರ ಸಮ್ಮುಖದಲ್ಲಿ ಇಲ್ಲವೇ ಸಾರ್ವಜನಿಕ ಪ್ರತಿನಿಧಿಗಳ ಸಮ್ಮುಖದಲ್ಲಿ ಹಂಚಬೇಕು ಎಂದು ಆದೇಶ ಕೊಟ್ಟಿದ್ದೇವೆ. ಈ ಬಗ್ಗೆ ಅಲ್ಲಿ ಇಲ್ಲಿ ಬಂದಂತಹ ದೂರುಗಳ ಬಗ್ಗೆ ಈಗಾಗಲೇ ನಾವು ಕ್ರಮ ಕೈಗೊಂಡಿದ್ದೇವೆ. ಕೆಲವು ಕಡೆ ಹಣ ಕೊಡತಕ್ಕಂಥಾದ್ದು ನಿಧಾನವಾಗಿದೆ. ಅದರ ಬಗ್ಗೆ ಕೂಡ ಸರ್ಕಾರ ಗಮನಹರಿಸುತ್ತದೆ. ಈ ಭೂಮಿಯನ್ನು ಕಳೆದುಕೊಂಡಂಥ ಜನರಿಗೆ ಆದಷ್ಟು ಬೇಗ ಅದರ ಪರಿಹಾರದೊರಕತಕ್ಕ ಕ್ರಮ ಕೈಗೊಳ್ಳುತ್ತಾ ಇದ್ದೇವೆ. ಕಂದಾಯ ಇಲಾಖೆ ಬಗ್ಗೆ ಇನ್ನೇನೂ ಹೆಚ್ಚಿಗೆ ಹೇಳುವುದಿಲ್ಲ. ಇದು ಹಳೆಯ ಇಲಾಖೆ, ಹಿರಿಯ ಇಲಾಖೆ. ಹಳ್ಳಿಯಿಂದ ದಿಲ್ಲಿಯವರೆಗೆ ಸಂಬಂಧಪಡತಕ್ಕ ಅಂಕಿ ಅಂಶಗಳನ್ನು ರಿಕಾರ್ಡುಗಳನ್ನು ತಯಾರು ಮಾಡತಕ್ಕಂಥ ಈ ಇಲಾಖೆಯಲ್ಲಿ ಎಲ್ಲವೂ ಸರಿಯಾಗಿ ಇದೆ ಎಂದು ನಾನು ಹೇಳುವುದಿಲ್ಲ. ಆದರೆ ಅನೇಕ ಬದಲಾವಣೆಗಳನ್ನು ಮಾಡಿದ್ದೇವೆ. ಇವತ್ತು ಕಛೇರಿಗಳಲ್ಲಿ ಕೆಲಸ ಚೆನ್ನಾಗಿ ನಡೆಯುತ್ತಿದೆ ಎಂದು ನನ್ನ ಭಾವನೆ. ಕೆಲವು ಕಡೆ ಸರಿಯಾಗಿ ನಡೆಯದಿದ್ದರೆ ಅದನ್ನು ಮಾನ್ಯ ಸದಸ್ಯರು ಸರ್ಕಾರದ ಗಮನಕ್ಕೆ ತಂದರೆ ಅದರ ಬಗ್ಗೆ ಉಗ್ರಕ್ರಮ ಕೈಗೊಳ್ಳುವ ಭರವಸೆಯನ್ನು ಕೊಟ್ಟು ಲ್ಯಾಂಡ್ ರಿಫಾರ್ಮ್ಸ್ ಬಗ್ಗೆ ಸಮಗ್ರವಾದಂಥ ತಿದ್ದುಪಡಿಯನ್ನು ತರತಕ್ಕ ವಿಚಾರವನ್ನು ಈ ಸಭೆಗೆ ತಿಳಿಸಿ ನನ್ನ ಉತ್ತರವನ್ನು ಮುಗಿಸುತ್ತೇನೆ.

****

# ನೀರಿನ ಸಮಸ್ಯೆ ಕುರಿತು ಮುಖ್ಯಮಂತ್ರಿಗಳ ಕಳಕಳಿ

ದಿನಾಂಕ: 22.3.1989

**ರಾಜ್ಯದ 17ನೆಯ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡ ಬೊಮ್ಮಾಯಿಯವರ ಮುಂದೆ ಅನೇಕ ಸವಾಲುಗಳಿದ್ದವು. ರಾಜ್ಯದಲ್ಲಿ ತೀವ್ರ ಬರಗಾಲ ಕಾಡುತ್ತಿತ್ತು. ನಜೀರ್ ಸಾಬ್ ರೂಪಿಸಿದ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದರೂ ಕುಡಿಯುವ ನೀರಿನ ಸಮಸ್ಯೆ ಹಾಗೆಯೇ ಉಳಿದು ಅದಕ್ಕೆ ಶಾಶ್ವತ ಪರಿಹಾರ ಕಂಡುಕೊಳ್ಳಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕ ಭಾಗದ ಕುಡಿಯುವ ನೀರಿನ ಸಮಸ್ಯೆಯ ಬಗ್ಗೆ ಬೊಮ್ಮಾಯಿಯವರ ಪ್ರಾಮಾಣಿಕ ಮಾತುಗಳು ಇಲ್ಲಿವೆ.**

**ಶ್ರೀ ಎಸ್.ಆರ್.ಬೊಮ್ಮಾಯಿ:** ಮಾನ್ಯ ಸಭಾಪತಿಗಳೇ ಈ ಕುಡಿಯುವ ನೀರಿನ ಸಮಸ್ಯೆ ಬಿಜಾಪುರ ಮತ್ತು ಬೆಳಗಾಂ ಜಿಲ್ಲೆಯಲ್ಲಿ ಇದೆ. ಇದು ಕೇವಲ ಈ ವರ್ಷ ಹೊಸದಾಗಿ ಬಂದಿರುವುದಲ್ಲ. ಮಳೆ ಕಡಿಮೆಯಾದಾಗ ಈ ಸಮಸ್ಯೆ ಬರುತ್ತದೆ. ಇದಕ್ಕೆ ಎರಡು ವರ್ಷದ ಹಿಂದೆ ನಾವು ಮಹಾರಾಷ್ಟ್ರ ಸರ್ಕಾರಕ್ಕೆ 1 ಕೋಟಿ ರೂಪಾಯಿ ಖರ್ಚು ಮಾಡಿ ನೀರನ್ನು ತೆಗೆದುಕೊಂಡಿರುತ್ತೇವೆ. ಅವರು ನಾವು ಹಣ ಕೊಟ್ಟರೆ ಬಿಡುತ್ತಾರೆ. ಇಲ್ಲದೇ ಹೋದರೆ ಅವರು ಒಪ್ಪುವುದಿಲ್ಲ. ಆದರೆ ಅಲ್ಲಿಂದ ನೀರು ಬಿಟ್ಟರೆ, ಆ ನೀರು ಬಿಜಾಪುರಕ್ಕೆ ಮುಟ್ಟಲೇ ಇಲ್ಲ. ಕಾರಣ ಏನೆಂದರೆ, ದಾರಿಯಲ್ಲಿರತಕ್ಕ ಎಲ್ಲಾ ಪಂಪ್‌ಸೆಟ್‌ನವರು, ಸರ್ಕಾರ ಆಜ್ಞೆ ಮಾಡಿದರೂ ಪೊಲೀಸಿನವರೂ ಹೇಳಿದರೂ ಕೂಡ, ಕುಡಿಯುವ ನೀರಿಗಾಗಿ ನೀರು ಬಿಟ್ಟರೆ, ಆ ನೀರನ್ನು ತಮ್ಮ ಕಬ್ಬಿಗೆ ಹಾಯಿಸಿಕೊಳ್ಳತಕ್ಕ ಪ್ರವೃತ್ತಿ ಬೆಳೆಸಿಕೊಂಡಿದ್ದಾರೆ. ಇದು ರೈತರ ತಪ್ಪು ಎಂದು ಹೇಳುವುದಿಲ್ಲ. ಏಕೆಂದರೆ ಅವರಿಗೂ ಆಸೆ ಇರುತ್ತದೆ. ಆದರೆ ಕುಡಿಯುವ ನೀರಿನ ಸಮಸ್ಯೆ ನಿಭಾಯಿಸಲು ಒಂದು ಕೋಟಿ ರೂಪಾಯಿ ಖರ್ಚು ಮಾಡಿ, ಕುಡಿಯುವ ನೀರನ್ನು ತಂದರೆ, ಈ ನೀರನ್ನು ಈ ರೀತಿಯಾಗಿ ಉಪಯೋಗಿಸಿಕೊಳ್ಳುವುದು ಸರಿಯಲ್ಲ. ಇದರಲ್ಲಿ ಅಲ್ಲಿನ ಜನರ ಸಹಕಾರ ಬೇಕು. ಹಿಂದಿನ ವರ್ಷ 1 ಕೋಟಿ ರೂಪಾಯಿ ಖರ್ಚು ಮಾಡಿ ಕುಡಿಯುವ ನೀರನ್ನು ತಂದಿದ್ದೇವೆ. 23 ಲಕ್ಷದ ವ್ಯವಹಾರ ಇದೆ. ಅದಕ್ಕಾಗಿ ನೀರು ಕೊಡುವುದಿಲ್ಲ ಎಂದು ಅವರು ಹೇಳಿಲ್ಲ. ಮಹಾರಾಷ್ಟ್ರದವರು ನೀರು ಬಿಡದೇ ಇರುವುದು ಈ ಹಣಕ್ಕಾಗಿ ಅಲ್ಲ. ಅವರಿಗೂ ಕಷ್ಟ ಇದೆ. ಕಾರಣ ಅಲ್ಲಿಯೂ ನೀರಿನ ತೊಂದರೆ ಇದೆ. ಅವರಿಗೂ ನೀರು ಬಂದಿಲ್ಲ. ನಾನೇ ಸ್ವತಃ ಮಹಾರಾಷ್ಟ್ರದ ಮುಖ್ಯಮಂತ್ರಿ ಜೊತೆ ಮಾತನಾಡಿ ಹಣದ ವಿಚಾರ ಕೂಡಲೇ

ಕೊಡುತ್ತೇವೆಂದು ಹೇಳಿ ನೀರು ಬಿಡತಕ್ಕ ವಿಚಾರದಲ್ಲಿ ಎರಡು ಸಲ ಮಾತನಾಡಿ ಹೇಳಿದ್ದೇನೆ.

ಈ ಮಾತನ್ನು ಹೇಳಿ ಬಿಡುತ್ತೇನೆ. ಮಾನ್ಯ ಶಂಕರಾನಂದರೂ ಪ್ರಯತ್ನ ಮಾಡಿದ್ದಾರೆ ಎಂಬ ಮಾತನ್ನು ಅವರು ಹೇಳಿದ ಮೇಲೆ ನಾನು ಹೇಳಬೇಕಾಗುತ್ತದೆ. ಮಹಾರಾಷ್ಟ್ರದ ಮುಖ್ಯಮಂತ್ರಿಗಳು ಒಪ್ಪಿಕೊಂಡಿದ್ದನ್ನು ನಾನೇ ಮಾನ್ಯ ಶಂಕರಾನಂದರವರಿಗೆ ತಿಳಿಸಿದ್ದೇನೆ. ಅವರಿಗೆ ತುಂಗಭದ್ರಾದ ಬಗ್ಗೆಯೂ ತಿಳಿಸಿದ್ದೇನೆ. ನಾಲ್ಕು ಸಲ ಮಾತನಾಡಿದ್ದೇನೆ. ಟೆಲಿಗ್ರಾಂ ಕೊಟ್ಟಿದ್ದೇನೆ ಏನೂ ಕಾರ್ಯ ಆಗಿಲ್ಲ ಅದು ಬೇರೆ ವಿಚಾರ.

**ಶ್ರೀ ಟಿ.ಎನ್. ನರಸಿಂಹಮೂರ್ತಿ:** ಕ್ರೆಡಿಟ್ ಯಾರಾದರೂ ತೆಗೆದುಕೊಳ್ಳಿ ಒಟ್ಟಿನಲ್ಲಿ ನೀರು ಕೊಡಿಸಿ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಇದನ್ನು ಹೇಳಬೇಕಾಗಿರಲಿಲ್ಲ. ಆದರೆ ಯಾರೂ ಮಾಡಿದ್ದಾರೆ ಎಂದು ಅವರು ಹೇಳಿದರು. ಅದಕ್ಕಾಗಿ ಹೇಳಬೇಕಾಗುತ್ತದೆ. ನಾನು ಅವರಿಗೆ ಹೇಳಿದ ಮೇಲೆ ಅವರು ಪತ್ರಿಕೆಗೆ ಹೇಳಿಕೆಯನ್ನು ಕೊಟ್ಟಿದ್ದಾರೆ. ಸ್ವಾಗತ ಮಾಡಿದ್ದಾರೆ. ಸಂತೋಷ ಅದಕ್ಕಾಗಿ ದುಃಖ ಏನಿಲ್ಲ. ಮಹಾರಾಷ್ಟ್ರದವರಿಗೆ ಇದಕ್ಕಿಂತ ಹೆಚ್ಚು ನೀರು ಕೊಡುವುದಕ್ಕೆ ಆಗುತ್ತಿಲ್ಲ, ಆಗುವುದಿಲ್ಲ ಎಂದು ಅವರು ಹೇಳಿದ್ದಾರೆ. ನೀರನ್ನು ಯಾವ ದಿವಸ ಬಿಡಬೇಕು, ಯಾವ ಗಾತ್ರದಲ್ಲಿ ಬಿಡಬೇಕು ಹೇಗೆ ಮಾಡಬೇಕು ಎಂಬ ಬಗ್ಗೆ ಸಂಬಂಧಪಟ್ಟ ಇಂಜಿನಿಯರುಗಳಿಗೆ ನಾನು ಹೇಳಿದ್ದೇನೆ. ಮಾನ್ಯ ಸದಸ್ಯರು ಸಲಹೆ ಕೊಟ್ಟ ಹಾಗೆ ಘಟಪ್ರಭಾದ ಹಿಡಕಲ್ ಡ್ಯಾಮ್‌ನಿಂದ ಬಿಜಾಪುರಕ್ಕೆ ನೀರು ಬಿಡಲಾಗಿದೆ. ಬಿಜಾಪುರದ ಸಮಸ್ಯೆಯಲ್ಲಿ ಅಷ್ಟು ತೀವ್ರತೆ ಇಲ್ಲ. ಇನ್ನೂ ಹೆಚ್ಚು ಬೇಕಾದರೆ ಬಿಡತಕ್ಕಂಥ ವ್ಯವಸ್ಥೆ ಮಾಡಬಹುದು.

**ಶ್ರೀ ಹೆಚ್.ಕೆ. ಪಾಟೀಲ್ :** ಘಟಪ್ರಭಾದಿಂದ ನೀರು ಬಿಟ್ಟಿದ್ದಾರೆ ಎಂದು ಹೇಳಿದಿರಿ ಎಷ್ಟು ಕ್ವಾಂಟಿಟಿ ನೀರು ಬಿಟ್ಟರೂ ಅದು ಕೊಲ್ಹಾರ ಬ್ಯಾರೇಜ್‌ನಲ್ಲಿ ನಿಲ್ಲುತ್ತದೆ. ಮೊನ್ನೆ ನಮ್ಮ ಪಕ್ಷದ ಕೆಲಸದ ಸಲುವಾಗಿ ಬಿಜಾಪುರಕ್ಕೆ ಹೋದಾಗ ನಾನು ಅಲ್ಲಿ ನೋಡಿದೆ. ಎರಡೂ ಎರಡುವರೆ ಅಡಿ ನೀರು ಇದೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಇನ್ನೂ ಅವಶ್ಯಕತೆ ಇದ್ದರೆ ಕುಡಿಯುವ ನೀರಿನ ವ್ಯವಸ್ಥೆ ಮಾಡೋಣ ಬಿಜಾಪುರ ಇರಲಿ, ಜಮಖಂಡಿ ಇರಲಿ, ನೀರು ಬಿಡತಕ್ಕ ವ್ಯವಸ್ಥೆ ಮಾಡುತ್ತೇವೆ.

**ಶ್ರೀ ಪಿ.ಆರ್. ಸೊರಗಾವಿ :** ರಾಜ್ಯ ಸರಕಾರ ಏನು ಸಹಾಯ ಮಾಡಿಲ್ಲ. ಕೇಂದ್ರ ಸರಕಾರದ ವತಿಯಿಂದ ಹಣ ಬಂದಿದೆ.

**ಶ್ರೀ ಎಸ್.ಆರ್. ಬೊಮ್ಮಾಯಿ :** ಈ ಸಮಯದಲ್ಲಿ ನಾನು ಹೆಚ್ಚು ಚರ್ಚೆ ಮಾಡುವುದಕ್ಕೆ ಇಷ್ಟಪಡುವುದಿಲ್ಲ ನಾವು ಏನು ಮಾಡಬೇಕು ಅದನ್ನು ಮಾಡಿದ್ದೇವೆ. ಕೇಂದ್ರ ಸರಕಾರ ಏನು ಮಾಡಬೇಕು ಅದನ್ನು ಅವರು ಮಾಡಿದ್ದಾರೆ. ಇವತ್ತೂ ಸಹ ಅವರ ಜೊತೆ ಚರ್ಚೆ ಮಾಡಿದ್ದೇನೆ. ಏನು ಹಣ ಬೇಕು ಅದನ್ನು ಕೊಡುವುದಕ್ಕೆ ಒಪ್ಪಿಕೊಂಡಿದ್ದೇನೆ. ರೈತರ ಕ್ಷೇತ್ರಕ್ಕೆ ಸರಕಾರದ ಸಂಪೂರ್ಣ ಸಹಕಾರ ಇದೆ. ಕೇಂದ್ರ ಸರಕಾರವು ಸಹಾಯ ಮಾಡಿದೆ. ರಾಜ್ಯ ಸರಕಾರವೂ ತನ್ನ ಕರ್ತವ್ಯವನ್ನು ಮಾಡಿದೆ ಇಬ್ಬರೂ ಮಾಡಿದ್ದೇವೆ. ಒಬ್ಬರು ಮಾಡಿದ್ದೇವೆ ಎಂಬುದರಲ್ಲಿ ಅರ್ಥ ಇಲ್ಲ. ಅಲ್ಲಿ ರೈತರೂ ಮುಂದೆ ಬಂದಿದ್ದಾರೆ. ಮಾನ್ಯ ತುಂಗಳ್‌ರವರಿಗೆ ಅಭಿನಂದನೆಯನ್ನು ಸಲ್ಲಿಸಿದ್ದೇನೆ. ಇನ್ನು ಮಹಾರಾಷ್ಟ್ರದಿಂದ ಹತ್ತು ಟಿ.ಎಂ.ಸಿ. ನೀರನ್ನು ಪಡೆದುಕೊಳ್ಳತಕ್ಕಂಥಾ ಒಂದು ಮಾತನ್ನು ಹೇಳಿದ್ದಾರೆ. ಇದರ ಬಗ್ಗೆ ಮಹಾರಾಷ್ಟ್ರ ಸರಕಾರದ ಜೊತೆ ಮಾತನಾಡುತ್ತೇನೆ. ಅವರ ಕಷ್ಟ ಏನಿದೆ. ನಮ್ಮ ಕಷ್ಟ ಏನಿದೆ ನೋಡಿ ಪ್ರಯತ್ನ ಮಾಡುವುದು ಮಾಡುತ್ತೇನೆ. ಇದಕ್ಕಿಂತ ಮುಖ್ಯವಾಗಿ ಕಾಯಂ ಪರಿಹಾರ ಒದಗಿಸತಕ್ಕಂಥಾದ್ದರ ಬಗ್ಗೆ ಆಲೋಚನೆ ಮಾಡಿದ್ದೇನೆ. ಆ ಭಾಗದ ರೈತರಿಗೆ ಅನುಕೂಲ ಆಗಬೇಕಾದರೆ ಮಹಾದಾಯಿ ನೀರನ್ನು ನೀರಾವರಿ ಮತ್ತು ವಿದ್ಯುಚ್ಛಕ್ತಿಗಾಗಿ ಉಪಯೋಗ ಮಾಡಿಕೊಳ್ಳಬೇಕು. ಇದರಿಂದ ಮಲಪ್ರಭಾ ಏರಿಯಾದ ಜನರಿಗೆ ಅನುಕೂಲವಾಗುತ್ತದೆ. ಈ ಬಗ್ಗೆ ಗೋವಾ ಮುಖ್ಯಮಂತ್ರಿಗಳ ಜೊತೆ ಚರ್ಚೆ ಮಾಡಿದ್ದೇನೆ. ನನಗಂತೂ ಬಹಳ ಸಂತೋಷವಾಗಿದೆ. ಒಳ್ಳೆಯ ಸಹಕಾರ ಕೊಡುತ್ತಿದ್ದಾರೆ. ಒಂದು ವಾರದ ಹಿಂದೆ ಮಾತನಾಡಿ ಬಂದಿದ್ದೇನೆ. ವಿದ್ಯುಚ್ಛಕ್ತಿಗಾಗಿ ಮತ್ತು ನೀರಾವರಿಗೆ ಮಹಾದಾಯಿ ನೀರನ್ನು ತರತಕ್ಕಂಥಾದ್ದರ ಬಗ್ಗೆ ಕೊನೆಯ ಒಪ್ಪಿಗೆಗಾಗಿ ಕಾಯಬೇಕಾಗಿದೆ. ಗೋವಾ ಸರಕಾರದವರು ಬಹಳ ಸಿಂಪೆಥಟಿಕ್ ಆಗಿರುವುದರಿಂದ ಬಹಳ ಅನುಕೂಲವಾಗಿದೆ. ಈ ಮಾತುಕತೆ 25 ವರ್ಷಗಳಿಂದ ನಡೆಯುತ್ತಿತ್ತು. ಹೋದ ವಾರ ಅವರ ಜೊತೆ ಮಾತನಾಡಿದಾಗ ಅವರು ಒಪ್ಪಿಗೆ ಕೊಟ್ಟಿದ್ದಾರೆ. ಮಾತುಕತೆಯನ್ನು ಮುಂದುವರೆಸುತ್ತಿದ್ದೇವೆ. ಇವತ್ತಿನ ಪರಿಸ್ಥಿತಿಯೊಳಗೆ ಕುಡಿಯುವ ನೀರಿನ ಬಗ್ಗೆ ಮಹಾರಾಷ್ಟ್ರಕ್ಕೆ ಎಷ್ಟು ಹಣ ಕೊಡಬೇಕು ಅದನ್ನು ಕೊಡುತ್ತೇವೆ. ಅವರಿಂದ ನೀರನ್ನು ತರುತ್ತೇವೆ. ಆದರೆ ನೀರನ್ನು ಬಿಟ್ಟಾಗ ಅಲ್ಲಿ ದಂಡೆಯಲ್ಲಿರತಕ್ಕಂಥ ರೈತರ ಸಹಕಾರ ಬೇಕು. ಕುಡಿಯುವ ನೀರಿಗೆ ಎಷ್ಟು ಬೇಕೋ ಅಷ್ಟನ್ನು ಮೊದಲು ಕೊಟ್ಟು ಉಳಿದಿದ್ದನ್ನು ಅವರ ಜಮೀನಿಗೆ ತೆಗೆದುಕೊಳ್ಳಲಿ ನಮ್ಮ ಮಿತ್ರರ ಸಹಕಾರವು ಸಹ ಇದ್ದದಕ್ಕೆ ಬೇಕು ಎಂದು ಕೇಳುತ್ತೇನೆ.

*****

ಇವೊತ್ತು ರೈತ ಏನಾದರೂ ಮುಳುಗಿ
ಹೋದ ಅಂದರೆ ದೇಶ ಮುಳುಗಿ
ಹೋಗುತ್ತದೆ ಎಂದು ನನ್ನ ಭಾವನೆ. ಇವೊತ್ತು
ರೈತ ಅಂದರೆ ಜಮೀನಿನ ಒಡೆಯನೇ ಅಲ್ಲ.
ಇವೊತ್ತು ರೈತರ ಒಂದು ಆರ್ಥಿಕ ಸ್ಥಿತಿಯ
ಮೇಲೆ ಇಡೀ ಗ್ರಾಮದಲ್ಲಿರತಕ್ಕ ಪ್ರತಿಯೊಬ್ಬ
ಕಾರ್ಮಿಕನ ಅಥವಾ ನಾಗರಿಕನ ಭವಿಷ್ಯ
ಅವಲಂಬಿಸಿರುತ್ತದೆ.

**– ಎಸ್.ಆರ್. ಬೊಮ್ಮಾಯಿ**

# ಸದನದಲ್ಲಿ ಸಂತಾಪ

**ಶ್ರೀ ಬಿ. ಎಸ್. ಯಡಿಯೂರಪ್ಪ (ಉಪ ಮುಖ್ಯಮಂತ್ರಿಗಳು):**

ಮಾಜಿ ಮುಖ್ಯಮಂತ್ರಿ ಎಸ್.ಆರ್.ಬೊಮ್ಮಾಯಿ, ನಮ್ಮ ನಾಡು ಕಂಡಂಥ ಅಪರೂಪದ ಹಿರಿಯ ರಾಜಕಾರಣಿಗಳಲ್ಲೊಬ್ಬರು. ಕರ್ನಾಟಕದಲ್ಲಿ ಕಾಂಗ್ರೆಸ್ಸೇತರ ರಾಜಕಾರಣದಲ್ಲಿ ಬೊಮ್ಮಾಯಿಯವರು ಅಗ್ರಗಣ್ಯ ನಾಯಕರಾಗಿ ತಮ್ಮ ವ್ಯಕ್ತಿತ್ವವನ್ನು ದಾಖಲಿಸಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿ ಕೆಲಸ ಮಾಡುವಂಥ ಯುವಕರಿಗೆ ದೊಡ್ಡದಾದ ಮಾರ್ಗದರ್ಶನವನ್ನು ಮಾಡಿ ನಮಗೆ ದಾರಿದೀಪವಾಗಿದ್ದಾರೆಂದು ಹೇಳುವುದಕ್ಕೆ ಬಯಸುತ್ತೇನೆ. ಸೈದ್ಧಾಂತಿಕ ಖಚಿತತೆ, ಸ್ನೇಹಪರ ನಡೆವಳಿಕೆ, ಅನ್ಯಾಯವಾದಾಗ ಪ್ರತಿಭಟಿಸತಕ್ಕಂಥ ಸಂಘರ್ಷದ ಕಿಚ್ಚು ಬೊಮ್ಮಾಯಿಯವರ ವಿಶೇಷ ಗುಣಗಳಾಗಿದ್ದವು. ತಮಗೆಲ್ಲರಿಗೂ ಗೊತ್ತಿರುವ ಹಾಗೆ, ಎಂ.ಎನ್. ರಾಯ್‌ರವರ ಅನುಯಾಯಿಯಾಗಿ, ರ್‍ಯಾಡಿಕಲ್ ಚಿಂತನೆಗಳಿಂದ ತಮ್ಮ ನಿಲುವುಗಳಿಂದ ಪ್ರಕರಗೊಂಡಿದ್ದ ಬೊಮ್ಮಾಯಿಯವರು, ಧಾರವಾಡ ಜಿಲ್ಲೆಯ ಕುಂದಗೋಳ್‌ದಿಂದ ಬೆಂಗಳೂರಿನವರೆಗೆ, ನಂತರ ರಾಷ್ಟ್ರದ ರಾಜಧಾನಿ ದೆಹಲಿಯವರೆಗೆ ತಮ್ಮದೆ ಹಾದಿಯಲ್ಲಿ ನಡೆದು ತಮ್ಮ ಛಾಪನ್ನು ಮೂಡಿಸಿದಂಥವರು. ರಾಜ್ಯದ ಕೈಗಾರಿಕಾ ಸಚಿವರಾಗಿ, ಕಂದಾಯ ಸಚಿವರಾಗಿ, ಮುಖ್ಯಮಂತ್ರಿಯಾಗಿ ದಕ್ಷ ಆಡಳಿತ ನೀಡಿದವರು. ತದನಂತರ ಕೇಂದ್ರದ ಮಾನವ ಸಂಪನ್ಮೂಲ ಸಚಿವರಾಗಿ ಮತ್ತು ರಾಷ್ಟ್ರಮಟ್ಟದಲ್ಲಿ ಜನತಾಪಕ್ಷದ ಅಧ್ಯಕ್ಷರಾಗಿ ರಾಷ್ಟ್ರ ಮಟ್ಟದಲ್ಲಿ ಕ್ರೀಯಾಶೀಲ ಆಡಳಿತ ಹಾಗೂ ಸಮಚಿತ್ತದ ನಡೆವಳಿಕೆಗಳ ಮೂಲಕ ರಾಷ್ಟ್ರೀಯ ನಾಯಕರ ಸಾಲಿಗೆ ಸೇರಿದವರು ದಿವಂಗತ ಬೊಮ್ಮಾಯಿಯವರು. ಸ್ವಾತಂತ್ರ್ಯ ಚಳವಳಿಯಲ್ಲಿ ಕ್ರಾಂತಿಕಾರಿ ಚಿಂತನೆಗಳೊಂದಿಗೆ, ತಮ್ಮ ವ್ಯಕ್ತಿತ್ವ ಮೆರೆದಿದ್ದ ಬೊಮ್ಮಾಯಿಯವರು, ರೈತರು ಮತ್ತು ಕೃಷಿ ಕಾರ್ಮಿಕರ ಬಗ್ಗೆ ಅಪಾರ ಕಾಳಜಿ ವಹಿಸಿ ನಿರಂತರ ಹೋರಾಟ ಮಾಡಿಕೊಂಡು ಬಂದಿರುವಂಥದ್ದು ನಮಗೆ ಗೊತ್ತಿದೆ. ಐತಿಹಾಸಿಕ ನರಗುಂದ - ನವಲಗುಂದ, ರೈತರ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿ ಬೊಮ್ಮಾಯಿಯವರು ರೈತರ ನ್ಯಾಯೋಚಿತ ಅಗತ್ಯಗಳಿಗೆ ಸರ್ಕಾರಗಳು ಸ್ಪಂದಿಸುವಂತೆ ಧೀರೋದ್ಧಾತ್ತವಾಗಿ ಹೋರಾಟ ಮಾಡಿದಂಥವರು. ವಿಧಾನ ಪರಿಷತ್ತು ಮತ್ತು ವಿಧಾನ ಸಭೆ ಎರಡೂ ಸದನಗಳಲ್ಲೂ ವಿರೋಧ ಪಕ್ಷದ ನಾಯಕರಾಗಿ ಕೆಲಸ ನಿರ್ವಹಿಸಿದ ಹೆಗ್ಗಳಿಕೆ ಅವರದು. ಹಾಗೆಯೇ ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಜನತಾ ಪಕ್ಷದ ಅಧ್ಯಕ್ಷ ರಾಗಿ, ಸಮನ್ವಯದ ರಾಜಕಾರಣದ ಮೂಲಕ ಪಕ್ಷಾತೀತವಾಗಿ

ಪ್ರಭಾವ ಬೀರಿದ್ದ ಸುಸಂಸ್ಕೃತ ಹಾಗೂ ಸಜ್ಜನ ನಾಯಕರಾಗಿದ್ದರು. ರಾಷ್ಟ್ರಪತಿ ಆಡಳಿತ ಹೇರುವ ಮೂಲಕ ರಾಜ್ಯ ಸರ್ಕಾರಗಳನ್ನು ಮಣಿಸುವ ಕೇಂದ್ರ ಸರ್ಕಾರಗಳ ಹುನ್ನಾರವನ್ನು ತಡೆಗಟ್ಟಲು ಬೊಮ್ಮಾಯಿಯವರು, ಸುಪ್ರೀಂಕೋರ್ಟಿನಲ್ಲಿ ತಮ್ಮ ಸರ್ಕಾರದ ವಜಾ ವಿರುದ್ಧ ಸಲ್ಲಿಸಿದ ಮನವಿಯ ಮೂಲಕ ಐತಿಹಾಸಿಕ ಒಂದು ತೀರ್ಪು ಹೊರಗೆ ಬರುವುದಕ್ಕೆ ಕಾರಣಕರ್ತರಾದರು. ಇಡೀ ದೇಶದಲ್ಲಿ ಈ ರೀತಿ ವಿಧಾನ ಸಭೆ ಗೊಂದಲಗಳು ಉಂಟಾದ ಸಂದರ್ಭದಲ್ಲಿ ಐತಿಹಾಸಿಕ ತೀರ್ಪು, ಸಂವಿಧಾನದ 356ನೇ ವಿಧಿ ದುರುಪಯೋಗವಾಗದಂತೆ, ನಿಯಂತ್ರಣ ಹೇರುವಲ್ಲಿ ಇವರ ಐತಿಹಾಸಿಕ ತೀರ್ಪು ನೆರವಾಗಿದೆ ಎಂಬುದು ತಮಗೆ ಗೊತ್ತಿದೆ. ಅಂತೆಯೆ ಬೊಮ್ಮಾಯಿರವರಿಗೆ ಚರಿತ್ರೆಯಲ್ಲಿ ಶಾಶ್ವತವಾದ ಸ್ಥಾನವನ್ನು ದೊರಕಿಸಿ ಕೊಟ್ಟಿದೆ. ಇಂಥ ವಿಶಿಷ್ಟ ನಾಯಕನ ನಿಧನದಿಂದಾಗಿ ಪ್ರಗತಿಪರ ಮತ್ತು ಪ್ರಜಾಪ್ರಭುತ್ವವಾದಿ ಚಿಂತಕರೊಬ್ಬರನ್ನು ಕಳೆದುಕೊಂಡಂತಾಗಿದೆ.

## ಶ್ರೀ ಎನ್. ಧರ್ಮಸಿಂಗ್, ವಿರೋಧ ಪಕ್ಷದ ನಾಯಕರು

ನಮಗೆ ಕುರ್ಚಿ ಸಿಗಬಹುದು ಅಥವಾ ಸಿಗದೇ ಇರಬಹುದು ಅದು ಮುಖ್ಯವಲ್ಲ. ಆದರೆ, ಅವಕಾಶ ಸಿಕ್ಕಂಥ ಸಂದರ್ಭದಲ್ಲಿ ಯಾವ ರೀತಿಯಾದ ರಾಜಕಾರಣ ಮಾಡಬೇಕಾಗುತ್ತದೆಂಬುದನ್ನು ಸಹ ನಾವು ಕಲಿಯಬೇಕಾಗುತ್ತದೆ. ಉತ್ತರ ಕರ್ನಾಟಕ ಭಾಗದ ಅಭಿವೃದ್ಧಿ ಕೆಲಸಗಳನ್ನು ಮಾನ್ಯ ಬೊಮ್ಮಾಯಿಯವರು ಮಾಡಿದ್ದಾರೆ. ಮತ್ತೆ ಕಂದಾಯ ಮತ್ತು ಪ್ಲಾನಿಂಗ್ ಮಿನಿಸ್ಟರ್ ಆಗಿದ್ದಂಥ ಸಂದರ್ಭದಲ್ಲಿ ಸಾಕಷ್ಟು ವಿಷಯಗಳ ಬಗ್ಗೆ ಹೆಚ್ಚಿನ ಒತ್ತು ಕೊಟ್ಟು ಕೆಲಸವನ್ನು ಮಾಡಿದ್ದಾರೆ. ಹಾಗೆಯೇ ಅವರಲ್ಲಿ ವಿಶೇಷವಾದಂಥ ವ್ಯಕ್ತಿತ್ವ ಇತ್ತು. ಈ ರಾಜ್ಯದ ಮುಖ್ಯಮಂತ್ರಿಯಾಗಿ ಕೆಲಸ ಮಾಡತಕ್ಕಂಥ ಜವಾಬ್ದಾರಿ ಅವರಿಗೆ ಕೊನೆಯಲ್ಲಿ ಸಿಕ್ಕಿತ್ತು. ಆ ಸಂದರ್ಭದಲ್ಲಿ ಅವರು ಸಾಕಷ್ಟು ಜವಾಬ್ದಾರಿಯುತವಾಗಿ ಕೆಲಸ ಮಾಡಿದ್ದಾರೆ. ನಾವುಗಳು ಒಬ್ಬ ವ್ಯಕ್ತಿಯ ಬಗ್ಗೆ ಸಂತಾಪ ಮಾಡತಕ್ಕಂಥ ಸಂದರ್ಭದಲ್ಲಿ ಅವರ ಬಗ್ಗೆ ಬಹಳಷ್ಟು ಮಾತುಗಳನ್ನು ಆಡುತ್ತೇವೆ. ಆದರೆ, ಅವರು ಇದ್ದಾಗ ನಾವು ಸಾಕಷ್ಟು ಸಹಕಾರವನ್ನು ಕೊಡುವುದಿಲ್ಲ. ಇದು ನಮ್ಮ ದೇಶದಲ್ಲಿ ಬೆಳೆದು ಬಂದಂಥ ಒಂದು ಪದ್ಧತಿ ಮತ್ತು ಪ್ರವೃತಿ ಕೂಡ ಆಗಿದೆ. ಆದ್ದರಿಂದ, ನಾವು ಮೊದಲೇ ಹೇಳಿದಾಗೆ ideological bases ರಾಜಕಾರಣ ಆಗಬೇಕು. ಇದರಿಂದ ರಾಜ್ಯದಲ್ಲಿ ಒಂದು ರೀತಿಯ ವಾತಾವರಣ ನಿರ್ಮಾಣವಾಗಬೇಕಾಗುತ್ತದೆ. ಇತ್ತೀಚಿನ ದಿವಸಗಳಲ್ಲಿ ನಡೆಯತಕ್ಕಂಥ ಘಟನೆಗಳನ್ನು ತೆಗೆದುಕೊಂಡಾಗ ಮಾನ್ಯ

ಬೊಮ್ಮಾಯಿರವರ ಮಾರ್ಗದರ್ಶನ ಈ ರಾಜ್ಯಕ್ಕೆ ಬೇಕಾಗಿತ್ತು. ಆದರೆ, ಶ್ರೀಯುತರನ್ನು, ನಾವು ಕಳೆದುಕೊಂಡಿದ್ದೇವೆ. ವಿಶೇಷವಾಗಿ ಪ್ರಗತಿಪರ ಮತ್ತು ವಿಚಾರಧಾರೆ ಹೊಂದಿರತಕ್ಕಂಥ ಜನರಿಗೂ ಕೂಡ ಇವರ ಅಗಲಿಕೆಯಿಂದ ವಿಶೇಷವಾದಂಥ ಹಾನಿಯಾಗಿದೆ ಎಂಬ ಮಾತನ್ನು ಹೇಳುತ್ತಾ ನನ್ನ ಸಂತಾಪ ಸೂಚನೆಯನ್ನು ವ್ಯಕ್ತಪಡಿಸುತ್ತೇನೆ.

**ಶ್ರೀ ಸಿದ್ದರಾಮಯ್ಯ (ಚಾಮುಂಡೇಶ್ವರಿ)**

ಶ್ರೀ ಎಸ್.ಆರ್. ಬೊಮ್ಮಾಯಿಯವರು ಕರ್ನಾಟಕದಲ್ಲಿ ಬಹಳ ದೀರ್ಘಕಾಲ ರಾಜಕಾರಣ ಮಾಡಿದಂತಹ ಒಬ್ಬ ರಾಷ್ಟ್ರ ಮಟ್ಟದ ರಾಜಕಾರಣಿಯಾದ ಅವರು ನಮ್ಮನ್ನು ಬಿಟ್ಟು ಅಗಲಿದ್ದಾರೆ. ಇಲ್ಲಿ ಅನೇಕ ಜನ ನಮ್ಮ ಸ್ನೇಹಿತರುಗಳು ಬೊಮ್ಮಾಯಿಯವರು ಮುಖ್ಯಮಂತ್ರಿಯಾಗಿದ್ದಾಗ ಅವರ ಮಂತ್ರಿಮಂಡಲದಲ್ಲಿ ಮಂತ್ರಿಗಳಾಗಿದ್ದರು. ಶ್ರೀ ಆರ್.ವಿ. ದೇಶಪಾಂಡೆ, ಶ್ರೀ ಎಂ.ಪಿ. ಪ್ರಕಾಶ್, ಶ್ರೀ ಪಿ.ಜಿ. ಆರ್. ಸಿಂಧ್ಯಾ, ತಾವು ಕೂಡ ಮಂತ್ರಿಗಳಾಗಿದ್ದೀರಿ. ನೀವು ಕೂಡ ನಮ್ಮ ಜೊತೆಯಲ್ಲಿ ಮಂತ್ರಿಗಳಾಗಿದ್ದೀರಿ. ನೀವು ನಮ್ಮನ್ನು ಈಗ ಮರೆತುಬಿಟ್ಟಿದ್ದೀರಿ. ಇಲ್ಲಿ ಬಹಳ ಜನರು ಮಂತ್ರಿಗಳಾಗಿದ್ದಾರೆ, ಅವರು ಕರ್ನಾಟಕ ಕಂಡಂತಹ ಒಬ್ಬ ಅಪರೂಪದ ರಾಜಕಾರಣಿಯಾಗಿದ್ದರು. ಅವರು ಇಡೀ ರಾಜಕೀಯ ಬದುಕಿನಲ್ಲಿ ಬಹಳ ದೀರ್ಘಕಾಲ ಕರ್ನಾಟಕ ರಾಜಕಾರಣದಲ್ಲಿದ್ದರೂ ಕೂಡ ಯಾವತ್ತು ಕೂಡ ಅವರು ನಂಬಿದಂತಹ ಪ್ರತಿಪಾದನೆ ಮಾಡಿದಂತಹ ತತ್ವ ಸಿದ್ಧಾಂತಗಳಲ್ಲಿ ರಾಜೀ ಮಾಡಿಕೊಂಡವರಲ್ಲ. ಬಹಳ ದೀರ್ಘಕಾಲ ಕಾಂಗ್ರೆಸ್ಸೇತರ ರಾಜಕಾರಣ ಮಾಡಿಕೊಂಡು ಬಂದಿದ್ದಾರೆ. ಕೊನೆಯವರೆಗೂ ಕೂಡ ಹಾಗೆಯೇ ಉಳಿದುಕೊಂಡು ಬಂದರು. ಅವರು ಸಾಯುವವರೆಗೂ ಕೂಡ ಅದೇ ರೀತಿಯ ರಾಜಕಾರಣವನ್ನು ಮಾಡಿಕೊಂಡು ಬಂದರು. ಅವರು ಯಾವತ್ತೂ ಕೂಡ ರಾಜೀ ಮಾಡಿಕೊಳ್ಳುವಂತಹ ಪ್ರಯತ್ನವನ್ನು ಮಾಡಲಿಲ್ಲ. ಆ ದಿಕ್ಕಿನಲ್ಲಿ ಅವರು ಹೋಗಲಿಲ್ಲ. ಎಲ್ಲೂ ಕೂಡ ಅವರು ಪಕ್ಷಾಂತರ ಮಾಡಿದಂತಹ ನಿದರ್ಶನಗಳು ಅವರ ರಾಜಕೀಯ ಜೀವನದಲ್ಲಿ ಎಲ್ಲೂ ಕೂಡ ಇಲ್ಲ. ಮಾನ್ಯ ಬೊಮ್ಮಾಯಿಯವರು ಶ್ರೀ ಎಂ.ಎನ್.ರಾಯ್‌ರವರ ಹಿಂಬಾಲಕರಾಗಿದ್ದರು. Radical Democratic Party ಸದಸ್ಯರಾಗಿದ್ದರು. ಹಾಗಾಗಿ ಅವರು ವೈಚಾರಿಕತೆಯನ್ನು ಕೂಡ ಮೈಗೂಡಿಸಿಕೊಂಡಿದ್ದರು. ಯಾವುದೇ ವಿಷಯದಲ್ಲಿ ಸ್ಪಷ್ಟತೆಯೂ ಇತ್ತು. ಸಿದ್ಧಾಂತದಲ್ಲಿ ಸ್ಪಷ್ಟತೆ ಇತ್ತು. ತತ್ವ ಮತ್ತು ನೀತಿಗಳ ಬಗ್ಗೆಯು ಬಹಳ ಸ್ಪಷ್ಟವಾಗಿತ್ತು. ಇವತ್ತು ಆ ಕಾರಣದಿಂದಲೇ ಕರ್ನಾಟಕದ ರಾಜಕಾರಣದಲ್ಲಿ

ಅವರಿಗೆ ಒಂದು ಅಪಾರವಾದ ಗೌರವವಿದೆ, ನಾವೆಲ್ಲರೂ ಅವರನ್ನು ಗೌರವಿಸುತ್ತಿದ್ದೇವೆನ್ನುವಂತಹ ಮಾತನ್ನು ಈ ಸಂದರ್ಭದಲ್ಲಿ ಹೇಳಬೇಕಾಗುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿ ಕೇಂದ್ರ ಸರ್ಕಾರದಲ್ಲಿ ಮಾನವ ಸಂಪನ್ಮೂಲ ಸಚಿವರಾಗುವವರೆಗೂ ಅವರು ಬೆಳೆದಿದ್ದರು. ಇಲ್ಲಿ 4 ಸಾರಿ, ಈ ಮನೆಯ ಸದಸ್ಯರಾಗಿದ್ದರು. ಮೇಲ್ಮನೆಯ ಸದಸ್ಯರಾಗಿದ್ದರು, 2 ಬಾರಿ ರಾಜ್ಯ ಸಭಾ ಸದಸ್ಯರಾಗಿದ್ದರು. ಇಲ್ಲಿರುವಂತಹ ಕೆಳಮನೆ, ಮೇಲ್ಮನೆ, ರಾಜ್ಯಸಭಾ ಮತ್ತು ಲೋಕಸಭಾ ಎಲ್ಲಾ ಕಡೆಗಳಲ್ಲೂ ಕೆಲಸ ಮಾಡುವಂತಹ ಒಂದು ಅವಕಾಶ ಅವರಿಗೆ ದೊರಕಿತ್ತು ಎಂಬುದನ್ನು ನಾವು ನೆನೆದುಕೊಳ್ಳಬೇಕಾಗುತ್ತದೆ. ಅವರು ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯಿಂದ ಬಂದವರಾಗಿದ್ದರು ಅವರು ಮಂತ್ರಿಯಾಗಿರುವಾಗ, ಮುಖ್ಯಮಂತ್ರಿಯಾಗಿರುವಾಗ, ಉತ್ತರ ಕರ್ನಾಟಕದ ಅಭಿವೃದ್ಧಿಗಾಗಿ ಬಹಳಷ್ಟು ಶ್ರಮಿಸಿದರು ಎಂಬುದನ್ನು ನಾವು ನೆನೆದುಕೊಳಬೇಕಾಗುತ್ತದೆ. ಬಹುಶಃ ಅವರು ಮಂತ್ರಿಯಾಗಿರುವಾಗ, ಮುಖ್ಯಮಂತ್ರಿಯಾಗಿರುವಾಗಲೂ ಕೂಡ ಯಾವಾಗಲೂ ಉತ್ತರ ಕರ್ನಾಟಕ ಮತ್ತು ಇಡೀ ರಾಜ್ಯದ ಅಭಿವೃದ್ಧಿಯಾಗಬೇಕೆಂದು, ಅದರಲ್ಲೂ ವಿಶೇಷವಾಗಿ ರೈತರು, ನೀರಾವರಿ, ಹಳ್ಳಿಗಾಡಿನ ಅಭಿವೃದ್ಧಿ ಇವುಗಳ ಬಗ್ಗೆ ಹೆಚ್ಚು ಕಾಳಜಿಯನ್ನು ಇಟ್ಟುಕೊಂಡಂತಹ ಒಬ್ಬ ನಾಯಕ ಎಂಬುದನ್ನು ಇವತ್ತು ನಾವು ಸ್ಮರಿಸಿಕೊಳ್ಳಬೇಕಾಗುತ್ತದೆ. ಅವರು ಕೇಂದ್ರದಲ್ಲಿ ಮಾನವ ಸಂಪನ್ಮೂಲ ಸಚಿವರಾಗಿದ್ದಾಗ ಅಪಾರವಾದಂತಹ ಕೆಲಸವನ್ನು ಮಾಡಿದ್ದರು. ಬಹುಶಃ ಒಂದು constitution ಗೆ ಬಿಲ್ ತರುವಂತಹ ಪ್ರಯತ್ನವನ್ನು ಕೂಡ ಅವರು ಮಾಡಿದ್ದರು. ಎಜುಕೇಷನ್ ಸಂಬಂಧ ಪಟ್ಟ ಹಾಗೆ ಪ್ರಾಥಮಿಕ ಶಿಕ್ಷಣಕ್ಕೆ ಏನು ನಾವು ರಾಜ್ಯಾಂಗದಲ್ಲಿ 14 ವರ್ಷದೊಳಗಿರುವವರಿಗೆ ಎಲ್ಲರಿಗೂ ಕಡ್ಡಾಯವಾಗಿ ಶಿಕ್ಷಣವನ್ನು ಕೊಡಬೇಕೆಂದು ನಾವು ಏನು ಮಾಡಿಕೊಂಡಿದ್ದೇವೆ. ಅದಕ್ಕನುಗುಣವಾಗಿ Right to Education ಎನ್ನುವಂತಹ ಒಂದು ಅದು ಮೂಲಭೂತ ಹಕ್ಕು ಆಗಬೇಕೆಂಬುದರ ಬಗ್ಗೆ ಬಹಳಷ್ಟು ಪ್ರಯತ್ನವನ್ನು ಮಾಡಿದರು ಎನ್ನುವುದು ಕೂಡ ಇವತ್ತು ನೆನೆದುಕೊಳ್ಳಬೇಕಾಗುತ್ತದೆ. ದೇಶದಲ್ಲಿ ಎಲ್ಲರಿಗೂ ಕೂಡ ಶಿಕ್ಷಣ ಸಿಗಬೇಕು, ಎಲ್ಲರೂ ಕೂಡ ನಾಗರಿಕರಾಗಿ ಬದುಕಬೇಕು, ಎಲ್ಲರೂ ಕೂಡ ಸಮಾನರಾಗಿ ಬದುಕುವುದಕ್ಕೆ ಜ್ಞಾನ ಸಿಗಬೇಕು, ಸಮಾಜದಲ್ಲಿ ಶೋಷಣೆಯಿಂದ ಹೊರಬರುವಂತಹ ಶಕ್ತಿ ಎಲ್ಲರಿಗೂ ಬರಬೇಕೆನ್ನುವಂತಹ ಕಾರಣಕ್ಕೋಸ್ಕರ ಇಂತಹ ಒಂದು ಪ್ರಯತ್ನವನ್ನು ಮಾಡಿದರು ಎನ್ನುವಂತಹದ್ದು ಇವತ್ತು ನೆನೆದುಕೊಳ್ಳಬೇಕಾಗುತ್ತದೆ. ಅವರು ಕರ್ನಾಟಕದಲ್ಲಿ ಬಹಳಷ್ಟು ಆದರ್ಶಗಳನ್ನು ಬಿಟ್ಟುಹೋಗಿದ್ದಾರೆ. ಇದಕ್ಕಿಂತಲೂ ಮುಖ್ಯವಾಗಿ ಒಂದನ್ನು ನೆನೆದುಕೊಳ್ಳಬೇಕಾಗುತ್ತದೆ, ಅವರು ಮುಖ್ಯಮಂತ್ರಿಯಾಗಿದ್ದಾಗ ಏನು ಕಾನೂನು

ಬಾಹಿರವಾಗಿ ಅವತ್ತು ಸರ್ಕಾರ ರಾಜ್ಯಾಂಗ ಬದ್ಧವಾಗಿ ಡಿಸ್‌ಮಿಸ್ ಆಗಿತ್ತು. ಆ ಸಂದರ್ಭದಲ್ಲಿ ಸುಪ್ರೀಂ ಕೋರ್ಟಿಗೆ ಹೋಗಿ, ಇವತ್ತು Supreme Court has a laid down a law in Bommai case. ಆದರೆ ಇವತ್ತು ಕೂಡ ಇಂತಹ ಪರಿಸ್ಥಿತಿ ನಿರ್ಮಾಣವಾದಾಗ ಅದು ಇವತ್ತು ಕಾನೂನಾಗಿ ನಾವು ಅವುಗಳೆಲ್ಲವನ್ನು ನೋಡುತ್ತಿದ್ದೇವೆ. ಅದು ಮಾರ್ಗದರ್ಶನವಾಗುತ್ತಿದೆ, ಅಂತಹ ಸನ್ನಿವೇಶಗಳು ಬಂದಾಗ ಏನು ಮಾಡಬೇಕು, ಬಹುಶಃ ಅದು ಇಲ್ಲದೆ ಹೋಗಿದ್ದರೆ ಅದು ರಾಜ್ಯಾಂಗ ಬಾಹಿರವಾಗಿ ಆಗದೆ ಇದ್ದರೆ ಬಹುಶಃ ಅವರು ಪೂರ್ಣಾವಧಿ ಮುಖ್ಯಮಂತ್ರಿಯಾಗಿ ಮುಂದುವರಿಯುತ್ತಿದ್ದರು. ಅದು ತಪ್ಪಿತ್ತು ಎಂಬುವುದನ್ನು ನಾವು ಕೂಡ ನೋಡಬೇಕಾಗುತ್ತದೆ. ಅವರು ಬಹಳ ಕಡಿಮೆ ಅವಧಿಯಲ್ಲಿ ಅಂದರೆ 10–11 ತಿಂಗಳುಗಳ ಕಾಲ ಮುಖ್ಯಮಂತ್ರಿಯಾಗಿದ್ದರು. ಇವತ್ತು ಅವರ ಕೊಡುಗೆ ಕರ್ನಾಟಕಕ್ಕೆ ಅಪಾರವಾಗಿದೆ. ಇದು ಕರ್ನಾಟಕಕ್ಕೆ ಅಷ್ಟೇ ಅಲ್ಲ, ದೇಶಕ್ಕೂ ಕೂಡ ಅವರ ಕೊಡುಗೆ ಅಪಾರವಾಗಿದೆ. ಜನತಾಪಕ್ಷವನ್ನು ಕಟ್ಟಿ ಬೆಳೆಸುವುದಕ್ಕೆ ಅವರು ಒಬ್ಬ ಪ್ರಮುಖ pillar ಆಗಿದ್ದರು; one of the pillars. ಜನತಾ ಪಾರ್ಟಿಯನ್ನು ಕಟ್ಟುವುದಕ್ಕೆ, ಜನತಾದಳವನ್ನು ಕಟ್ಟುವುದಕ್ಕೆ ರಾಷ್ಟ್ರಮಟ್ಟದ ಅಧ್ಯಕ್ಷರಾಗಿ ಆ ಪಕ್ಷವನ್ನು ಬೆಳೆಸುವುದಕ್ಕೆ, ಆ ಪಕ್ಷವನ್ನು ಕಟ್ಟುವುದಕ್ಕೆ ಬಹಳ ಪ್ರಯತ್ನವನ್ನು ಅವರು ಮಾಡಿದ್ದರು. ಅವರು ಇದ್ದಾಗಲೇ ವಿ.ಪಿ.ಸಿಂಗ್‌ರವರು ಪ್ರಧಾನಮಂತ್ರಿಯಾದರು ಎಂಬುದನ್ನು ಕೂಡ ನಾವು ನೆನೆದುಕೊಳ್ಳಬೇಕಾಗುತ್ತದೆ. ಈ ಎಲ್ಲಾ ಕೊಡುಗೆಗಳು ಅಪಾರವಾಗಿದೆ, ಅವೆಲ್ಲವನ್ನು ನಾವುಗಳು ಸ್ಮರಿಸಿಕೊಳ್ಳುತ್ತಾ ಅವರ ಆತ್ಮಕ್ಕೆ ಚಿರಶಾಂತಿ ಸಿಗಲಿ, ಅವರ ಆದರ್ಶಗಳು ಯುವಪೀಳಿಗೆಗೆ ಮಾರ್ಗದರ್ಶಕವಾಗಲಿ ಎಂದು ಹೇಳಿ ಈ ಸಂದರ್ಭದಲ್ಲಿ ನಾನು ನೆನೆಸಿಕೊಳ್ಳುತ್ತಾ ಅವರ ಕುಟುಂಬ ವರ್ಗದವರೆಲ್ಲರಿಗೂ ಕೂಡ ಶಾಂತಿ ದೊರಕಲಿ, ಅವರ ಸಾವಿನಿಂದ ಆದ ದುಃಖವನ್ನು ಭರಿಸುವಂತಹ ಶಕ್ತಿ ಬರಲಿ ಎಂದು ನಾನು ಪ್ರಾರ್ಥನೆ ಮಾಡುತ್ತೇನೆ.

**ಶ್ರೀ ಎಂ.ಪಿ. ಪ್ರಕಾಶ್ (ಹೂವಿನ ಹಡಗಲಿ):**

ಮಾನ್ಯ ಅಧ್ಯಕ್ಷರೇ, ನಾನಾಗಲಿ, ಸಿಂಧ್ಯಾರವರಾಗಲಿ, ಸಿದ್ದರಾಮಯ್ಯನವರಾಗಲಿ, ದೇಶಪಾಂಡೆಯವರಾಗಲಿ, ನಾವೆಲ್ಲರೂ ಕೂಡ ಸನ್ಮಾನ್ಯ ಬೊಮ್ಮಾಯಿಯವರ ಮಂತ್ರಿಮಂಡಲದಲ್ಲಿ ಕೆಲಸವನ್ನು ಮಾಡಿದಂಥವರು. ಅವರ ನಾಯಕತ್ವದಲ್ಲಿ ರೂಪಗೊಂಡಂಥವರು ಕೂಡ. ಆ ದೃಷ್ಟಿಯಿಂದ ಇದೊಂದು ಅಕಾಲಿಕ ಮರಣ ಎಂದು ಹೇಳುವುದಕ್ಕಿಂತ ಹೆಚ್ಚಾಗಿ ಅವರು ತಮ್ಮ ಇಳಿವಯಸ್ಸಿನಲ್ಲಿ ಅನಾರೋಗ್ಯದ

ಕಾರಣಕ್ಕಾಗಿ ಅಸುನೀಗಿದ್ದು ತಮಗೆಲ್ಲರಿಗೂ ಗೊತ್ತಿದೆ. ಸಾವು ಎಲ್ಲರ ಮನೆಯ ಬಾಗಿಲನ್ನು ತಟ್ಟುತ್ತದೆ ಎನ್ನುವ ವಿಷಯವು ಎಲ್ಲರಿಗೂ ಗೊತ್ತಿರುವಂಥದ್ದೆ. ಆದರೆ ಇಂತಹ ಒಂದು ಶ್ರದ್ಧಾಂಜಲಿಯ ಸಂದರ್ಭದಲ್ಲಿ ನಾವು ಅವರ ಬಗ್ಗೆ ಅವರ ವ್ಯಕ್ತಿತ್ವದ ಬಗ್ಗೆ ಅವರು ಈ ಕರ್ನಾಟಕ ರಾಜ್ಯಕ್ಕೆ ಮತ್ತು ಈ ದೇಶಕ್ಕೆ ಕೊಟ್ಟಿರುವಂಥ ಕೊಡುಗೆಯ ಬಗ್ಗೆ ನಾಲ್ಕು ಮಾತುಗಳನ್ನು ಹೇಳಲೇಬೇಕಾಗುತ್ತದೆ. ಅದಕ್ಕಾಗಿ ನಮ್ಮ ಶ್ರದ್ಧಾಂಜಲಿಯನ್ನು ಸಮರ್ಪಿಸಬೇಕಾಗುತ್ತದೆ. ಮಾನ್ಯ ಬೊಮ್ಮಾಯಿಯವರು ಕಾಂಗ್ರೆಸ್ಸೇತರ ಸರ್ಕಾರವನ್ನು ರಚನೆ ಮಾಡತಕ್ಕಂಥದ್ದಕ್ಕೆ ಕಾಂಗ್ರೆಸ್ಸೇತರ ರಾಜಕೀಯವನ್ನು ಅವರು ಬಹು ದಿನಗಳಿಂದಲೂ ಕೂಡ ಅದನ್ನು ನೆರವೇರಿಸುವ ಸಲುವಾಗಿ 1967 ರಿಂದ ಸತತವಾಗಿ ಹೋರಾಟವನ್ನು ಮಾಡಿದಂಥವರು. ಮುಂದೆ 1980ರ ಕಾಲದಲ್ಲಿ ನಮ್ಮ ಪಕ್ಷದ ಅಧ್ಯಕ್ಷರಾಗುವುದಕ್ಕೆ ಯಾರೂ ತಯಾರಿಲ್ಲದ ಸಂದರ್ಭದಲ್ಲಿ ಆಗ ಅವರು ನಮ್ಮ ಪಕ್ಷದ ಅಧ್ಯಕ್ಷರಾಗಿದ್ದರು. ಮಾನ್ಯ ಸಿಂಧ್ಯಾರವರು ಪ್ರಧಾನ ಕಾರ್ಯದರ್ಶಿಗಳಾಗಿದ್ದರು. ಆಗ ದಕ್ಷಿಣ ಭಾರತದಲ್ಲಿ ಜನತಾಪಕ್ಷದ ಒಂದು ದೊಡ್ಡ ಸಮಾವೇಶವಾದಂಥ ಸಂದರ್ಭದಲ್ಲಿ ಪಂಜಿನ ಮೆರವಣಿಗೆ ಮಾಡಿರತಕ್ಕಂಥದ್ದು, ಯಾರ ಸಹಕಾರ ಇಲ್ಲದಿದ್ದರೂ ಕೂಡ 1980ರಲ್ಲಿ ನೆಲಕಚ್ಚಿದ ಪಕ್ಷವನ್ನು ಮತ್ತೆ ಮೇಲೆತ್ತಲಿಕ್ಕೆ ಪ್ರಯತ್ನ ಮಾಡಿದಂಥ ಮಾನ್ಯ ಜೆ.ಎಚ್. ಪಟೇಲ್‌ರು ಸೇರಿ 4 ಜನರು. ಅದರಲ್ಲಿ ಸನ್ಮಾನ್ಯ ರಾಮಕೃಷ್ಣ ಹೆಗಡೆಯವರು, ಮಾನ್ಯ ಬೊಮ್ಮಾಯಿಯವರು, ಮತ್ತು ದೇವೇಗೌಡರು. ಈ ಕಾಂಗ್ರೆಸ್ಸೇತರವಾದಂಥ ಸರ್ಕಾರವನ್ನು, ಕರ್ನಾಟಕದಲ್ಲಿ ತರತಕ್ಕಂಥದ್ದು ಒಂದೆ ಅಲ್ಲ ಇಡೀ ಭಾರತ ದೇಶದಲ್ಲಿಯೂ ಕೂಡ ಅಂತಹ ಒಂದು ಪ್ರಯತ್ನ ಮಾಡಲಿಕ್ಕೆ ಅವರು ಅಸ್ತಿ ಭಾರ ಹಾಕಿದಂಥವರು. ಆ ಕಾರಣಕ್ಕಾಗಿಯೇ ದಿವಂಗತ ನಿಜಲಿಂಗಪ್ಪನವರ ಆ ಒಂದು ರಾಜಕೀಯ ತತ್ವ ಮತ್ತು ಸಿದ್ಧಾಂತಗಳಿಗೆ ಬದ್ಧರಾಗಿ ರಾಷ್ಟ್ರ ಮಟ್ಟದಲ್ಲಿ ಬೆಳೆಯಲಿಕ್ಕೆ ಅವರಿಗೆ ಅವಕಾಶವಾಯಿತು. ಆ ಹಿನ್ನೆಲೆಯಲ್ಲಿ ನಾವು ಅನೇಕರು ಅವರ ಮಾರ್ಗದರ್ಶನದಲ್ಲಿ ಆ ಪಕ್ಷದಲ್ಲಿ ನಾವು ದುಡಿದಿದ್ದೇವೆ. ಅವರು ಪ್ರಾರಂಭದ ದಿಶೆಯಲ್ಲಿ ಈಗಾಗಲೇ ಮಾನ್ಯ ಸಭಾನಾಯಕರು ಮತ್ತು ಜಗದೀಶ್ ಶೆಟ್ಟರ್‌ರವರು ಹೇಳಿದಂತೆ ಅವರು ಎಂ.ಎನ್. ರಾಯ್‌ರವರ ಸಿದ್ಧಾಂತಕ್ಕೆ ಒಳಗಾಗಿದ್ದರು ಕೂಡ ಅದರಲ್ಲಿ ಬಹಳ ವ್ಯತ್ಯಾಸಗಳು ಇದ್ದವು. ಲೆನಿನ್‌ರವರಿಗೆ ಆ manifesto ಬರೆಯಲಿಕ್ಕೆ ಸಹಾಯ ಮಾಡಿದಂಥ ರಾಯ್‌ರವರು ಮುಂದೆ ಸ್ಟ್ರಾಟಸ್ಕೋ ಪರವಾಗಿ ಇದ್ದರು ಎನ್ನುವ ಕಾರಣಕ್ಕಾಗಿ ಸ್ಟ್ಯಾಲಿನ್‌ರವರಿಂದ ಹೊರಗೆ ಹಾಕಿಸಿಕೊಂಡಂಥವರಾಗಿದ್ದರು. ಹಾಗೆ ರಾಜಕೀಯದಲ್ಲಿ ಕೂಡ ಬಹಳ ತಿರುವುಗಳು ಆಗುತ್ತವೆ. ಅಂತಹ ಸಂದರ್ಭದಲ್ಲಿಯೂ ಕೂಡ ಇವರು ಕಾಂಗ್ರೆಸ್ಸೇತರ ಸರ್ಕಾರವನ್ನು ಮಾಡತಕ್ಕಂಥ

ಸಂದರ್ಭದಲ್ಲಿಯೂ ಕೂಡ ಬಹಳ ರೋಚಕವಾದ ವಿಷಯವೆಂದರೆ, 1967ರಲ್ಲಿ ನಮ್ಮ ಹಡಗಲಿ ಕ್ಷೇತ್ರದಿಂದ ನಿಜಲಿಂಗಪ್ಪನವರು ನಾಮಪತ್ರವನ್ನು ಸಲ್ಲಿಸಿದ್ದರು. ಮತ್ತು ಬೇರೆ ಕಡೆಗೂ ಕೂಡ ನಾಮಪತ್ರವನ್ನು ಅವರು ಸಲ್ಲಿಸಿದ್ದರು. ಆದರೆ ಅಲ್ಲಿ BSP ಪಕ್ಷದ ಡಮ್ಮಿ ಆದಂಥ ಒಬ್ಬ ಅಭ್ಯರ್ಥಿ ಇದ್ದ ನಾನು ನಾಮಪತ್ರವನ್ನು ವಾಪಸ್ಸು ತೆಗೆದುಕೊಳ್ಳುವುದಿಲ್ಲವೆಂದಾಗ, ಆಗ ದಾವಣಗೆರೆಯ ಮೂಲಕವಾಗಿ, ಆಗ ಮೊಬೈಲ್ ಸರ್ವಿಸ್‌ಗಳು ಕೂಡ ಇರಲಿಲ್ಲ, ಟೆಲಿಫೋನ್‌ಗಳು ಕೂಡ ಇರಲಿಲ್ಲ. ಅಂತಹ ಸಂದರ್ಭದಲ್ಲಿ ದಾವಣಗೆರೆಯ ಮುಖಂಡರ ಮೂಲಕವಾಗಿ ಕಳುಹಿಸಿಕೊಟ್ಟು ಶಿಗ್ಗಾಂವ ಮತಕ್ಷೇತ್ರಕ್ಕೆ ನಿಜಲಿಂಗಪ್ಪನವರಿಗೆ ಅಲ್ಲಿಗೆ ಬರುವುದಕ್ಕೆ ಏರ್ಪಾಡು ಮಾಡಿ ಆ ಸಂದರ್ಭದಲ್ಲಿ ಅವರನ್ನು ಅವಿರೋಧವಾಗಿ ಆಯ್ಕೆ ಮಾಡತಕ್ಕಂಥ ಶ್ರೇಯಸ್ಸು ಸನ್ಮಾನ್ಯ ಬೊಮ್ಮಾಯಿಯವರಿಗೆ ಸಲ್ಲತಕ್ಕಂಥದ್ದು. ಆಗ ಲೋಕಸೇವಾ ಸಂಘದಲ್ಲಿ ವಿಶ್ವನಾಥರೆಡ್ಡಿ ಮುದ್ನಾಳ್‌ರವರು, ಅಳವಂಡಿ ಶಿವಮೂರ್ತಿ ಸ್ವಾಮಿಗಳು ಇವರ ಮೂಲಕವಾಗಿ ರಾಜಕೀಯ ಪಕ್ಷದಲ್ಲಿ ಗುರುತಿಸಿಕೊಂಡಿದ್ದರೂ ಕೂಡ ನಿಜಲಿಂಗಪ್ಪನವರು ಈ ಕರ್ನಾಟಕಕ್ಕೆ ಅನಿವಾರ್ಯವಾಗಿರತಕ್ಕಂಥ ರಾಜಕೀಯ ನೇತಾರರು ಎನ್ನುವ ಕಾರಣಕ್ಕಾಗಿಯೆ ಅಂತಹ ಒಂದು ಕೆಲಸವನ್ನು ಮಾಡಿದಂಥವರು ಆಗಿದ್ದರು. ಮುಂದೆ ತಮಗೆಲ್ಲಾ ಗೊತ್ತಿದ್ದಂತೆ ಅವರು ಈ ರಾಜ್ಯದ ಮುಖ್ಯಮಂತ್ರಿಗಳಾಗಿ ಕೆಲಸವನ್ನು ಮಾಡಿದರು. ಈ ರೀತಿ ಅಸ್ಥಿರತೆ ಉಂಟಾಗಿದೆ ಎನ್ನುವಂಥ ಸಂದರ್ಭ ಬಂದಾಗ ಕೂಡ ಸ್ಥಿತಪ್ರಜ್ಞರಾಗಿ ಅವರು ಒಂದು ಸಿನೆಮಾವನ್ನು ಬಾಲಬ್ರೂಯಿಯಲ್ಲಿ ನೋಡಿಕೊಂಡು ಕುಳಿತಿದ್ದರು. ಆ ವಿಚಾರವನ್ನು ಹೇಳಿದಾಗಲೂ ಕೂಡ ಆಯಿತು, ಏನಾಗುತ್ತದೆ. ಮಾನ್ಯ ರಾಜ್ಯಪಾಲರು ಆ ರೀತಿಯ ನಿರ್ಣಯವನ್ನು ಕೈಗೊಳ್ಳುವುದಿಲ್ಲವೆಂದು ಹೇಳಿ, ಅವರು ಒಬ್ಬ ಉತ್ತಮವಾದ ವಕೀಲರು ಆಗಿದ್ದಂಥ ಕಾರಣಕ್ಕಾಗಿ ಸಂವಿಧಾನದ ಅನುಗುಣವಾಗಿ ಪ್ರಾಯಶಃ ಇಂತಹ ಒಂದು ಶಿಫಾರಸ್ಸು ಮಾಡುವುದಿಲ್ಲವೆನ್ನುವ ನಂಬಿಕೆ ಅವರಿಗೆ ಇದ್ದದ್ದರಿಂದ ಅವರು ಪ್ರಯತ್ನವನ್ನು ಮಾಡಲಿಲ್ಲ. ಮುಂದೆ ಮಾನ್ಯ ರಾಜ್ಯಪಾಲರು ಮಾಡಿರುವ ಶಿಫಾರಸ್ಸು ಮತ್ತು ನಿರ್ಣಯಕ್ಕೆ ಬದ್ಧರಾಗದೆ ಸುಪ್ರೀಂಕೋರ್ಟ್ ತೆಗೆದುಕೊಂಡಿರುವಂಥ ನಿಲುವು ಇವತ್ತಿನ ದಿವಸ ರಾಜಕೀಯ ಅಸ್ಥಿರತೆ ಉಂಟಾದಂಥ ಸಂದರ್ಭದಲ್ಲಿ ಯಾವ ರೀತಿಯಾಗಿ ಸಂವಿಧಾನದ ಚೌಕಟ್ಟಿನೊಳಗೆ ನಿರ್ಣಯವನ್ನು ಕೈಗೊಳ್ಳಬೇಕು ಎನ್ನುವುದರ ಬಗ್ಗೆ ಸುಪ್ರೀಂಕೋರ್ಟಿನವರು ಕೊಟ್ಟಿರತಕ್ಕಂಥ ತೀರ್ಮಾನ ಇವತ್ತಿಗೂ ಕೂಡ ಮಾರ್ಗದರ್ಶನದ ತೀರ್ಮಾನವಾಗಿದೆ. Obiter Dicta ಎಂದು ಏನು ನಾವು ಕರೆಯುತ್ತೇವೆ, ಅದು ಮಾರ್ಗದರ್ಶನದ ತೀರ್ಮಾನವಾಗಲಿಕ್ಕೆ ಮೂರು ವರ್ಷಗಳಾಯಿತು. ಆದರೂ ಕೂಡ ಅದನ್ನು ಬಿಡಲಾರದೆ ಸುಪ್ರೀಂಕೋರ್ಟಿನಲ್ಲಿ

ಸತತವಾಗಿ ಹೋರಾಟವನ್ನು ಮಾಡಿ ಕನಿಷ್ಠ ಪಕ್ಷ ಕರ್ನಾಟಕ ರಾಜ್ಯದ ಆ ಒಬ್ಬ ಮುಖ್ಯಮಂತ್ರಿ ಆವತ್ತು ಹೋರಾಟ ಮಾಡಿದಂಥ ಹಿನ್ನೆಲೆಯಲ್ಲಿ ಏನು ಸುಪ್ರೀಂಕೋರ್ಟಿನ ನಿರ್ಣಯ ಇದೆ, ಇವತ್ತಿಗೂ ಕೂಡ ಎಸ್.ಆರ್. ಬೊಮ್ಮಾಯಿಯವರ ಕೇಸನ್ನು ಪ್ರಾಯಶಃ ಎಲ್ಲಾ ಕಾಲದಲ್ಲಿಯೂ ಕೂಡ ಅದನ್ನು ಉದಾಹರಿಸುವಂತ ರೀತಿಯಲ್ಲಿ ಅವರು ತೆಗೆದುಕೊಂಡಂಥ ನಿಲುವು ಬಹಳ ದೊಡ್ಡದಾಗಿತ್ತು. ಅವರು ಬರಗಾಲವನ್ನು ನಿರ್ವಹಣೆ ಮಾಡಿದಂಥ ಸಂದರ್ಭದಲ್ಲಿ ಅವರು ಕಂದಾಯ ಮಂತ್ರಿಗಳಾಗಿದ್ದರು. ಅತ್ಯುತ್ತಮವಾದಂಥ ರೀತಿಯಲ್ಲಿ ಬರಗಾಲದ ನಿರ್ವಹಣೆಯ ವಿಚಾರದಲ್ಲಿ ಅವರು ಮಾಡಿದಂಥ ಶಿಫಾರಸ್ಸುಗಳು ಮತ್ತು ಕೈಗೊಂಡಂತ ಕ್ರಮಗಳು ಒಂದು ಮಾದರಿಯ ಕ್ರಮಗಳು ಆಗಿದ್ದವು. ಅದಾದ ನಂತರ ನಮ್ಮ ಅಧಿಕಾರ ವಿಕೇಂದ್ರೀಕರಣಕ್ಕೆ ಸಂಬಂಧ ಪಟ್ಟಂತೆ ಅವರು ಸಂವಿಧಾನಕ್ಕೆ ತಿದ್ದುಪಡಿ ಮಾಡಬೇಕೆಂದು ಅಂದಾಗ ಆಗ ಎಸ್.ಆರ್.ಬೊಮ್ಮಾಯಿಯವರ ಕಮಿಟಿ ಎಂದು ಮಾಡಿದಾಗ ನಮ್ಮ ಪಕ್ಷದ ವತಿಯಿಂದ ಕೊಟ್ಟಂಥ ಶಿಫಾರಸ್ಸು ಕೂಡ ಅಧಿಕಾರ ವಿಕೇಂದ್ರೀಕರಣದ ಸಂದರ್ಭದಲ್ಲಿ ತೆಗೆದುಕೊಳ್ಳಬೇಕಾದ ನಿಲುವಿಗೆ ಅವುಗಳು ಬಹಳ ಉಪಯುಕ್ತವಾದ ಸಲಹೆಗಳು ಮತ್ತು ಸೂಚನೆಗಳು ಕೂಡ ಆಗಿದ್ದವು. ಅದೇ ರೀತಿಯಾಗಿ ಡಾ: ಗೋಪಾಲ್‌ರಾವ್‌ರವರನ್ನು ಬಾಬರಿ ಮಸೀದಿಯ ವಿಚಾರದಲ್ಲಿ, ಅವರು ಮಾನವ ಸಂಪನ್ಮೂಲ ಸಚಿವರಾಗಿದ್ದಂಥ ಸಂದರ್ಭದಲ್ಲಿ ನೇಮಕಾತಿಯನ್ನು ಮಾಡಿ ಅವರು ಕೊಟ್ಟಂಥ ವರದಿ ಇವತ್ತಿಗೂ ಕೂಡ ಉದಾಹರಿಸಲ್ಪಡುವಂಥ ವರದಿಯಾಗಿರತಕ್ಕಂಥದ್ದನ್ನು ನಾವು ಈ ಸಂದರ್ಭದಲ್ಲಿ ನೆನೆಯಲೇಬೇಕಾಗುತ್ತದೆ. ಸುಮಾರು 7 ವರ್ಷಗಳ ಕಾಲ ಅಖಿಲ ಭಾರತ ಜನತಾ ಪಕ್ಷದ ಅಧ್ಯಕ್ಷರಾಗಿ ಅತ್ಯುತ್ತಮವಾದ ಕೆಲಸವನ್ನು ಮಾಡಿದ್ದು ಅಲ್ಲದೆ ಆ ಸಂದರ್ಭದಲ್ಲಿ ದೇವಿಲಾಲ್‌ರಂಥ ಒಬ್ಬ ಮುತ್ಸದ್ದಿ ರಾಜಕಾರಣಿಯನ್ನು ಕೂಡ ಪಕ್ಷದಿಂದ ಉಚ್ಚಾಟಿಸುವಂಥ ಅಪ್ರಿಯವಾದ ನಿರ್ಣಯವನ್ನು ಅವರು ಕೈಗೊಂಡರು. ಈ ದೃಷ್ಟಿಕೋನದಿಂದ ಅಖಿಲಭಾರತ ಮಟ್ಟದಲ್ಲಿ ಬೆಳೆದಂಥ ಬೊಮ್ಮಾಯಿಯವರು ಇವತ್ತು ನಮ್ಮನ್ನು ಅಗಲಿರತಕ್ಕಂಥ ಸಂದರ್ಭದಲ್ಲಿ ಸಾವು ಎಲ್ಲರಿಗೂ ಕೂಡ ಬರುತ್ತದೆ. ಆದರೆ ಅವರು ಕೊಟ್ಟಂಥ ಕೊಡುಗೆಯನ್ನು ನಾವು ಸ್ಮರಿಸಲೇಬೇಕಾದ ಅಗತ್ಯತೆ ಇರುವುದರಿಂದ ತಾವು ತಂದಿರತಕ್ಕಂಥ ಈ ಸಂತಾಪ ಸೂಚಕ ನಿರ್ಣಯಕ್ಕೆ ಸಂಪೂರ್ಣವಾದ ಬೆಂಬಲವನ್ನು ನಾವೆಲ್ಲರೂ ಕೂಡ ಅವರಿಂದ ಎಲ್ಲ ತರಹದ ರೀತಿಯಿಂದ ರೂಪಗೊಂಡಂಥ ವ್ಯಕ್ತಿಯಾಗಿರುವುದರಿಂದ ನಾನು ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

## ಶ್ರೀ ಪಿ.ಜಿ.ಆರ್. ಸಿಂಧ್ಯಾ

ಮಾನ್ಯ ಎಸ್.ಆರ್.ಬೊಮ್ಮಾಯಿಯವರು ತಮಗೆ ಬಹಳ ಚಿರಪರಿಚಿತರು. ನನಗಿಂತ ಹೆಚ್ಚಾಗಿ ಈ ಸದನದಲ್ಲಿ ತಾವು ಮತ್ತು ಮಾನ್ಯ ಸಿದ್ದರಾಮಯ್ಯನವರು, ಇಬ್ಬರೂ ಸಹಿತ ಅವರ ರಾಜಕೀಯ ಸಂಕಷ್ಟದ ದಿನಗಳಲ್ಲಿ ಅವರ ಜೊತೆಯಲ್ಲಿ ನಿಂತಂತಹ ಮಹನೀಯರುಗಳು ಆಗಿದ್ದೀರಿ. ನಾನು 1983ರ ಚುನಾವಣೆಯಲ್ಲಿ ಬೆಂಗಳೂರಿನ ಶಿವಾಜಿನಗರ ಕ್ಷೇತ್ರದಿಂದ ಚುನಾವಣೆಗೆ ನಿಲ್ಲಬೇಕೆಂದು ಅರ್ಜಿಯನ್ನು ಹಾಕಿದ್ದೆ. ಆ ಸಂದರ್ಭದಲ್ಲಿ ಅವರು ಪಕ್ಷದ ಅಧ್ಯಕ್ಷರಾಗಿದ್ದರು. ಅವರು ನನ್ನನ್ನು ಕರೆದು ಆಗ ಮಾತನಾಡಿದ್ದು. ತಮಗೆ ಗೊತ್ತಿದ್ದಂತೆ ಕರ್ನಾಟಕದಲ್ಲಿ 1978ರಲ್ಲಿ 58 ವಿಧಾನ ಸಭಾ ಕ್ಷೇತ್ರಗಳಲ್ಲಿ ಜನತಾ ಪಕ್ಷ ಗೆದ್ದಿತ್ತು. 1980–82 ರ ಸಮಯಕ್ಕೆ ನಾವು 13 ಜನ ಮಾತ್ರ ಶಾಸಕರಾಗಿ ಉಳಿದೆವು. ಎಲ್ಲರೂ ಬೇರೆ ಬೇರೆ ಕಡೆ ಹೊರಟು ಹೋಗಿದ್ದರು. ಆಗ ಕರ್ನಾಟಕದಲ್ಲಿ ದೊಡ್ಡ ರೈತ ಚಳವಳಿ ನಡೆಯಿತು. ಡಾ: ರಾಜ್‌ಕುಮಾರ್‌ರವರ ನೇತೃತ್ವದಲ್ಲಿ ಗೋಕಾಕ್‌ರವರ ವರದಿಯನ್ನು ಅನುಷ್ಠಾನಗೊಳಿಸಬೇಕೆಂದು ಕನ್ನಡ ಪರ ಸಂಘಟನೆಗಳು ಹೋರಾಟವನ್ನು ಮಾಡಿದರು. ಆ ಸಂದರ್ಭದಲ್ಲಿ ಮಾನ್ಯ ಬೊಮ್ಮಾಯಿಯವರು ದೇವರಾಜ್ ಅರಸ್ ರವರ ಒಡನಾಡಿಗಳಾಗಿ ಕರ್ನಾಟಕದಲ್ಲಿ ಅವತ್ತಿನ ಜನತಾಪಕ್ಷದ ಸರ್ಕಾರ ತರಲಿಕ್ಕೆ ಬಹಳ ಹೋರಾಟವನ್ನು ಮಾಡಿದ್ದರು. ನವೆಂಬರ್, 1982ರ ಸಂದರ್ಭದಲ್ಲಿ ಮಾನ್ಯ ಗುಂಡೂರಾಯರು ಮುಖ್ಯಮಂತ್ರಿಗಳಾಗಿದ್ದರು. ಆಗ ವಿರೋಧ ಪಕ್ಷದ ನಾಯಕರಾಗಿ ಮಾನ್ಯ ಬೊಮ್ಮಾಯಿಯವರಿದ್ದರು. ದೇವರಾಜ್ ಅರಸ್‌ರವರು ಈ ಸದನದ ಸದಸ್ಯರಾಗಿ ಅವತ್ತು ತೀರಿಕೊಂಡಿದ್ದರು. ಮಾನ್ಯ ಬೊಮ್ಮಾಯಿಯವರು ನನಗೆ ದೂರವಾಣಿ ಮೂಲಕ ಮಾತನಾಡಿ, ಗುಂಡೂರಾಯರು ವಿಧಾನಸಭೆಯನ್ನು ವಿಸರ್ಜನೆ ಮಾಡಿದ್ದಾರೆ, ಪಕ್ಷದ ಸಭೆಯನ್ನು ತುರ್ತಾಗಿ ನೀವು ಕರೆಯಬೇಕು, ತಕ್ಷಣ ಪಕ್ಷದ ಸಭೆಯನ್ನು ಕರೆಯಲಿಕ್ಕೆ ನೋಟಿಸನ್ನು ಹೊರಡಿಸಿ ಎಂದು ನನಗೆ ಹೇಳಿದರು. ಏಕೆಂದರೆ, ಆಗ ನಮ್ಮ ಪಕ್ಷ ಬಹಳ ಸಂಕಷ್ಟದ ಪರಿಸ್ಥಿತಿಯಲ್ಲಿತ್ತು. ಗೆದ್ದವರೆಲ್ಲಾ ಬಿಟ್ಟು ಹೊರಟು ಹೋಗಿದ್ದರು. 13 ಜನ ಮಾತ್ರ ವಿಧಾನ ಸಭೆಯಲ್ಲಿ ಉಳಿದಿದ್ದೆವು. ನಾವು ಅಧಿಕಾರಕ್ಕೆ ಬರುತ್ತೇವೆಂದು ನಿರೀಕ್ಷೆ ಮಾಡಿರಲಿಲ್ಲ. ಆ ಸಂದರ್ಭದಲ್ಲಿ ಅನೇಕ ಮುಖಂಡರುಗಳು ಕಾಂಗ್ರೆಸ್ ಜೊತೆಯಲ್ಲಿ ಒಳ ಒಪ್ಪಂದ ವನ್ನೂ ಸಹಿತ ಮಾಡಿಕೊಂಡಿದ್ದರು. ಅಂತಹ ಸಂದರ್ಭದಲ್ಲಿ ಮಾನ್ಯ ಬೊಮ್ಮಾಯಿಯವರು ನನಗೊಂದು ಮಾತನ್ನು ಹೇಳಿದರು. ಸಿಂಧ್ಯಾರವರೇ, ರಾಜ್ಯದಲ್ಲಿ ರೈತರ ಪರವಾಗಿ ಇರತಕ್ಕಂಥ ಹೋರಾಟ ನಡೆದಿದೆ, ಕನ್ನಡ ಪರವಾಗಿ ಇರತಕ್ಕಂಥ

ಸಂಘಟನೆಗಳು ಕೆಲಸ ಮಾಡುತ್ತೀವೆ, ನಮ್ಮ ಪಕ್ಷ ಅಧಿಕಾರಕ್ಕೆ ಬರುತ್ತದೆ, ನೀವು ಶಿವಾಜಿನಗರದಲ್ಲಿ ಬೇಡ, ಹೋಗಿ ಕನಕಪುರದಲ್ಲಿ ನಿಂತುಕೊಳ್ಳಿ ಎಂದು ನನಗೆ ಬಿ ಫಾರಂ ಅನ್ನು ಮತ್ತು 5 ಸಾವಿರ ರೂ.ಗಳನ್ನು ಕೊಟ್ಟು ಕಳುಹಿಸಿದರು. ಅದನ್ನು ನಾನು ಯಾವತ್ತೂ ಮರೆಯಲಿಕ್ಕೆ ಸಾಧ್ಯವಿಲ್ಲ. ಅದಾದ ನಂತರ ನಾನೂ ಸಹಿತ ಅವರ ಮಂತ್ರಿಮಂಡಲದಲ್ಲಿ ಕೆಲಸ ಮಾಡತಕ್ಕಂತ ಅವಕಾಶವನ್ನು ಮಾಡಿಕೊಟ್ಟರು. ದಿವಂಗತ ರಾಮಕೃಷ್ಣ ಹೆಗಡೆಯವರ ಮಂತ್ರಿ ಮಂಡಲ ರಚನೆಯಾಗಬೇಕಾದರೆ ಅದಕ್ಕೆ ಅವತ್ತು ಮಾನ್ಯ ದೇವೇಗೌಡರೂ ಸಹಿತ ಕಾರಣಕರ್ತರಾಗಿದ್ದರು. ಆಗ ಮಾನ್ಯ ಬಂಗಾರಪ್ಪನವರು ಮುಖ್ಯಮಂತ್ರಿಗಳಾಗಬೇಕಿತ್ತು. ಆ ಸಂದರ್ಭದಲ್ಲಿ ಬಂಗಾರಪ್ಪನವರು, ದೇವೇಗೌಡರು ಮತ್ತು ಬೊಮ್ಮಾಯಿಯವರು ಇವರೆಲ್ಲರೂ ಸೇರಿ ಹೆಗಡೆಯವರ ನಾಯಕತ್ವವನ್ನು ಸ್ವೀಕಾರ ಮಾಡಿ, ರಾಜ್ಯದಲ್ಲಿ ಪ್ರಥಮ ಬಾರಿಗೆ ಕಾಂಗ್ರೆಸ್ಸೇತರ ಸರ್ಕಾರವನ್ನು 18 ತಿಂಗಳುಗಳ ಕಾಲ, ಜಾಲಪ್ಪನವರು, ರಾಚಯ್ಯನವರು, ನಜೀರ್ ಸಾಬ್‌ರವರು ಇವರೆಲ್ಲರ ಸಹಕಾರದಿಂದ ಬಹಳ ಚೆನ್ನಾಗಿ ನಡೆಸಿದರು. ಆ ಒಂದು ಸಮ್ಮಿಶ್ರ ಸರ್ಕಾರ ಸಂದರ್ಭದಲ್ಲಿ ಡಾ: ವಿ.ಎಸ್. ಆಚಾರ್ಯರವರು ನಮ್ಮ ಸದನದಲ್ಲಿ ಭಾರತೀಯ ಜನತಾ ಪಕ್ಷದ ನಾಯಕರಾಗಿದ್ದರು.

18–19 ಜನ ಶಾಸಕರಿದ್ದರು, ಜವಾಬ್ದಾರಿ ಮಂತ್ರಿಗಳಾಗಿದ್ದರು, 1983ರಲ್ಲಿ ಆಗ ಇನ್ನು ದೇಶಪಾಂಡೆಯವರು ಮಂತ್ರಿಗಳಾಗಿರಲಿಲ್ಲ, SLD ಬ್ಯಾಂಕಿನ ಅಧ್ಯಕ್ಷರಾಗಿದ್ದರು. ಆದರೆ, ಆಗ ನಾವೆಲ್ಲಾ ಸೇರಿಕೊಂಡಾಗ, ಆಗ ಪಕ್ಷಾಂತರದ ಗುಮ್ಮ ಬಹಳ ಕೆಲಸ ಮಾಡುತ್ತಿತ್ತು, ಜೀವರಾಜ ಆಳ್ವ, ದೇಶಪಾಂಡೆ, ಜೀವಿಜಯ, ರಮೇಶ್ ಜಿಗಜಿಣಗಿ, ಸಿದ್ದರಾಮಯ್ಯನವರು, ನಾವೆಲ್ಲರೂ ಕೂಡ ಅವತ್ತು ಸರ್ಕಾರವನ್ನು ಕಾಯುವಂತಹ ಕೆಲಸವನ್ನು ಮಾಡಿದರೆ, ಕ್ರಿಯಾತ್ಮಕವಾಗಿ ಸರ್ಕಾರದ ಕೆಲಸವನ್ನು ಮಾಡುತ್ತಿದ್ದವೆಂದರೆ 4–5 ಜನರು. ಅದನ್ನೆಲ್ಲಾ ನಾನು ನೆನೆಸಿಕೊಳ್ಳುವುದಕ್ಕೆ ಬಯಸುತ್ತೇನೆ. ಬೊಮ್ಮಾಯಿಯವರು ಅತ್ಯಂತ ನಿಷ್ಠೆಯಿಂದ ರಾಜ್ಯ ಪ್ರಗತಿಗೆ ಹೋರಾಟ ಮಾಡಿದ ಒಬ್ಬ ಧೀಮಂತ ನಾಯಕರು. ಉತ್ತರ ಕರ್ನಾಟಕದಿಂದ ಬಂದಿರುವ ನಾಯಕರುಗಳ ಪೈಕಿ, ದಕ್ಷಿಣ ಕರ್ನಾಟಕದ ಜನ ಸ್ವೀಕಾರ ಮಾಡುತ್ತಿದ್ದವರ ಪೈಕಿ, ಬೊಮ್ಮಾಯಿಯವರು ಮೊದಲಿಗರು ಎಂದು ಹೇಳುವುದಕ್ಕೆ ಬಯಸುತ್ತೇನೆ. ಕೆ.ಎಚ್.ಪಾಟೀಲ್ ಅವರು ಉತ್ತರ ಕರ್ನಾಟಕದವರೆಂದು ದಕ್ಷಿಣ ಕರ್ನಾಟಕದ ಜನ ಭಾವಿಸಿರಲಿಲ್ಲ. ಅದೇ ರೀತಿಯಲ್ಲಿ ಬೊಮ್ಮಾಯಿಯವರನ್ನು ದಕ್ಷಿಣ ಕರ್ನಾಟಕದ ಜನರು, ರಾಜ್ಯ ನಾಯಕರೆನ್ನುವ ಭಾವನೆಯನ್ನಿಟ್ಟುಕೊಂಡಿದ್ದರು. ಮತ್ತು ಪ್ರಜಾತಂತ್ರದ ಮೌಲ್ಯಗಳ ಬಗ್ಗೆ ಬಹಳ ವಿಶ್ವಾಸವನ್ನಿಟ್ಟುಕೊಂಡಿದ್ದ ಒಬ್ಬ ನಾಯಕರು. ಸಮ್ಮಿಶ್ರ

ಸರ್ಕಾರವನ್ನು ಹೇಗೆ ನಡೆಸಬೇಕು, ಮತ್ತು ರಾಜಕೀಯ ಸಿದ್ಧಾಂತಗಳ ಭಿನ್ನಾಭಿಪ್ರಾಯಗಳೇನಿದ್ದಾವೆ, ಅವನ್ನು ಹೇಗೆ ಬಗೆಹರಿಸಿಕೊಳ್ಳಬೇಕು, ಅಭಿವೃದ್ಧಿ ಕೆಲಸ ಏನು ಮಾಡಬೇಕೆನ್ನುವುದರ ಬಗ್ಗೆ ಅವತ್ತಿನ ಕೈಗಾರಿಕಾ ಸಚಿವರಾಗಿ, ಕಂದಾಯ ಸಚಿವರಾಗಿ, ಇಡೀ ರಾಜ್ಯದಲ್ಲಿ ಕೆಲಸ ಮಾಡಿದಂತಹ ಒಬ್ಬ ನಾಯಕರು. ಮಾನ್ಯ ಹೆಗ್ಡೆಯವರು, ಈ ರಾಜ್ಯಕ್ಕೆ ಜನತಾ ಪರಿವಾರದ ಮೂಲಕವಾಗಿ ಒಂದು alternative leadership ಅನ್ನು emerge ಮಾಡುವುದಕ್ಕೆ ಆಶೀರ್ವಾದ ಮಾಡಿದವರು, ಅದಕ್ಕೆಲ್ಲಾ ಬೊಮ್ಮಾಯಿ ಅವರು ಸಹಕಾರ ಮಾಡಿದವರು. ಅದನ್ನು ನಾವು ಯಾವತ್ತು ಮರೆಯುವುದಕ್ಕೆ ಸಾಧ್ಯವಿಲ್ಲ ನಾನಾದರೂ ಇವತ್ತು ಮಾನ್ಯ ಮುಖ್ಯಮಂತ್ರಿಗಳಲ್ಲಿ ಮನವಿ ಮಾಡಿಕೊಳ್ಳುವುದೇನೆಂದರೆ, ಬೊಮ್ಮಾಯಿಯವರು ಕೊನೆಯ ದಿವಸದವರೆವಿಗೂ ಮಾಡಿದಂಥ ಹೋರಾಟ ಇವತ್ತು ಇಡೀ ದೇಶದಲ್ಲೆ ಪ್ರಖ್ಯಾತಿಯಾಗಿದೆ. ಅವರು ಯಾವರೀತಿಯಾಗಿ ಇಡಿ ರಾಜ್ಯದಲ್ಲಿ ಸ್ನೇಹಿತರನ್ನು ಗಳಿಸಿದ್ದರು, ಆ ರೀತಿ ಇಡೀ ದೇಶದಲ್ಲಿ ಗಳಿಸಿದ್ದರು. ಒರಿಸ್ಸಾದ ಮುಖ್ಯಮಂತ್ರಿಗಳಾಗಿದ್ದ ಬಿಜು ಪಟ್ನಾಯಕ್ ಅವರು ಇವತ್ತಿನ ಮುಖ್ಯಮಂತ್ರಿಗಳ ತಂದೆಯವರು, ಲಲ್ಲು ಪ್ರಸಾದ್ ಯಾದವ್ ಅವರು, ವಿ.ಪಿ.ಸಿಂಗ್ ಅವರು, ದೇವಿಲಾಲ್ ಅವರು, ಐ.ಕೆ. ಗುಜ್ರಾಲ್ ಹೀಗೆ ಎಲ್ಲರ ವಿಶ್ವಾಸವನ್ನು ಗಳಿಸಿಕೊಂಡು ಮಾನವ ಸಂಪನ್ಮೂಲ ಇಲಾಖೆಯ ಮಂತ್ರಿಗಳಾಗಿ ಕರ್ನಾಟಕಕ್ಕೆ ಆದ್ಯತೆಯನ್ನು ಕೊಡಬೇಕೆಂದು ಅವರಿಗೆ ಬಹಳ ಆಸೆ ಇತ್ತು. ಹುಬ್ಬಳ್ಳಿಯಲ್ಲಿ ಒಂದು ಐಐಟಿಯನ್ನು ಮಾಡಬೇಕೆನ್ನುವ ಒಂದು ಮಹತ್ತರವಾದ ಆಸೆಯನ್ನಿಟ್ಟುಕೊಂಡು ಅದನ್ನು ಮಂಜೂರಾತಿ ಸಹ ಮಾಡಿದ್ದರು. ಮತ್ತು ನಮ್ಮ ವಿಶ್ವವಿದ್ಯಾಲಯಗಳಿಗೆ ಹೆಚ್ಚಿನ ಸಹಕಾರವನ್ನು ಮಾಡಿದ್ದು ಬೊಮ್ಮಾಯಿ ಎನ್ನುವುದನ್ನು ನಾನು ಮರೆಯುವುದಕ್ಕೆ ಸಾಧ್ಯವಿಲ್ಲ. ಒಂದು ಸಾರಿ ನಾನು ಹೊಸದಾಗಿ ಮಂತ್ರಿಯಾದ ಸಂದರ್ಭದಲ್ಲಿ ಬಹಳ ಉತ್ಸಾಹದಿಂದ ಆರೋಗ್ಯ ಮಂತ್ರಿಯಾಗಿ ದಕ್ಷಿಣ ಕರ್ನಾಟಕಕ್ಕೆ ಹೆಚ್ಚಿನ ಆಸ್ಪತ್ರೆಗಳನ್ನು ಕೊಟ್ಟಿದ್ದೆ, ಉತ್ತರ ಕರ್ನಾಟಕಕ್ಕೆ ಹೆಚ್ಚು ನಾನು ಕೊಟ್ಟಿರಲಿಲ್ಲ. ಒಂದು ದಿವಸ ಕರೆದು ಏನಪ್ಪ ಈ ರೀತಿ ಅನ್ಯಾಯ ಮಾಡುತ್ತಿದ್ದೀಯಾ ನಮ್ಮ ಹುಡುಗನೆಂದು ನಿನ್ನನ್ನು ಬೆಳೆಸಿದರೆ ನೀನೇ ಹೀಗೆ ಮಾಡುತ್ತಿಯಲ್ಲವೆಂದು ಬಹಳ ಚೆನ್ನಾಗಿ ನನ್ನ ಕಿವಿಯಲ್ಲಿ ಹೇಳಿದರು. ಅವರು ಒಂದು ದಿವಸ ನನಗಾಗಲೀ ಅಥವಾ ನಮ್ಮಲ್ಲಿರುವ ಎರಡನೇ ನಾಯಕತ್ವದಲ್ಲಿರುವವರು ಅವರನ್ನು ಟೀಕೆ ಮಾಡಿರಲಿಲ್ಲ. ನಾವು ಅವರನ್ನು ಬಿಟ್ಟು ಹೋದ ಸಂದರ್ಭದಲ್ಲಿ ಸಹ, ಹೋಗಲಿ ಬಿಡಪ್ಪ ನಿನಗೆ ಒಳ್ಳೆಯದಾಗಲಿ ಎಂದು ಹೇಳುವ ಒಬ್ಬ ದೊಡ್ಡ ಮನುಷ್ಯರಾಗಿದ್ದರು. ಇವತ್ತು ಬೊಮ್ಮಾಯಿ ಅವರನ್ನು ಕಳೆದುಕೊಂಡು ಕರ್ನಾಟಕದ ರಾಜಕೀಯ ಕ್ಷೇತ್ರ ಬಡವಾಗಿದೆ. ಮುಖ್ಯಮಂತ್ರಿಗಳಲ್ಲಿ ನಾನು ವಿನಂತಿ ಮಾಡಿಕೊಳ್ಳುವುದೇನೆಂದರೆ, ಅವರ ಹೆಸರಿನಲ್ಲಿ

ಈ ಉತ್ತರ ಕರ್ನಾಟಕದ ಹುಬ್ಬಳ್ಳಿಯಲ್ಲಿ ಪ್ರಾರಂಭ ಮಾಡಬೇಕೆಂದು ಇರುವ ನಮ್ಮ ಕಾನೂನಿನ ವಿಶ್ವವಿದ್ಯಾಲಯವೇನಿದೆ, ಮಾನ್ಯ ಧರ್ಮಸಿಂಗ್ ಅವರು ಮುಖ್ಯಮಂತ್ರಿಗಳಾಗಿದ್ದಾಗ ಅದನ್ನು ಮಂಜೂರಾತಿ ಮಾಡಿರುವುದು ನನಗೆ ಜ್ಞಾಪಕ. ಆ ಕಾನೂನು ವಿಶ್ವವಿದ್ಯಾಲಯಕ್ಕೆ ಬೊಮ್ಮಾಯಿ ಸಾಹೇಬರ ಹೆಸರನ್ನು ಶಾಶ್ವತವಾಗಿಡಬೇಕೆಂದು ಬಹುಶಃ ಈ ಸದನದ ಎಲ್ಲರೂ ಕೂಡ ಒಪ್ಪುತ್ತಾರೆ. ಅವರು ಒಂದು ರೀತಿಯಲ್ಲಿ ಅಜಾತಶತ್ರುವಾಗಿದ್ದರು. ಮತ್ತು ಬಸವಣ್ಣನವರ ತತ್ವಗಳನ್ನು ನಿಜವಾಗಿಯೂ ಅನುಷ್ಠಾನಗೊಳಿಸುವ ವಿಚಾರದಲ್ಲಿ ಬೊಮ್ಮಾಯಿಯವರದು ಮೈಲುಗೈ. ಅವರು ಅನೇಕ ಸಂದರ್ಭಗಳಲ್ಲಿ ಸಿಂಧ್ಯರವರೆ ನಾನು ಹುಟ್ಟಿದ್ದು ಸಾದರ ಜಾತಿಯಲ್ಲಿ, ನಾನು ಸಾದರ ಲಿಂಗಾಯಿತ, ನಮ್ಮ ದೇವರು ಮಾತ್ರ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಜಾತಿಗೆ ಸೇರಿದ ಮಾದಿಗ ಡಂಗೋರ ಜಾತಿಗೆ ಸೇರಿದವನು ಎನ್ನುವ ಮಾತನ್ನು ಹೇಳುತ್ತಿದ್ದರು. ಮತ್ತು ಅವರು ಅದನ್ನು ಅನುಷ್ಠಾನದಲ್ಲಿ ಕೂಡ ಮಾಡಿದ್ದಾರೆ. ಎಲ್ಲರನ್ನು ಸಮಾನ ಮನಸ್ಸಿನಿಂದ ನೋಡುವ ಒಂದು ದೊಡ್ಡ ವ್ಯಕ್ತಿತ್ವವನ್ನು ಹೊಂದಿದ್ದು ಮರಳಸಿದ್ದನನ್ನು ಮನೆದೇವರನ್ನಾಗಿ ನಾನು ಪೂಜೆ ಮಾಡುತ್ತೇನೆ. ಎನ್ನುವ ಮಾತನ್ನು ಹೇಳಿದರು. ಅವರು ನಿಜವಾದ ಶರಣರಾಗಿದ್ದರು. ಅಂಥ ಒಬ್ಬ ನಾಯಕರನ್ನು ನಾವು ಕಳೆದುಕೊಂಡಿದ್ದೇವೆ.

**ಶ್ರೀ ಬಿ.ಆರ್. ಪಾಟೀಲ್ (ಆಳಂದ)**

ಮಾನ್ಯ ಅಧ್ಯಕ್ಷರೆ, ಇವತ್ತು ಮಾನ್ಯ ಎಸ್.ಆರ್. ಬೊಮ್ಮಾಯಿಯವರ ಬಗ್ಗೆ ಮಾತನಾಡದೇ ಹೋಗಿದ್ದರೆ, ಬಹಳ ದೊಡ್ಡ ಅಪಚಾರವಾಗುತ್ತಿತ್ತೇನೋ ಎಂಬ ಮನಸ್ಸಿನಿಂದ ಮಾತನಾಡುತ್ತಿದ್ದೇನೆ. ತಾವು ಒಂದು ನಿಮಿಷ ಮಾತನಾಡಬೇಕೆಂದು ಹೇಳಿದ್ದೀರಿ. ನಾನು ಎರಡು ನಿಮಿಷಗಳ ಕಾಲಾವಕಾಶವನ್ನು ತೆಗೆದುಕೊಳ್ಳುತ್ತೇನೆ. ನಾನು ಮಾನ್ಯ ಎಸ್.ಆರ್.ಬೊಮ್ಮಾಯಿರವರನ್ನು ಏಕೆ ನೆನಪಿಸಿಕೊಳ್ಳಬೇಕೆಂದು ಹೇಳುತ್ತೇನೆಂದರೆ, 1983ರಲ್ಲಿ ನಾನು ಅಸೆಂಬ್ಲಿಗೆ ಕಂಟೆಸ್ಟ್ ಮಾಡಬೇಕೆಂದು ಅರ್ಜಿಯನ್ನು ಹಾಕಿದವನು ಅಲ್ಲ, ಮತ್ತು ಕೇಳಿದವನು ಅಲ್ಲ ಮಾನ್ಯ ಎಸ್.ಆರ್. ಬೊಮ್ಮಾಯಿಯವರು ನಮ್ಮಂಥಾ ಅನೇಕ ಯುವಕರನ್ನು ಗುರುತಿಸಿ, ರಾಜಕಾರಣಕ್ಕೆ ತಂದಂಥವರು. ನನಗೆ ಆಶ್ಚರ್ಯವಾಯಿತು ನಾನು ಮನೆಯಲ್ಲಿ ಮಲಗಿದ್ದಾಗ ಅವತ್ತು ಫೈಲ್ ನಾಮಿನೇಷನ್ ಎಂದು ಟೆಲಿಗ್ರಾಂ ಬಂತು. ನಾನು ಯಾವ ಸಿದ್ಧತೆಯನ್ನು ಮಾಡಿಕೊಂಡಿಲ್ಲ, ದುಡ್ಡು ಇರಲಿಲ್ಲ, ಚುನಾವಣೆಗೆ ನಿಲ್ಲಬೇಕೆಂದು ಮನಸ್ಸು ಇರಲಿಲ್ಲ. ಅಂಥಾ ಒಂದು ಸಂದರ್ಭದಲ್ಲಿ

ನನ್ನನ್ನು ರಾಜಕಾರಣಕ್ಕೆ ತಂದಂಥಾ ಮಾನ್ಯ ಬೊಮ್ಮಾಯಿಯವರ ಹತ್ತಿರ ಒಂದು ದೊಡ್ಡ ಗುಣವನ್ನು ನಾನು ನೋಡಿದ್ದು ಏನೆಂದರೆ, ಸಾಮಾನ್ಯವಾಗಿ ಪಕ್ಷಗಳಲ್ಲಿ ಮತಭೇದಗಳು ಬಂದಾಗ ಮಾನ್ಯ ಎಸ್.ಆರ್. ಬೊಮ್ಮಾಯಿಯವರು ಮಾನ್ಯ ಹೆಚ್.ಡಿ. ದೇವೇಗೌಡರ ಮಧ್ಯೆ ಮಾನ್ಯ ರಾಮಕೃಷ್ಣ ಹೆಗಡೆಯವರ ಮಧ್ಯೆ, ರಾಜೀ ಪಂಚಾಯಿತಿಯನ್ನು ಮಾಡುವಂಥಾ ದೊಡ್ಡ ಜವಾಬ್ದಾರಿಯನ್ನು ಹೊತ್ತು ಬಹಳಷ್ಟು ಸಮಸ್ಯೆಗಳನ್ನು ಬಗೆಹರಿಸುವಂಥಾ ಕೆಲಸವನ್ನು ಮಾಡಿದ್ದರು. ಮಾನ್ಯ ಎಸ್.ಆರ್. ಬೊಮ್ಮಾಯಿಯವರು ಯಾವಾಗಲೂ ಆಶಾವಾದಿಯಾಗಿದ್ದರು. ಯಾವುದೇ ಜಟಿಲ ಸಮಸ್ಯೆಗಳು ಬಂದರೆ, ಬಗೆಹರಿಸುತ್ತೇನೆಂದು ಹೇಳುತ್ತಿದ್ದರು. ಮಾಡೋಣವೆನ್ನುವಂಥಾ ನಿರಂತರ ಆಶಾಭಾವನೆಯನ್ನು ಇಟ್ಟುಕೊಂಡಿದ್ದರು. ಮಾನ್ಯ ಎಸ್.ಆರ್. ಬೊಮ್ಮಾಯಿಯವರ ಇನ್ನೊಂದು ಹೆಚ್ಚಿನ ಗುಣವೆಂದರೆ, ಇವತ್ತು ನಾವು ಎಲ್ಲಾ ರಾಜಕಾರಣಿಗಳು ಅವರನ್ನು ಕಳೆದುಕೊಂಡಿದ್ದೇವೆ. ಅವರು ವ್ಯಕ್ತಿ ಆಧಾರಕ್ಕಿಂತ ಸಂಘಟನೆಗಳ ಮೇಲೆ ಬಹಳ ನಂಬಿಕೆ ಮತ್ತು ವಿಶ್ವಾಸವನ್ನು ಇಟ್ಟುಕೊಂಡಿದ್ದರು. ಇವರು ಸಂಘಟನೆ ಬಲ ಬೇಕು, ಇದರ ಮೂಲಕ ಕಾರ್ಯಕರ್ತರು ಬೆಳೆಯಬೇಕು. ಆ ಸಂಘಟನೆಯ ಶಕ್ತಿಯೇ ಒಂದು ರಾಜಕೀಯ ಶಕ್ತಿಯಾಗಬೇಕೆನ್ನುವಂಥಾದ್ದು ಇದ್ದಂಥಾ ಏಕೈಕ ವ್ಯಕ್ತಿ ಎಂದರೆ, ಅದು ಮಾನ್ಯ ಎಸ್.ಆರ್.ಬೊಮ್ಮಾಯಿಯೆಂದು ಹೇಳಿದರೆ, ತಪ್ಪಾಗುವುದಿಲ್ಲ.

******

ಓದು ಬರಹ ಬಾರದ ರೈತರಿಗೆ
ಇಂಗ್ಲಿಷ್ ನೋಟಿಸುಗಳನ್ನು ಕಳುಹಿಸಿ ಕೊಟ್ಟರೆ
ಏನು ಪ್ರಯೋಜನವೆಂದು ಕೇಳುತ್ತೇನೆ.
ಕನ್ನಡದಲ್ಲಿ ಪ್ರಿಂಟ್ ಆಗುವವರೆಗೂ
ನೋಟಿಸುಗಳನ್ನು ಕಳುಹಿಸಬೇಡಿ. ಇಲ್ಲ ರೈತನು
ಇಂಗ್ಲಿಷ್ ಕಲಿಯುವವರೆಗೂ ಈ ರೀತಿಯಾದ
ನೋಟಿಸುಗಳನ್ನು ಕಳುಹಿಸುವುದನ್ನು ನಿಲ್ಲಿಸಿ,

**– ಎಸ್.ಆರ್. ಬೊಮ್ಮಾಯಿ**

ಸಮಾಜದಲ್ಲಿ ನೂರಕ್ಕೆ
70 ಜನರಿಗೆ ಭೂಮಿ ಇಲ್ಲ.
ಅಂತಹವರಿಗೆ ಸಾಮಾಜಿಕ
ನ್ಯಾಯವನ್ನು ಕೊಡಬೇಕಾಗಿದೆ.

**– ಎಸ್.ಆರ್. ಬೊಮ್ಮಾಯಿ**

# ಪತ್ರಿಕಾ ಲೇಖನಗಳು

## ಹಳೆಯ ಗೆಳೆಯ ಬೊಮ್ಮಾಯಿ

– ಜಿ.ಎಸ್. ಆಮೂರ

ನನ್ನ ಹಾಗೂ ಬೊಮ್ಮಾಯಿಯವರ ಸ್ನೇಹ ಅರವತ್ತು ವರ್ಷಗಳಷ್ಟು ಹಳೆಯದು. ಕರ್ನಾಟಕ ಕಾಲೇಜಿನಲ್ಲಿ ನಾನು ಓದುತ್ತಿರುವಾಗ ಅವರ ಪರಿಚಯವಾಯಿತು. ಅದು ಎಂ.ಎನ್. ರಾಯರ ವಿಚಾರಧಾರೆ ನಾಡಿನ ತರುಣರನ್ನೂ ಅತ್ಯಂತಿಕವಾಗಿ ಪ್ರಭಾವಿಸಿದ ಕಾಲ.

ಕಾಂಗ್ರೆಸ್ ವಾತಾವರಣದಿಂದ ಬಂದ ಬೊಮ್ಮಾಯಿ (ಅವರ ಮಾವ ಹುರುಳಿಕೊಪ್ಪಿಯವರು ಮುಂಬೈ ವಿಧಾನಸಭೆಯ ಕಾಂಗ್ರೆಸ್ ಸದಸ್ಯರಾಗಿದ್ದರು) ಎಂ.ಎನ್.ರಾಯರ ಪ್ರಭಾವಕ್ಕೆ ಹೇಗೆ ಒಳಗಾದರು ಎನ್ನುವುದು ನನಗೆ ತಿಳಿಯದು. ಆದರೆ ನನಗೆ ಅವರ ಪರಿಚಯವಾಗುವ ಮೊದಲೇ ಅವರು ರಾಯ್‌ವಾದದ ಪ್ರಚಾರದಲ್ಲಿ ನಿರತರಾಗಿದ್ದರು. ದಾಮೋದರ ಚಿತ್ತಾಲ, ಎಂ.ಆರ್. ನೀಲೇಕಣಿ, ಎಂ.ಡಿ.ಚಂದಾವರಕರ ಮೊದಲಾದವರು ಅವರ ಜತೆಗಿದ್ದರು. ಅಖಿಲ ಭಾರತ ಮಟ್ಟದಲ್ಲಿ ರಾಯ್‌ವಾದಿಗಳೆಂದು ಹೆಸರು ಮಾಡಿದ ಬ್ಯಾರಿಸ್ಟರ್ ವಿ.ಎಂ.ತಾರಕುಂಡೆ, ಜೆ.ಡಿ.ಪಾರೀಖ್, ವಿ.ಬಿ.ಕರ್ಣಿಕ ಮೊದಲಾದ ನೇತಾರರನ್ನು ಧಾರವಾಡಕ್ಕೆ ಬರಮಾಡಿಕೊಂಡು ಬೊಮ್ಮಾಯಿಯವರು ಅವರ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಸ್ವತಃ ಎಂ.ಎನ್.ರಾಯರೇ ಇಲ್ಲಿಗೆ ಬಂದು ಭಾಷಣ ಕೊಟ್ಟಿದ್ದರು. ಕಾಂಗ್ರೆಸ್ ವಿರೋಧಿಯೆಂದರೆ ರಾಷ್ಟ್ರವಿರೋಧಿಯೆಂದೇ ತಿಳಿಯಲಾಗುತ್ತಿದ್ದ ಆ ದಿನಗಳಲ್ಲಿ ರಾಯಿಸ್ಟ್ ಸಭೆಗಳನ್ನು ಆಯೋಜಿಸುವುದೇ ಒಂದು ಸಾಹಸವಾಗುತ್ತಿತ್ತು. ಈ ಸಭೆಗಳಲ್ಲಿ ನಾನು ಹಾಗೂ ನನ್ನ ಆತ್ಮೀಯ ಗೆಳೆಯ ರಾಮಚಂದ್ರ ತಪ್ಪದೆ ಹಾಜರಿರುತ್ತಿದ್ದೆವು ಮತ್ತು ಪ್ರಶ್ನೆಗಳನ್ನು ಕೇಳುತ್ತಿದ್ದೆವು. ರಾಯ್‌ರ ವೈಜ್ಞಾನಿಕ ಮಾನವತಾವಾದ ರಾಜಕೀಯ ಸಮಸ್ಯೆಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಅವರ ರೀತಿ–ವಿಧಾನಗಳು ಹಾಗೂ ರಷ್ಯ, ಕ್ರಾಂತಿಗಳಲ್ಲಿ ಪ್ರತ್ಯಕ್ಷವಾಗಿ ಪಾಲುಗೊಂಡು ಅವರು ಗಳಿಸಿದ ಅನುಭವ ನಮ್ಮನ್ನು ಆಕರ್ಷಿಸಿದವು ಸ್ವಭಾವತಃ ನಾನು ರಾಜಕೀಯ ವ್ಯಕ್ತಿಯಲ್ಲವಾದರೂ ರಾಜಕೀಯದಲ್ಲಿ ನನ್ನನ್ನು ತೊಡಗಿಸಿಕೊಂಡೆ.

ನಾನು ಬಿ.ಎ.ದಲ್ಲಿದ್ದಾಗ ಎಂದರೆ 1948ರಲ್ಲಿ – ಸಾರ್ವತ್ರಿಕ ಚುನಾವಣೆಗಳು ನಡೆದವು. ಎಂ.ಎನ್. ರಾಯ್‌ರು ಸ್ಥಾಪಿಸಿದ ರ್‍ಯಾಡಿಕಲ್ ಡೆಮೊಕ್ರೆಟಿಕ್ ಪಾರ್ಟಿ (ಆರ್‌ಡಿಪಿ) ಈ ಚುನಾವಣೆಗಳಲ್ಲಿ ಭಾಗವಹಿಸಲು ನಿರ್ಧರಿಸಿ ತನ್ನ ಹುರಿಯಾಳುಗಳನ್ನು ನಿಲ್ಲಿಸಿತು, ಬ್ಯಾಡಗಿಯಲ್ಲಿ ಲಿಂಗರಾಜ ಮುದ್ದಣ್ಣವರ, ರಾಣಿಬೆನ್ನೂರಿನಲ್ಲಿ ಸೊಲ್ಲಾಪುರದ ಪಂಚವ್ವಬಾಯಿ ಸರ್ದಾರ ಅವರು ಸ್ಪರ್ಧಿಸಿದರು. ಬೊಮ್ಮಾಯಿಯವರ ನೇತೃತ್ವದಲ್ಲಿ ನಾವು ಬ್ಯಾಡಗಿಯಲ್ಲಿ ತಳವೂರಿದೆವು. ಈ ಸಂದರ್ಭದ ಎರಡು ಪ್ರಸಂಗಗಳು ನನ್ನ ನೆನೆಪಿಗೆ ಬರುತ್ತವೆ. ಪ್ರಚಾರಕ್ಕೆಂದು ನಾವು ಮೊಟೇಬೆನ್ನೂರಿಗೆ ಹೋಗಿದ್ದೆವು. ಅದು ಕಾಂಗ್ರೆಸ್ ಹುರಿಯಾಳಾಗಿದ್ದ ಕೆ.ಎಫ್.ಪಾಟೀಲರ ಭದ್ರಕೋಟೆ, ಕಷ್ಟಪಟ್ಟು ಸಭೆ ಹೂಡಿಸಿದೆವು. ಆದರೆ ನಮ್ಮ ಭಾಷಣಗಳು ಪ್ರಾರಂಭವಾದಂತೆ ಅಸಹ್ಯ ವಸ್ತುಗಳಿಂದ ನಮ್ಮ ಮೇಲೆ ಹಲ್ಲೆ ನಡೆಯಿತು. ಪರಿಸ್ಥಿತಿ ಹದಗೆಟ್ಟದ್ದನ್ನು ನೋಡಿ ಸ್ವತಃ ಕೆ.ಎಫ್.ಪಾಟೀಲರೇ ನಮ್ಮನ್ನು ಬ್ಯಾಡಗಿಗೆ ಸುರಕ್ಷಿತವಾಗಿ ಕಳಿಸಿಕೊಟ್ಟರು!

ಇನ್ನೊಂದು ಪ್ರಸಂಗ ತಮ್ಮಿನಕಟ್ಟಿಯಲ್ಲಿ ನಡೆಯಿತು. ಅಲ್ಲಿ ನಮ್ಮ ಪಾರ್ಟಿಗೆ ಕೆಲವರು (ನಾವು ಬ್ರಿಟಿಷ್ ಪರ ಎಂಬ ಭ್ರಮೆಯಿಂದ) ಸಮರ್ಥನೆ ನೀಡುತ್ತಿದ್ದರು. ನಾನು ಹಾಗೂ ಚಂದಾವರಕರ ಪ್ರವಾಸಕ್ಕೆಂದು ಆ ಊರಿಗೆ ಹೋದಾಗ ನಮ್ಮ ಸಮರ್ಥಕರು ಹೆದರಿ ನಮ್ಮನ್ನು ತಿರುಗಿ ಕಳಿಸಿಬಿಟ್ಟರು. ಮೊಟೇಬೆನ್ನೂರಿನಂತೆ ತುಮ್ಮಿನಕಟ್ಟಿಯೂ ಕಾಂಗ್ರೆಸ್ ಭದ್ರಕೋಟೆ. ರಾತ್ರೋರಾತ್ರಿ ನಾನು ಮತ್ತು ಚಂದಾವರಕರ ಅಲ್ಲಿಂದ ಪಲಾಯನ ಹೇಳಿದ್ದನ್ನು ನಾನು ಮರೆಯುವಂತಿಲ್ಲ. ಬೊಮ್ಮಾಯಿಯವರು ನನ್ನನ್ನು ಸೊಲ್ಲಾಪುರಕ್ಕೂ ಕಳಿಸಿದ್ದರು. ಅಲ್ಲಿ ಮಹಾಜನ ಹುರಿಯಾಳಾಗಿದ್ದರು. ನಮ್ಮ ಎಲ್ಲ ಹುರಿಯಾಳುಗಳೂ ಸೋತರೆನ್ನುವುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ಮಹಾಜನ ಅವರು ಅದ್ಭುತ ಮಾತುಗಾರರಾಗಿದ್ದರು, ಅವರಿಗೆ ಮಾತುಗಳು ಬರಲಿಲ್ಲ. ಆದರೆ ಚುನಾವಣೆಯ ನಂತರ 'ನಾವು ಸೋತದ್ದೇಕೇ?' ಎಂಬ ಅವರ ಭಾಷಣಕ್ಕೆ ಮಾತ್ರ ಸಹಸ್ರಾರು ಸಂಖ್ಯೆಯಲ್ಲಿ ಜನ ನೆರೆದಿದ್ದರು. ಇದೂ ಒಂದು ನಮ್ಮ ದೇಶದ ರಾಜಕೀಯದ ವೈಶಿಷ್ಟ್ಯ!

## ದಾರಿ ಕವಲು

ಮುಂದೆ ಮಾತ್ರ ನಮ್ಮ ದಾರಿಗಳು ಬೇರೆ ಬೇರೆಯಾದವು. ನಾವು ಎಂ.ಎ. ಮುಗಿಸಿ ಇಂಗ್ಲಿಷ್ ಅಧ್ಯಾಪಕನಾದೆ. ಅವರು ಬೆಳಗಾವಿಯಲ್ಲಿ ಕಾನೂನು ಪರೀಕ್ಷೆ ಪಾಸಾಗಿ ವಕೀಲಿ ವೃತ್ತಿ ಪ್ರಾರಂಭಿಸಿದರು. ಬೆಳಗಾವಿಯಲ್ಲಿದ್ದಾಗಲೂ ಅವರು ಸುಖಟಣ್‌ಕರ್, ರಂಗನಾಥರಾವ್, ರಾಜಗೋಪಾಲ್ ಮೊದಲಾದ ರಾಯ್‌ವಾದಿ

ಚಿಂತಕರ ಸಂಪರ್ಕದಲ್ಲಿದ್ದರು. ಕರ್ನಾಟಕ ವಿಶ್ವವಿದ್ಯಾಲಯವೂ ಸೇರಿದಂತೆ ಹಲವಾರು ಸಂಘ, ಸಂಸ್ಥೆಗಳಲ್ಲಿ ಕ್ರಿಯಾಶೀಲರಾಗಿದ್ದರು. ನಂತರದ ಅವರ ರಾಜಕೀಯ ಜೀವನ ಸಾಕಷ್ಟು ಪರಿಚಿತವಾಗಿದೆ. ವಿಧಾನಸಭೆಯ ಸದಸ್ಯತ್ವ, ಪಿ.ಎ.ಸಿ. ಅಧ್ಯಕ್ಷರಾಗಿ ಅವರು ಮಾಡಿದ ಕೆಲಸ, ರಾಮಕೃಷ್ಣ ಹೆಗಡೆಯವರ ಕ್ಯಾಬಿನೆಟ್ಟಿನಲ್ಲಿ ಮಂತ್ರಿಯಾಗಿ ನಂತರ ಮುಖ್ಯಮಂತ್ರಿಯಾಗಿ ಮಾಡಿದ ಸಾಧನೆ ಈಗ ಇತಿಹಾಸವಾಗಿವೆ. ಜನತಾದಳವನ್ನು ಕಟ್ಟಿದವರಲ್ಲಿ ಅವರೂ ಪ್ರಮುಖರು ಕೆಲಕಾಲ ಅದರ ಅಧ್ಯಕ್ಷರೂ ಆಗಿದ್ದರು. ನಂತರ ಮಾನವ ಸಂಪನ್ಮೂಲ ಇಲಾಖೆಯ ಮಂತ್ರಿಯಾಗಿಯೂ ಕೆಲಸ ಮಾಡಿದರು.

ಅವರು ಎಚ್.ಆರ್.ಡಿ.ಯಲ್ಲಿ ಮಂತ್ರಿಯಾಗಿದ್ದಾಗ ನಡೆದ ಘಟನೆಯೊಂದನ್ನು ನಾನು ನಮೂದಿಸಲೇಬೇಕು. ಆ ವರ್ಷ ನಾನು ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಸ್ವೀಕರಿಸಲು ದೆಹಲಿಗೆ ಹೋಗಿದ್ದೆ. ವಿ.ಪಿ.ಬಳಿಗಾರರ ಮೂಲಕ ನಾನು ಇಂಡಿಯಾ ಇಂಟರ್‌ನ್ಯಾಷನಲ್ ಇನ್ಸ್‌ಟಿಟ್ಯೂಟ್‌ನಲ್ಲಿದ್ದುದನ್ನು ಹುಡುಕಿದ ಬೊಮ್ಮಾಯಿಯವರು ನನ್ನನ್ನು ಬೆಳಗಿನ ಉಪಾಹಾರಕ್ಕೆ ಕರೆದರು. ನನ್ನ ಪತ್ನಿ ಹಾಗೂ ಮೊಮ್ಮಗನ ಜತೆಗೆ ಒಂದು ಗಂಟೆಗೂ ಮೀರಿ ಅವರ ಜತೆಗಿದ್ದೆ. ಹಳೆಯ ಸಲುಗೆಯಿಂದಲೇ ನನ್ನೊಡನೆ ನಡೆದುಕೊಂಡರು. ಏಕವಚನದಲ್ಲಿಯೇ ಮಾತಾಡಿದರು. ನಾನು ಧಾರವಾಡಕ್ಕೆ ಮರಳಿದ ನಂತರ ನನಗೆ ಆಶ್ಚರ್ಯ ಕಾದಿತ್ತು. ಇದರ ಸ್ಪಷ್ಟಸೂಚನೆ ನನಗೆ ಬಳಿಗಾರರಿಂದಲೇ ದೊರಕಿತ್ತು. ಮೂರು ವರ್ಷಗಳ ಅವಧಿಗಾಗಿ ರಾಷ್ಟ್ರಾಧ್ಯಕ್ಷರಿಂದ ಅವರ ನಾಮಿನಿಯಾಗಿ ಶಾಂತಿನಿಕೇತನದ ಕಾರ್ಯಕಾರಿಣಿಗೆ ನನ್ನ ನೇಮಕವಾಗಿತ್ತು. ಇದು ನನಗೆ ಬೇಕಿರಲಿಲ್ಲ. ಆದರೆ ಅದರ ಗೌರವವನ್ನು ತಿಳಿದು ನಾನು ಅದನ್ನು ಸ್ವೀಕರಿಸಿದೆ.

ಅವರ ಕೇಂದ್ರ ಮಂತ್ರಿ ಪದವಿಯ ಕೊನೆಕೊನೆಯಲ್ಲಿ ಧಾರವಾಡದ ಬೇಂದ್ರೆ ಭವನಕ್ಕಾಗಿ ಧನಸಹಾಯ ಕೋರಿ ನಾನು ಬರೆದ ಪತ್ರಕ್ಕೆ ಸ್ಪಂದಿಸಿ ಆರು ಲಕ್ಷಗಳಷ್ಟು ದೊಡ್ಡ ರಖಮನ್ನು ತಮ್ಮ ಖಾತೆಯಿಂದ ಕೊಡಿಸಿದರು.

ಧಾರವಾಡಕ್ಕೆ ಅವರು ಭೇಟಿ ನೀಡಿದಾಗ ಅವರ ಕರೆಯ ಮೇರೆಗೆ ಅವರನ್ನು ಕಂಡದ್ದುಂಟು. ಒಮ್ಮೆ ಎಂ.ಆರ್. ನೀಲಕೇಣಿಯವರ ಮನೆಯಲ್ಲಿಯೂ ನಾವು ಹಳೆಯ ರಾಯ್‌ವಾದಿಗಳು ಸೇರಿದ್ದೆವು. ಅವರಲ್ಲಿ ಸಾಕಷ್ಟು ಬದಲಾವಣೆಯಾದದ್ದು ನನ್ನ ಗಮನಕ್ಕೆ ಬಂತು, ಪಕ್ಷ ರಾಜಕಾರಣದಿಂದ ಅವರು ಬೇಸತ್ತಂತೆ ಕಂಡು ಬಂದಿತು. ಹಣ ಮತ್ತು ಜಾತಿಗಳು ರಾಜಕಾರಣದಲ್ಲಿ ವಹಿಸುತ್ತಿರುವ ಪಾತ್ರದ ಬಗ್ಗೆ ಬಿಚ್ಚು ಮನಸ್ಸಿನಿಂದ ನನ್ನಲ್ಲಿ ಮಾತಾಡಿದರು. ಅವರನ್ನು ನಾನು ಕೊನೆಯ ಸಲ ಕಂಡದ್ದು ಬೆಂಗಳೂರಿನ ಅವರ ಮನೆಯಲ್ಲಿ, ಅವರು ಅದೇ ಆಗ ಚೆಕ್‌ಅಪ್‌ಗೆ

ಹೋದವರು ಆಸ್ಪತ್ರೆಯಿಂದ ಮರಳಿದ್ದರು. ನನ್ನ ಜತೆಗೆ ಶಾಂತಿನಾಥ ದೇಸಾಯಿಯವರೂ ಇದ್ದರು. ಬಳಲಿದಂತೆ ಕಂಡರೂ ಒಂದು ಗಂಟೆಯ ಕಾಲ ನಮ್ಮೊಡನೆ ಮಾತನಾಡಿದರು. ಜನತಾದಳದ ಕಾರ್ಯದ ಬಗ್ಗೆ ಅವರು ನನ್ನ ಅಭಿಪ್ರಾಯ ಕೇಳಿದಾಗ ಜನತೆಯನ್ನು ಸರಕಾರಾವಲಂಬಿ ಮಾಡುವ ನೀತಿ ಸರಿಯಲ್ಲ ಎಂದು ನಾನು ಸ್ಪಷ್ಟವಾಗಿಯೇ ಹೇಳಿದೆ. ರಾಮಕೃಷ್ಣ ಹೆಗಡೆಯವರನ್ನು ಕೇಂದ್ರ ರಾಜಕೀಯದಿಂದ ಕರ್ನಾಟಕಕ್ಕೆ ಎಳೆದದ್ದು ತಪ್ಪು ಹೆಜ್ಜೆ ನೀವು ಮತ್ತು ದೇವೇಗೌಡರು ಇಲ್ಲಿಯ ರಾಜಕಾರಣವನ್ನು ನೋಡಿಕೊಳ್ಳಬೇಕಾಗಿತ್ತು ಎಂದೂ ಹೇಳಿದೆ. 'ವಾರಕ್ಕೊಮ್ಮೆಯಾದರೂ ಬಂದುಹೋಗು' ಎಂದು ನನಗೆ ಹೇಳಿದ್ದರು. ಆದರೆ, ರಾಜಕಾರಣಿಗಳಿಂದ ದೂರ ಉಳಿಯುವ ನನ್ನ ನೀತಿಯಿಂದಾಗಿ ನಾನು ಹೋಗಲಿಲ್ಲ.

ಬೊಮ್ಮಾಯಿಯವರ ರಾಜಕೀಯ ತಿಳಿವಳಿಕೆ, ಅವರ ಸಂಘಟನಾ ಚಾತುರ್ಯ, ಕ್ರಿಯಾಶೀಲತೆ, ದೂರದರ್ಶಿತ್ವ ಇವುಗಳನ್ನು ನಾನು ದೂರದಿಂದಲೇ ನೋಡಿ ಮೆಚ್ಚಿಕೊಂಡಿದ್ದೇನೆ. ಅವರ ಅಪಾರ ಅನುಭವ ಹಾಗೂ ಕಾರ್ಯಕ್ಷಮತೆಗಳನ್ನು ನಾಡು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳಬಹುದಿತ್ತು. ಇಂದಿನ ರಾಜಕೀಯ ಸಂದರ್ಭದಲ್ಲಿಯಂತೂ ಬೊಮ್ಮಾಯಿಯವರ ತಾಳ್ಮೆಯ ಹಾಗೂ ಆರೋಗ್ಯಪೂರ್ಣ ರಾಜಕಾರಣದ ಅವಶ್ಯಕತೆಯಿತ್ತು. ಆದರೆ, ಅವರು ಈಗ ನಮ್ಮೊಡನಿಲ್ಲ. ಅವರ ಕಾರ್ಯದ ವಸ್ತುನಿಷ್ಠ ವಿವೇಚನೆಯೊಂದೇ ನಾವು ಅವರಿಗೆ ಸಲ್ಲಿಸಬಹುದಾದ ಕಾಣಿಕೆಯಾಗಿದೆ.

**ಕೃಪೆ: ವಿಜಯ ಕರ್ನಾಟಕ**

# ಶ್ರೇಷ್ಠ ರಾಜಕಾರಣಿ – ಎಸ್.ಆರ್. ಬೊಮ್ಮಾಯಿ

– ಕೆ.ವಿ. ವಾಸು

ಕರ್ನಾಟಕದ ಮಾಜಿ ಮುಖ್ಯಮಂತ್ರಿ ಹಾಗೂ ಕೇಂದ್ರದ ಮಾಜಿ ಸಚಿವ ಸೋಮಪ್ಪ ರಾಯಪ್ಪ ಬೊಮ್ಮಾಯಿಯವರ ನಿಧನದೊಂದಿಗೆ ಜನತಾ ಪರಿವಾರದ ಮತ್ತೊಂದು ಅಮೂಲ್ಯವಾದ ಕೊಂಡಿ ಕಳಚಿ ಬಿದ್ದಂತಾಗಿದೆ.

ಸಮಾಜವಾದದ ಪ್ರತಿಬಿಂಬವಾಗಿದ್ದ ಬೊಮ್ಮಾಯಿಯವರು ಸ್ವಾತಂತ್ರ್ಯ ಹೋರಾಟಗಾರರಾಗಿ ರಾಷ್ಟ್ರಕ್ಕೆ, ರಾಜ್ಯಕ್ಕೆ ಗಣನೀಯ ಹಾಗೂ ಅವಿಸ್ಮರಣೀಯ ಸೇವೆ ಸಲ್ಲಿಸಿದ್ದಾರೆ. 1975ರಲ್ಲಿ ರಾಜ್ಯ ವಿಧಾನ ಪರಿಷತ್ತಿಗೆ ಆಯ್ಕೆಯಾದ ಬೊಮ್ಮಾಯಿಯವರು, ಮಾಜಿ ಪ್ರಧಾನ ಮಂತ್ರಿ ಇಂದಿರಾ ಗಾಂಧಿಯವರು ದೇಶದ ಮೇಲೆ ಹೇರಿದ್ದ ತುರ್ತು ಪರಿಸ್ಥಿತಿಯ ವಿರುದ್ಧ ಹೋರಾಡಿದ್ದರು. ಕೆಲವು ಕಾಲ ಭೂಗತರಾಗಿದ್ದ ಬೊಮ್ಮಾಯಿಯವರು ಸಮಾನ ಮನಸ್ಕ ನಾಯಕರೊಡಗೂಡಿ ತುರ್ತು ಪರಿಸ್ಥಿತಿಯ ವಿರುದ್ಧ ನಿರಂತರ ಹೋರಾಟ ಮಾಡಿದರು. 1977ರಲ್ಲಿ ರಾಜ್ಯ ಜನತಾ ಪಕ್ಷದ ಉಪಾಧ್ಯಕ್ಷರಾದ ಬೊಮ್ಮಾಯಿಯವರು, 1977ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಜನತಾ ಪಕ್ಷದ ವಿಜಯಕ್ಕೆ ಸಾಕಷ್ಟು ಕೊಡುಗೆ ಸಲ್ಲಿಸಿದರು.

1978ರಲ್ಲಿ ಹೃದಯಾಘಾತಕ್ಕೆ ತುತ್ತಾಗಿದ್ದ ಬೊಮ್ಮಾಯಿಯವರು ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ ದಾಖಲಾಗಿದ್ದರು. ಆಸ್ಪತ್ರೆಯ ಹಾಸಿಗೆಯಲ್ಲಿ ಮಲಗಿಯೇ, ಅಲ್ಲಿಂದಲೇ ಹುಬ್ಬಳ್ಳಿ ಗ್ರಾಮೀಣ ಕ್ಷೇತ್ರದಿಂದ ಸ್ಪರ್ಧಿಸಿ ರಾಜ್ಯ ವಿಧಾನಸಭೆಗೆ ಆಯ್ಕೆಯಾಗಿ, ತಮ್ಮ ಜನಪ್ರಿಯತೆಯನ್ನು ಸಂಶಯಕ್ಕೆ ಆಸ್ಪದವಿಲ್ಲದಂತೆ ಸೊಗಸಾಗಿ ಸಾಬೀತು ಪಡಿಸಿದರು. 1980ರಲ್ಲಿ ರಾಜ್ಯ ಜನತಾ ಪಕ್ಷದ ಅಧ್ಯಕ್ಷರಾಗಿ, ಪಕ್ಷದ ಸಂಘಟನೆಗೆ ಗಮನ ಹರಿಸಿದರು. 1982ರ ಅಂತ್ಯದಲ್ಲಿ ರಾಜ್ಯ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಆರ್.ಗುಂಡೂರಾವ್ ನೇತೃತ್ವದ ಕಾಂಗ್ರೆಸ್ ಧೂಳೀಪಟವಾಗಿ, ಜನತಾ ರಂಗ ಏಕೈಕ ದೊಡ್ಡ ಪಕ್ಷವಾಗಿ ಹೊರ ಹೊಮ್ಮಿತು. ಆಗ ಮುಖ್ಯಮಂತ್ರಿಯ ಹುದ್ದೆಗೆ ಪ್ರಬಲವಾಗಿ ಹೇಳಿ ಬರುತ್ತಿದ್ದ ಹೆಸರು ಎಸ್.ಆರ್.ಬೊಮ್ಮಾಯಿ. ಇದೇ ಸಮಯಕ್ಕೆ ಸರಿಯಾಗಿ ಹೆಚ್.ಡಿ.ದೇವೇಗೌಡ, ನಜೀರ್‌ಸಾಬ್, ಬಂಗಾರಪ್ಪ ಮುಂತಾದ ನಾಯಕರು ಮುಖ್ಯಮಂತ್ರಿ ಸ್ಥಾನಕ್ಕೆ ರಚ್ಚೆ ಹಿಡಿದಾಗ, ಮಧ್ಯಸ್ಥಿಕೆ ವಹಿಸಿದ ಹಿರಿಯ ನಾಯಕ ಎಸ್.ನಿಜಲಿಂಗಪ್ಪನವರು ರಾಮಕೃಷ್ಣ ಹೆಗಡೆಯವರನ್ನು

ಸರ್ವಾನುಮತದಿಂದ ಜನತಾ ರಂಗ ಶಾಸಕಾಂಗ ಪಕ್ಷದ ನಾಯಕನನ್ನಾಗಿ ಆರಿಸಿ ಮುಖ್ಯಮಂತ್ರಿಯ ಗಾದಿಯ ಮೇಲೆ ಕುಳ್ಳಿರಿಸಿದ್ದು ಈಗ ಗತ ಇತಿಹಾಸ. ದಿವಂಗತ ರಾಮಕೃಷ್ಣ ಹೆಗಡೆಯವರ ಅಂತರಂಗದ ಸ್ನೇಹಿತರಲ್ಲಿ ಪ್ರಮುಖರಾಗಿದ್ದ ಬೊಮ್ಮಾಯಿಯವರು, ರಾಮಕೃಷ್ಣ ಹೆಗಡೆಯವರು ಸಚಿವ ಸಂಪುಟದಲ್ಲಿ ಕಂದಾಯ, ಹಣಕಾಸು ಖಾತೆಗಳಂತ ಪ್ರಮುಖ ಖಾತೆಗಳನ್ನು ಯಶಸ್ವಿಯಾಗಿ ನಿರ್ವಹಿಸಿ, ಓರ್ವ ಯಶಸ್ವಿ ಆಡಳಿತಗಾರರೆನ್ನಿಸಿಕೊಂಡರು. 1988ರಲ್ಲಿ ಟೆಲಿಫೋನ್ ಕದ್ದಾಲಿಕೆ ಪ್ರಕರಣದಲ್ಲಿ ರಾಮಕೃಷ್ಣ ಹೆಗಡೆಯವರು ರಾಜೀನಾಮೆ ನೀಡಿದಾಗ ಎಸ್.ಆರ್.ಬೊಮ್ಮಾಯಿಯವರು ಜನತಾ ಪಕ್ಷದ ಶಾಸಕಾಂಗ ಪಕ್ಷದ ನಾಯಕರಾಗಿ ಆಯ್ಕೆಯಾಗಿ 1988ರ ಆಗಸ್ಟ್ 13 ರಂದು ರಾಜ್ಯದ 11ನೇ ಮುಖ್ಯಮಂತ್ರಿಯಾಗಿ ಅಧಿಕಾರದ ಪ್ರಮಾಣ ವಚನ ಸ್ವೀಕರಿಸಿದರು, ಬೊಮ್ಮಾಯಿಯವರ ನಾಯಕತ್ವವನ್ನು ಮಾನಸಿಕವಾಗಿ ಒಪ್ಪಿಕೊಳ್ಳಲು ಸಿದ್ಧರಿರದ ಹೆಚ್.ಡಿ.ದೇವೇಗೌಡರ ಚಾಣಾಕ್ಷ ರಾಜತಂತ್ರಗಳು ಪಕ್ಷದಲ್ಲಿ ದಮನ ಮಾಡಲಾಗದಷ್ಟು ಭಿನ್ನಮತ ಸೃಷ್ಟಿಸಿ, ರಾಜ್ಯದಲ್ಲಿ ಅರಾಜಕತೆ ಉಂಟಾಗಿ ಕೊನೆಗೆ ಅಂದಿನ ರಾಜ್ಯಪಾಲ ಪಿ.ವೆಂಕಟಸುಬ್ಬಯ್ಯ ರಾಜ್ಯ ಸರ್ಕಾರವನ್ನು ವಜಾ ಮಾಡಿ ರಾಷ್ಟ್ರಪತಿ ಆಡಳಿತ ಹೇರಿದರು.

ಇದರಿಂದ ಕೆರಳಿ ಕೆಂಡಾಮಂಡಲರಾದ ಬೊಮ್ಮಾಯಿಯವರು ರಾಜ್ಯಪಾಲರ ನಿರ್ಧಾರದ ವಿರುದ್ಧ ಸುಪ್ರೀಂಕೋರ್ಟಿನ ಮೊರೆ ಹೋದರು. ಈ ಪ್ರಕರಣವನ್ನು 1994ರಲ್ಲಿ ವಿಲೇವಾರಿ ಮಾಡಿದ ಸುಪ್ರೀಂ ಕೋರ್ಟ್ ರಾಷ್ಟ್ರಪತಿ ಆಡಳಿತವನ್ನು ಹೇರುವ ಸಂದರ್ಭಗಳಲ್ಲಿ ರಾಜ್ಯಪಾಲರು ಅನುಸರಿಸಬೇಕಾದ ಮಾರ್ಗದರ್ಶಿ ಸೂತ್ರಗಳನ್ನು ಪ್ರಕಟಿಸಿತು. ಅಲ್ಲದೆ ಮುಖ್ಯಮಂತ್ರಿಯ ಬಹುಮತವನ್ನು ವಿಧಾನಸಭೆಯಲ್ಲೇ ರುಜುವಾತು ಪಡಿಸಬೇಕೆಂದು ಹೇಳಿತು. ಅಂದಿನಿಂದ ಈ ಪ್ರಕರಣ "ಬೊಮ್ಮಾಯಿ ಪ್ರಕರಣ" ಎಂದು ಹೆಸರುವಾಸಿಯಾಯಿತಲ್ಲದೆ, 356ನೇ ವಿಧಿ ಪ್ರಯೋಗಿಸಿ ರಾಜ್ಯ ಸರ್ಕಾರವನ್ನು ವಜಾ ಮಾಡಲು ಮುಂದಾಗುವ ರಾಜ್ಯಪಾಲರಿಗೆ ಬೈಬಲ್ ಆಯಿತು. ಸುಪ್ರೀಂ ಕೋರ್ಟಿನ ಈ ಚಾರಿತ್ರಿಕ ತೀರ್ಪಿನಿಂದಾಗಿ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳನ್ನು ಅಡ್ಡಾದಿಡ್ಡಿಯಾಗಿ ವಜಾ ಮಾಡುವ ಪರಿಪಾಠ ನಿಂತಿದೆ. ಕರ್ನಾಟಕದ ಪ್ರಸಕ್ತ ರಾಜಕೀಯ ಬಿಕ್ಕಟ್ಟಿನಲ್ಲಿಯೂ ಸಹ ರಾಜ್ಯಪಾಲರಾದ ರಾಮೇಶ್ವರ ಠಾಕೂರ್ ವಿಧಾನಸಭೆಯನ್ನು ವಿಸರ್ಜಿಸದೆ ಅಮಾನತ್ತಿನಲ್ಲಿಡಲು ಕೇಂದ್ರಕ್ಕೆ ಶಿಫಾರಸ್ಸು ಮಾಡಿದರು ಎಂದು ಹೇಳಲಾಗುತ್ತಿದೆ. ಏಕೆಂದರೆ ಬೊಮ್ಮಾಯಿ ಪ್ರಕರಣದ ಪ್ರಕಾರ ಪಾರ್ಲಿಮೆಂಟ್ ರಾಷ್ಟ್ರಪತಿ ಆಡಳಿತ ಹೇರುವ ಆದೇಶವನ್ನು ಸ್ವೀಕರಿಸದ ಹೊರತು ವಿಧಾನಸಭೆಯನ್ನು ವಿಸರ್ಜಿಸುವಂತಿಲ್ಲ. ಈ ರೀತಿ ಬೊಮ್ಮಾಯಿಯವರ ಪ್ರಾಮಾಣಿಕ ಹೋರಾಟ ಒಂದು ಹೊಸ ರಾಜಧರ್ಮವನ್ನೇ ಸೃಷ್ಟಿಸಿದೆ.

ತಮ್ಮ ನೇತೃತ್ವದ ರಾಜ್ಯ ಸರ್ಕಾರ ವಜಾಗೊಂಡ ಬಳಿಕ ರಾಷ್ಟ್ರ ರಾಜಕಾರಣದತ್ತ ತಲೆ ಹಾಕಿದ ಬೊಮ್ಮಾಯಿಯವರು 1990 ರಲ್ಲಿ ಜನತಾದಳದ ರಾಷ್ಟ್ರೀಯ ಅಧ್ಯಕ್ಷರಾಗಿ ಆಯ್ಕೆಗೊಂಡರು ಈ ಅವಧಿಯಲ್ಲಿ ಉತ್ತರಪ್ರದೇಶ, ಗುಜರಾತ್, ಬಿಹಾರ್, ಒರಿಸ್ಸಾ ಮತ್ತು ಹರಿಯಾಣದಲ್ಲಿ ಪಕ್ಷವನ್ನು ಅಧಿಕಾರಕ್ಕೆ ತರುವಲ್ಲಿ ಯಶಸ್ವಿಯಾದರು. ಅನಂತರ 1996ರಲ್ಲಿ ಪ್ರಧಾನಮಂತ್ರಿಯಾಗಿ ಆಯ್ಕೆಯಾದ ದೇವೇಗೌಡರ ಸಂಪುಟದಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರಾಗಿ ಉತ್ತಮ ಕೆಲಸ ಮಾಡಿದರು. ದೇವೇಗೌಡರ ಜೊತೆ ಭಿನ್ನಾಭಿಪ್ರಾಯಗಳಿದ್ದರೂ ಅವರ ಜೊತೆಗೂಡಿ ಕೆಲಸ ಮಾಡಿದರು.

ಮಾಜಿ ಮುಖ್ಯಮಂತ್ರಿ ದಿವಂಗತ ಜೆ.ಹೆಚ್.ಪಟೇಲ್ ಅವರಿಗೆ ತೀವ್ರ ನಿಕಟವರ್ತಿಗಳಾಗಿದ್ದ ಬೊಮ್ಮಾಯಿಯವರು ದೇವೇಗೌಡರನ್ನು ಬಹಿರಂಗವಾಗಿ ಎದುರು ಹಾಕಿಕೊಳ್ಳಲಾರದಂತಹ ಪರಿಸ್ಥಿತಿ ತಲುಪಿದ್ದರು. ದಿವಂಗತ ರಾಮಕೃಷ್ಣ ಹೆಗಡೆಯವರ ಪರಮಾಪ್ತರಾಗಿದ್ದ ಬೊಮ್ಮಾಯಿಯವರು ರಾಮಕೃಷ್ಣ ಹೆಗಡೆ ಕೈಗೊಂಡ ಹಲವಾರು ಜನಪರ ಕಾರ್ಯಕ್ರಮಗಳಿಗೆ ಪ್ರೇರಕ ಶಕ್ತಿಯಾಗಿದ್ದರೆಂಬುದು ಇಲ್ಲಿ ವಿಶೇಷವಾಗಿ ಉಲ್ಲೇಖನೀಯ.

ವಕೀಲರಾಗಿ ವೃತ್ತಿ ಜೀವನ ಆರಂಭಿಸಿದರೂ ರಾಜಕೀಯ ಅವರನ್ನು ಕೈ ಬೀಸಿ ಕರೆಯಿತು. ಎಂ.ಎನ್.ರಾಯ್‌ರವರ ಸಿದ್ಧಾಂತಗಳಿಗೆ ಮಾರು ಹೋದ ಬೊಮ್ಮಾಯಿಯವರು ತಮ್ಮ ಭವಿಷ್ಯವನ್ನು ರಾಜ್ಯ ಹಾಗೂ ರಾಷ್ಟ್ರ ರಾಜಕಾರಣದಲ್ಲಿ ಸಾಕ್ಷಾತ್ಕರಿಸಿಕೊಂಡರು.

2004ರಿಂದ ಸಕ್ರಿಯ ರಾಜಕೀಯದಿಂದಲೂ ದೂರವಾಗಿದ್ದ ಬೊಮ್ಮಾಯಿಯವರು ಅನಾರೋಗ್ಯದ ಕಾರಣದಿಂದ ಹಾಸಿಗೆ ಹಿಡಿದಿದ್ದರೂ ಪ್ರಚಲಿತ ರಾಜಕೀಯ ವಿದ್ಯಮಾನಗಳಿಗೆ ನಿರಂತರವಾಗಿ ಸ್ಪಂದಿಸುವ ಶಕ್ತಿಯನ್ನು ಕಡೆಯ ಗಳಿಗೆಯವರೆಗೂ ಉಳಿಸಿಕೊಂಡಿದ್ದು ಅವರ ಹೆಗ್ಗಳಿಕೆಯಾಗಿದೆ.

ತಮ್ಮ 83 ವರ್ಷಗಳ ಸಾರ್ಥಕ ಬದುಕಿನಲ್ಲಿ ರಾಜ್ಯ ಹಾಗೂ ರಾಷ್ಟ್ರಕ್ಕೆ ಉತ್ತಮ ಕೊಡುಗೆಗಳನ್ನು ನೀಡಿರುವ ಎಸ್.ಆರ್. ಬೊಮ್ಮಾಯಿಯವರು ಬಹುಕಾಲ ನೆನಪಿನಲ್ಲಿ ಉಳಿಯಬಲ್ಲ ಶ್ರೇಷ್ಠ ರಾಜಕಾರಣಿ.

**ಕೃಪೆ: ಕನ್ನಡ ಪ್ರಭ**

ನಾಗರಿಕರಿಗೆ ಜೀವನ ನಡೆಸಲು ಸಾಧ್ಯವಾಗದ ರೀತಿಯಲ್ಲಿ ಬೆಲೆಗಳು ಏರಿಕೆಯಾದಾಗ, ಮನೆಯ ಮಕ್ಕಳಿಗೆ ಒಂದು ಮುಷ್ಟಿ ಅನ್ನ ಕೊಡುವುದಕ್ಕೆ ಕಷ್ಟವಾದಾಗ, ಬೆಲೆ ಏರಿಕೆ ವಿರುದ್ಧ ಪ್ರತಿಭಟನೆ ಮಾಡುವುದು ಸಹಜ, ಬೆಲೆ ಏರಿಕೆ ಇಡೀ ರಾಷ್ಟ್ರದ ಸಮಸ್ಯೆ.

**– ಶ್ರೀ ಎಸ್.ಆರ್. ಬೊಮ್ಮಾಯಿ**

"ಎಂ.ಎನ್. ರಾಯ್ ಪಾರ್ಟಿಗಳಿಲ್ಲದ ಡೆಮಾಕ್ರಸಿಯ ಕನಸನ್ನು ಕಂಡರು. ನಾನು ಸಾಮಾಜಿಕ ಜವಾಬ್ದಾರಿಯಿರುವ, ಇಡೀ ಸಮಾಜವನ್ನು ಮೇಲೆತ್ತುವ ಸರ್ವೋದಯದ ಕಲ್ಪನೆಯನ್ನು ಇಟ್ಟುಕೊಂಡಿದ್ದೇನೆ. ಈ ಕಲ್ಪನೆ ಪ್ರತಿಯೊಬ್ಬರ ಕಲ್ಪನೆಯಾಗಬೇಕು. ಉತ್ತಮ ಶಿಕ್ಷಣ ವ್ಯವಸ್ಥೆಯಿಂದ ಅಂಥ ಅರಿವು ಮೂಡುತ್ತದೆ. ನಾನು ಆಶಾವಾದಿ".

– ಎಸ್.ಆರ್. ಬೊಮ್ಮಾಯಿ



ಬೆಳಗಾವಿಯಲ್ಲಿ ಕಾನೂನು ವಿದ್ಯಾರ್ಥಿಯಾದಾಗ ಚಿಂತಕ ಎಂ.ಎನ್. ರಾಯ್ ದಂಪತಿ ಜೊತೆ
(ನಿಂತಿರುವ ಸಾಲಿನಲ್ಲಿ ಐದನೆಯವರು ಬೊಮ್ಮಾಯಿ. ಕುಳಿತಿರುವ ಸಾಲಿನಲ್ಲಿ
ಮೂರನೆಯವರು ಎಂ.ಎನ್. ರಾಯ್)



ಪ್ರಧಾನಿ ಮುರಾರ್ಜಿ ದಂಪತಿಗೆ ಹುಬ್ಬಳ್ಳಿಯ ಸ್ವಗೃಹದಲ್ಲಿ ಔತಣ



ಬರ ಪರಿಹಾರ ನಿಧಿ ಸಂಗ್ರಹ ಯಾತ್ರೆಯಲ್ಲಿ ನಟಿಯರಾದ
ಪಂಡರೀಬಾಯಿ ಮತ್ತು ಚಿತ್ರಾ ಅವರೊಂದಿಗೆ



ಸಮಾರಂಭದಲ್ಲಿ ಸಚಿವ ಕೆ.ಹೆಚ್. ರಂಗನಾಥ್ ಜೊತೆ



ಹುಬ್ಬಳ್ಳಿಯ ವಕೀಲರೊಂದಿಗೆ



ಕುಂದಗೋಳದ ಸಮಾರಂಭವೊಂದರಲ್ಲಿ



ಬಿ.ಜೆ.ಪಿ. ಧುರೀಣರಾದ ಎಲ್.ಕೆ. ಅಡ್ವಾಣಿ ಮತ್ತು ಎ.ಬಿ. ವಾಜಪೇಯಿ ಜೊತೆ



ವರನಟ ಡಾ॥ ರಾಜ್ ಕುಮಾರ್ ಜೊತೆ



ರಾಷ್ಟ್ರಪತಿ ವೆಂಕಟರಾಮನ್ ಅವರೊಡನೆ



ಪ್ರಧಾನಿ ರಾಜೀವ್ ರಾಜ್ಯದ ಬರಪರಿಹಾರ ಕಾಮಗಾರಿ ವೀಕ್ಷಿಸಲು ಬಂದಾಗ
ರಾಜ್ಯ ಕಂದಾಯ ಸಚಿವರಾಗಿ ಪರಿಸ್ಥಿತಿ ವಿವರಣೆ



ಕ್ರಿಕೆಟ್ ತಾರೆಯರಾದ ಕೆ. ಶ್ರೀಕಾಂತ್ ಮತ್ತು ದಿಲೀಪ್ ವೆಂಗ್‌ಸರ್ಕರ್
ಅವರಿಗೆ ಅಭಿನಂದನೆ



ಸಚಿವ ಅಬ್ದುಲ್ ನಜೀರ್ ಸಾಬ್ ಅವರ ಆರೋಗ್ಯ ವಿಚಾರಣೆ



ಶ್ರೀ ಸುತ್ತೂರು ಶ್ರೀಗಳಿಂದ ಆಶೀರ್ವಚನ ಸ್ವೀಕಾರ



ರಾಜಭವನದ ಚಹಾಕೂಟದಲ್ಲಿ ಮಾಜಿ ಮುಖ್ಯಮಂತ್ರಿ ಆರ್. ಗುಂಡೂರಾವ್ ಜೊತೆ



ಹುಬ್ಬಳ್ಳಿಯ ಕಾರ್ಮಿಕ ಧುರೀಣ ಎ.ಜೆ. ಮುಧೋಳ್ ಅವರ ಜೊತೆ



ರಾಜಕೀಯ ಸಹವರ್ತಿ ರಾಮಕೃಷ್ಣ ಹೆಗಡೆ ಅವರೊಂದಿಗೆ

# ಜನನಾಯಕ



ಶ್ರೀ ಸೋಮಪ್ಪ ರಾಯಪ್ಪ ಬೊಮ್ಮಾಯಿಯವರು ಕರ್ನಾಟಕದ
ಮುಖ್ಯಮಂತ್ರಿಗಳಾಗಿ ಪ್ರಮಾಣ ವಚನ



ವಿಜಯೋತ್ಸವ



ಶ್ರೀ ಆರ್. ಜಾಲಪ್ಪ ಮತ್ತು ಶ್ರೀ ಜೆ.ಹೆಚ್. ಪಟೇಲ್ ಅವರೊಂದಿಗೆ



ಶಿಕ್ಷಣ ಸಚಿವ ಗೋವಿಂದೇಗೌಡ ಅವರೊಂದಿಗೆ

# ರಾಷ್ಟ್ರ ನಾಯಕರಾಗಿ



ಕಾಂಗ್ರೆಸ್ಸೇತರ ಮುಖ್ಯಮಂತ್ರಿಗಳ ಸಮಾವೇಶದಲ್ಲಿ: ಪ್ರಫುಲ್ಲ ಕುಮಾರ್ ಮಹಂತ, ಎನ್.ಟಿ. ರಾಮರಾವ್, ಇ.ಕೆ. ನಯನಾರ್, ದೇವಿಲಾಲ್, ಜ್ಯೋತಿಬಸು



ಪ್ರಧಾನಿ ರಾಜೀವ್ ಜೊತೆ ಸಂತಸದ ಕ್ಷಣ



ಜನತಾ ಪಕ್ಷದ ರಾಷ್ಟ್ರೀಯ ಅಧ್ಯಕ್ಷ ಚಂದ್ರಶೇಖರ್ ಅವರೊಂದಿಗೆ



ಜನತಾ ದಳದ ಮೊದಲ ಸಮಾವೇಶದಲ್ಲಿ ವಿ.ಪಿ. ಸಿಂಗ್‌ಗೆ ಸತ್ಕಾರ



ಜನತಾ ದಳದ ಮೊದಲ ಸಮಾವೇಶದಲ್ಲಿ ವಿ.ಪಿ. ಸಿಂಗ್ ಮತ್ತು ಜಾರ್ಜ್ ಫರ್ನಾಂಡೀಸ್ ಜೊತೆ



ಶ್ರೀ ಲಾಲೂ ಪ್ರಸಾದ್ ಯಾದವ್ ಜೊತೆ



ರಾಜಕೀಯ ಸಹವರ್ತಿ ದೇವೇಗೌಡರ ಜೊತೆ



ಮಾನವ ಸಂಪನ್ಮೂಲ ಸಚಿವರಾಗಿ ದೆಹಲಿ ಐ.ಐ.ಟಿ. ಘಟಕೋತ್ಸವದಲ್ಲಿ



ಮಾನವ ಸಂಪನ್ಮೂಲನ ಸಚಿವರಿಗೆ ವಿಜ್ಞಾನಿ ಯು.ಆರ್. ರಾವ್
ಅವರಿಂದ ಯೋಜನೆಯೊಂದರ ಕುರಿತು ವಿವರಣೆ



ರಾಷ್ಟ್ರಪತಿ ಶಂಕರ್‌ದಯಾಳ್ ಶರ್ಮಾ ಅವರಿಂದ ಜನ್ಮದಿನದ ಸಂತಸ ಹಂಚಿಕೆ

# ಬೊಮ್ಮಾಯಿ ಕುಟುಂಬ



ಪತ್ನಿ ಶ್ರೀಮತಿ ಗಂಗಮ್ಮ ಬೊಮ್ಮಾಯಿ



ಬೊಮ್ಮಾಯಿ ಕುಟುಂಬ



ಬೊಮ್ಮಾಯಿ ಕುಟುಂಬ



ಚೀನಾ ಮಹಾಗೋಡೆಯ ಸಮೀಪ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20–00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15–00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20–00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15–00 |

